


₹875

# ಆಂಗ್ಲ ಭಾಷೆಯಲ್ಲಿ ಸುಮಾರು ಎರಡು ಲಕ್ಷ ಪ್ರತಿ ಮಾರಾಟವಾದ ಕೃತಿ ಇದೀಗ ಕನ್ನಡದಲ್ಲಿ ಲಭ್ಯ

## ಸಮಕಾಲೀನ ಭಾರತ ಕುರಿತು ಒಂದು ಪರಿಪೂರ್ಣ ಮತ್ತು ವಸ್ತುನಿಷ್ಠ ಪರಿಚಯ

ವಿಶ್ವದ ಅತ್ಯಂತ ಬೃಹತ್ ಪ್ರಜಾಪ್ರಭುತ್ವವೆನಿಸಿದ ಭಾರತದ ಪ್ರಗತಿಯ ಕತೆ ಸಮೃದ್ಧ ಮತ್ತು ಪ್ರೇರಣಾತ್ಮಕವಾಗಿದೆ. ಬಿಪಿನ್‌ಚಂದ್ರ ಮತ್ತು ಸಹಲೇಖಕರ 'ಸ್ವಾತಂತ್ರ್ಯಕ್ಕಾಗಿ ಭಾರತದ ಹೋರಾಟ' ಗ್ರಂಥದ ಮುಂದುವರಿದ ಭಾಗವಾಗಿರುವ ಈ ಸಂಪುಟ ಭಾರತ ಎದುರಿಸಿದ ಸವಾಲುಗಳನ್ನು ಹಾಗೂ ಅದು ಸಾಧಿಸಿದ ಯಶಸ್ಸುಗಳನ್ನು ವಸಾಹತುಶಾಹಿ ಪರಂಪರೆ ಮತ್ತು ಒಂದು ಶತಮಾನದವರೆಗೆ ನಡೆದ ಸ್ವಾತಂತ್ರ್ಯ ಹೋರಾಟದ ಬೆಳಕಿನಲ್ಲಿ ವಿಶ್ಲೇಷಿಸುತ್ತದೆ.

ಈ ಗ್ರಂಥ ಸಂವಿಧಾನ ಹೇಗೆ ರಚಿಸಲ್ಪಟ್ಟಿತು ಹಾಗೂ ನೆಹರುವಾದಿ ರಾಜಕೀಯ, ಆರ್ಥಿಕ ಕಾರ್ಯಕ್ರಮ ಮತ್ತು ವಿದೇಶಾಂಗ ನೀತಿ ಹೇಗೆ ವಿಕಸಿಸಲ್ಪಟ್ಟಿತು ಹಾಗೂ ಅಭಿವೃದ್ಧಿಪಡಿಸಲ್ಪಟ್ಟಿತು ಎಂಬುದನ್ನು ವಿವರಿಸುತ್ತದೆ. ಇದು ರಾಷ್ಟ್ರದ ಸದೃಢೀಕರಣ ಹಂತಗಳು, ಕೇಂದ್ರ ಮತ್ತು ರಾಜ್ಯಗಳಲ್ಲಿ ಪಕ್ಷ ರಾಜಕೀಯ, ಪಂಜಾಬ್ ಸಮಸ್ಯೆ, ಜಾತಿ ವಿರೋಧಿ ರಾಜಕಾರಣ ಮತ್ತು ಅಸ್ಪೃಶ್ಯತೆಯನ್ನು ಪರಾಮರ್ಶಿಸುತ್ತದೆ.

ಭಾರತದಲ್ಲಿ ಕೋಮುವಾದದ ಬೆಳವಣಿಗೆ ಹಾಗೂ ಅದನ್ನು ಪ್ರಚ್ಛನ್ನಗೊಳಿಸುವಲ್ಲಿ ರಾಜ್ಯಾಧಿಕಾರದ ಬಳಕೆಯನ್ನು ಈ ಗ್ರಂಥ ವಿಶ್ಲೇಷಿಸುತ್ತದೆ. ಇದು 2004ರ ಸಾರ್ವತ್ರಿಕ ಚುನಾವಣೆಗಳಲ್ಲಿ ರಾಷ್ಟ್ರೀಯ ಪ್ರಜಾಪ್ರಭುತ್ವ ಮೈತ್ರಿಕೂಟದ ಪತನದ ಪರಿಣಾಮವಾಗಿ ಸಂಯುಕ್ತ ಪ್ರಗತಿಪರ ಮೈತ್ರಿಕೂಟದ ಉದಯ ಹಾಗೂ ನಂತರದ ರಾಜಕೀಯ ವಿದ್ಯಮಾನಗಳ ಕುರಿತು ವಿವರಿಸುತ್ತದೆ.

ಈ ಗ್ರಂಥ 1991ರಿಂದೀಚೆಯ ಭಾರತೀಯ ಆರ್ಥಿಕ ಸುಧಾರಣೆಗಳು ಹಾಗೂ ವಿಸ್ತೃತ ಭೂಸುಧಾರಣೆಗಳು, ಮತ್ತು ಹಸಿರು ಕ್ರಾಂತಿಯಲ್ಲದೇ, ಹೊಸ ಸಹಸ್ರಮಾನದಲ್ಲಿ ಭಾರತೀಯ ಅರ್ಥವ್ಯವಸ್ಥೆಯ ಸಾಧನೆಗಳು ಮತ್ತು ವೈಫಲ್ಯಗಳ ಮೌಲ್ಯಮಾಪನ ಮಾಡುತ್ತದೆ. ಅದರೊಂದಿಗೆ ಜವಾಹರ್‌ಲಾಲ್ ನೆಹರು, ಲಾಲ್ ಬಹಾದ್ದೂರ್ ಶಾಸ್ತ್ರಿ, ಇಂದಿರಾ ಗಾಂಧಿ, ಜಯಪ್ರಕಾಶ್ ನಾರಾಯಣ್, ರಾಜೀವ್ ಗಾಂಧಿ, ವಿಶ್ವನಾಥ ಪ್ರತಾಪ್ ಸಿಂಗ್, ಅಟಲ್ ಬಿಹಾರಿ ವಾಜಪೇಯಿ ಮತ್ತು ಮನ್‌ಮೋಹನ್ ಸಿಂಗ್ ವ್ಯಕ್ತಿತ್ವಗಳನ್ನು ವಸ್ತುನಿಷ್ಠವಾಗಿ ಪರಿಚಯಿಸುತ್ತ ಪ್ರಗತಿಪಥದಲ್ಲಿರುವ ದೇಶವೊಂದರ ಸಂಚಲನೆ ಕುರಿತು ಗಣನೀಯ ಮೇಲ್ನೋಟವೊಂದನ್ನು ಒದಗಿಸುತ್ತದೆ.

### ಮೂಲ ಗ್ರಂಥದ ಕುರಿತು ತಜ್ಞರ ಅಭಿಪ್ರಾಯಗಳು...

"ಒಂದು ಉತ್ಕೃಷ್ಟ ಗ್ರಂಥ... ಈ ವಿಷಯ ವಸ್ತುವುಳ್ಳ ಗ್ರಂಥಗಳಲ್ಲೆಲ್ಲ ಅತ್ಯುತ್ತಮವಾಗಿದೆ. ಇದು ಕಳೆದ ಐವತ್ತು ವರ್ಷಗಳಲ್ಲಿ ಭಾರತದ ರಾಜಕೀಯ ಮತ್ತು ಆರ್ಥಿಕ ಬೆಳವಣಿಗೆಗಳ ವೈಜ್ಞಾನಿಕ ಅವಲೋಕನವಾಗಿದೆ."

– ಪ್ರೊ॥ ಅತುಲ್ ಕೋಹ್ಲಿ

ಪ್ರೊಫೆಸರ್, ರಾಜನೀತಿ ವಿಜ್ಞಾನ ಮತ್ತು ಅಂತಾರಾಷ್ಟ್ರೀಯ ವಿದ್ಯಮಾನಗಳು ಪ್ರಿನ್ಸ್‌ಟನ್ ವಿಶ್ವವಿದ್ಯಾಲಯ, ಅಮೆರಿಕ ಸಂಯುಕ್ತ ಸಂಸ್ಥಾನ

"ಸ್ವಾತಂತ್ರ್ಯೋತ್ತರ ಭಾರತೀಯ ಇತಿಹಾಸದ ಒಂದು ಪರಿಚಯ ಗ್ರಂಥವಾಗಿ ತುಲನಾತೀತವಾಗಿದೆ."

– ಎಂ. ವಿ. ಕಾಮತ್, ವಿಖ್ಯಾತ ಪತ್ರಕರ್ತ

"ಈ ಗ್ರಂಥ ಸಮಕಾಲೀನ ಇತಿಹಾಸ ಕುರಿತು ಕಂಡುಬಂದ ಪ್ರಮುಖ ಸಾಹಿತ್ಯಿಕ ಆಖಾತವೊಂದನ್ನು ಇಲ್ಲವಾಗಿಸಿದೆ. ಇದು ಸಾಮಾನ್ಯವಾಗಿ ಸಾರ್ವಜನಿಕರು, ವಿಶೇಷವಾಗಿ ಇತಿಹಾಸ, ಅರ್ಥಶಾಸ್ತ್ರ, ಸಮಾಜಶಾಸ್ತ್ರ ಮತ್ತು ರಾಜನೀತಿವಿಜ್ಞಾನ ವಿದ್ಯಾರ್ಥಿಗಳು ಓದಲೇಬೇಕಾದ ಗ್ರಂಥವಾಗಿದೆ."

– ದಿ ಟ್ರಿಬ್ಯೂನ್

"ಒಂದು ವಿಸ್ತೃತ ಸಂಪುಟ. ಈ ವಿದ್ವಾಂಸರು ಅತ್ಯಂತ ಕಷ್ಟಪ್ರದಾಯಕ ಮತ್ತು ಸವಾಲುಭರಿತ ಕತೆಯೊಂದನ್ನು ಪ್ರಸ್ತುತಪಡಿಸುವಲ್ಲಿ ಯಶಸ್ವಿಯಾಗಿದ್ದಾರೆ."

– ಸಿ. ಪಿ. ಭಾಂಬ್ರಿ, ನಿವೃತ್ತ ಪ್ರೊಫೆಸರ್, ರಾಜನೀತಿ ವಿಜ್ಞಾನ ಮತ್ತು ಪ್ರಖ್ಯಾತ ವಿದ್ವಾಂಸ, ಜವಾಹರ್‌ಲಾಲ್ ನೆಹರು ವಿಶ್ವವಿದ್ಯಾಲಯ, ನವದೆಹಲಿ

ಮೂರು ವರ್ಷದ 'ಹೊಸತು' ಚಂದಾದಾರರಿಗೆ 20% ಸೋಡಿ. ಇತರರಿಗೆ 10% ಸೋಡಿ. ಅಂಚೆ ವೆಚ್ಚ ಉಚಿತ.

ಹಣವನ್ನು ಡಿ.ಡಿ., ಎಂ.ಓ. ಮೂಲಕ ಕಳಿಸಿ ಅಥವಾ ನಮ್ಮ ಪುಸ್ತಕ ಮಳಿಗೆಗೆ ಭೇಟಿ ನೀಡಿ

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ ಬೆಂಗಳೂರು – 560 001. ಫೋನ್ : 080-22161900/14 ಮೊಬೈಲ್ : 9480686858
e-mail : navakarnataka@gmail.com http://navakarnataka.blogspot.in

ಆನ್‌ಲೈನ್ ಮೂಲಕವೂ ಲಭ್ಯ  Shop Online www.navakarnataka.com

ಶಾಖೆಗಳು : ಬೆಂಗಳೂರು ✆ 22203106 :: ಮಂಗಳೂರು ✆ 2441016 ✆ 2425161 :: ಮೈಸೂರು ✆ 2424094 :: ಕಲಬುರಗಿ ✆ 224302

# ಹೊಸತು

ನೆಮ್ಮದಿಯ ನಾಳೆ ನಮ್ಮದು








**ಚಿತ್ರಗಳು :** ಕಮಲಂ ಅರಸು, ವಿ. ಗೋಪಾಲ್, ಎನ್. ಆರ್. ಹೆಗಡೆ, ಜಿ. ಎಂ. ಬೊಮ್ನಳ್ಳಿ, ಆದರ್ಶ ಪೈ, ಗೋಪಿ ಹಿರೇಬೆಟ್ಟು

**ಮುಖಪುಟ :** ದಾಸವಾಳದ ಹೂ (ಚಿತ್ರಕೃಪೆ – ಕಿಶೋರ್ ಉಡುಪ)

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ರಾಜಕೀಯದ ಧ್ರುವೀಕರಣ ಒಂದು ಕಡೆಯಾದರೆ, ರಾಜಕೀಯದ ಅಪರಾಧೀಕರಣ ಇನ್ನೊಂದು ಕಡೆ. ಇದು ಪ್ರತಿ ಚುನಾವಣೆಯ ಸಂದರ್ಭದಲ್ಲೂ ಕಂಡುಬರುವಂಥದೆ. ಶುದ್ಧ ರಾಜಕಾರಣ ಎನ್ನುವುದು ಎಂದೋ ಅದೃಶ್ಯವಾಗಿದೆ. ಆರೋಪ ಪ್ರತ್ಯಾರೋಪಗಳು, ತೋಳ್ಬಲ, ಧನಬಲ ಇವುಗಳೇ ಮುಂದಾಗಿವೆ. ಆರೋಪ ಸಾಬೀತಾಗುವವರೆಗೆ ಆರೋಪಿ ಅಪರಾಧಿಯಲ್ಲ ಕಾನೂನಿನ ದೃಷ್ಟಿಯಲ್ಲಿ. ಹಾಗಾಗಿ ಚುನಾವಣೆಯಲ್ಲಿ ಸ್ಪರ್ಧಿಸಲು, ಜಯಗಳಿಸಲು ಅಡ್ಡಿಯಿಲ್ಲ. ಕಳೆದ ಲೋಕಸಭೆ ಸದಸ್ಯರುಗಳಲ್ಲಿ ಹೆಚ್ಚು ಕಡಿಮೆ ನೂರಕ್ಕೂ ಹೆಚ್ಚು ಮಂದಿ ಗಂಭೀರವಾದ ಆರೋಪವನ್ನು ಹೊತ್ತಿರುವವರಿದ್ದರು. ಸಂಖ್ಯೆ ೧೩೧ ಎಂದು ನೆನಪು. ಈ ಸಲದ ಚುನಾವಣೆಗಳಲ್ಲಿ ಸ್ಪರ್ಧಿಸಿರುವವರ ಪಟ್ಟಿಯನ್ನು ಪರಾಮರ್ಶಿಸಿದರೆ ಗಂಭೀರವಾದ ಆರೋಪಗಳನ್ನು, ವಿವಿಧ ನ್ಯಾಯಾಲಯಗಳಲ್ಲಿ ಮೊಕದ್ದಮೆಯನ್ನು, ಎದುರಿಸುತ್ತಿರುವವರ ಸಂಖ್ಯೆ ಕಡಿಮೆ ಏನಲ್ಲ. ಎಲ್ಲ ಪಕ್ಷಗಳವರೂ ಇದ್ದಾರೆ. ಅದರಲ್ಲೂ ಆಡಳಿತದಲ್ಲಿರುವ ಭಾಜಪ ಉಮೇದುವಾರರದೆ ಮೇಲುಗೈ. ಹೆಚ್ಚು ವಿವಾದಕ್ಕೆ ಎಡೆಕೊಟ್ಟು, ಮಾಧ್ಯಮಗಳಲ್ಲಿ ಚರ್ಚೆಗೀಡಾಗಿರುವುದು ಮಧ್ಯಪ್ರದೇಶದ ಭೋಪಾಲ್ ಕ್ಷೇತ್ರದಿಂದ ಸ್ಪರ್ಧಿಸಿರುವ ಸಾಧ್ವಿ ಪ್ರಜ್ಞಾ ಸಿಂಗ್ ಠಾಕೂರ್. ಈ ಸಾಧ್ವೀಮಣಿ ಮಾಲೆಗಾಂವ್ ಸ್ಫೋಟ ಪ್ರಕರಣದಲ್ಲಿ ಮುಖ್ಯ ಆರೋಪಿ. ಕಾರಾಗೃಹವಾಸಿಯಾಗಿದ್ದ ಈಕೆ ಸದ್ಯಕ್ಕೆ ಭಾಜಪ ಅಧಿಕಾರಕ್ಕೆ ಬಂದ ಮೇಲೆ ದೋಷಮುಕ್ತಳಾಗಿ ಬಿಡುಗಡೆಯಾಗಿದ್ದಾರೆ ಮ್ಯಾಜಿಸ್ಟ್ರೇಟ್ ಕೋರ್ಟ್‌ನ ತೀರ್ಪಿನ ಪ್ರಕಾರ. ಇನ್ನೂ ಮೇಲಿನ ಕೋರ್ಟುಗಳ ಅಪೀಲು ಬಾಕಿ ಇದೆ. ಅಷ್ಟರಲ್ಲಿ ಈಕೆ ಭಾಜಪದ ಪಾರ್ಲಿಮೆಂಟರಿ ಅಭ್ಯರ್ಥಿ. ಈಕೆ ಹಿಂದುತ್ವದ ಉಗ್ರಪ್ರತಿಪಾದಕಿ, ಹೇಳಿಕೇಳಿ ಸಾಧ್ವೀಮಣಿ ಬೇರೆ. ವಿವಾದಾತ್ಮಕ ಹೇಳಿಕೆಗಳಿಗೆ ಪ್ರಸಿದ್ಧಿ. ಈಚಿನ ಹೇಳಿಕೆ ಇಲ್ಲಿ ಉಲ್ಲೇಖಾರ್ಹ. "ಮುಂಬೈ ದಾಳಿಯಲ್ಲಿ ಉಗ್ರರ ಗುಂಡಿಗೆ ಬಲಿಯಾದ ಹೇಮಂತ ಕರ್ಕರೆ ಅವರ ಸಾವಿಗೆ ನನ್ನ ಶಾಪವೇ ಕಾರಣ." ಪೊಲೀಸು ಅಧಿಕಾರಿ ಕರ್ಕರೆ "ಹಿಂದೂ ಭಯೋತ್ಪಾದನೆ" ತನಿಖೆ ನಡೆಸಿ ಸಾಧ್ವಿಯನ್ನು ಪ್ರಧಾನ ಆರೋಪಿಯನ್ನಾಗಿ ಮಾಡಿದ್ದರು. 'ಬಾಬರಿ ಮಸೀದಿ ಕೆಡವಿದ ಕೆಲಸದಲ್ಲಿ ನಾನು ಭಾಗಿಯಾಗಿದ್ದೆ. ಆ ಬಗ್ಗೆ ಹೆಮ್ಮೆ ಇದೆ!' ಚುನಾವಣಾ ಆಯೋಗ ಅವರ ಇಂಥ ಹೇಳಿಕೆಗಳಿಗಾಗಿ ಮೂರು ದಿನಗಳು ಪ್ರಚಾರ ನಿಷೇಧ ಶಿಕ್ಷೆ ವಿಧಿಸಿತ್ತು. ಇಂಥವರು ಆಯ್ಕೆಯಾಗಬೇಕೇ?

✴ ✴ ✴

'ಫಣಿ' ನಾಮಾಂಕಿತ ಚಂಡಮಾರುತ ಒಡಿಶ, ಪಶ್ಚಿಮ ಬಂಗಾಳ, ಬಂಗ್ಲಾದೇಶ ಮುಂತಾದ ಕಡೆಗಳಲ್ಲಿ ಸಾಕಷ್ಟು ಹಾನಿ ಉಂಟುಮಾಡಿದೆ. ಸತತವಾದ ಮಳೆ, ಪ್ರವಾಹ, ಬೀಸಿದ ಬಿರುಗಾಳಿಗೆ ಉರುಳಿದ ಮರಗಳು, ಇವುಗಳಿಂದಾಗಿ ಲಕ್ಷಾಂತರ ಮಂದಿ ವಸತಿ ಹೀನರಾಗಿದ್ದಾರೆ. ಸಾವಿರಾರು ಗ್ರಾಮಗಳು ಜಲಾವೃತವಾಗಿವೆ. ಹಲವು ಮಂದಿ ಅಸುನೀಗಿದ್ದಾರೆ. ಸಂತ್ರಸ್ತರಿಗೆ ಸಾಂತ್ವನ ಸೂಚಿಸುವುದು ನಮ್ಮ ಆದ್ಯ ಕರ್ತವ್ಯ. ಪ್ರಕೃತಿ ವಿಕೋಪ ಯಾವಾಗ ಎಲ್ಲಿ ಸಂಭವಿಸುತ್ತದೆ ಎನ್ನುವುದು ಊಹಾತೀತ. ಒಡಿಶ ವಿಪರೀತ ಹಾನಿಗೀಡಾಗಿರುವ ಪ್ರದೇಶ. ಸುಮಾರು ಹನ್ನೆರಡು ಲಕ್ಷ ಮಂದಿ ನಿರಾಶ್ರಿತರಾಗಿದ್ದಾರೆ ಮತ್ತು ೧೦,೦೦೦ ಗ್ರಾಮಗಳು ಪ್ರವಾಹದಲ್ಲಿ ಕೊಚ್ಚಿ ಹೋಗಿವೆ. ಮುಂಜಾಗ್ರತೆ ಕ್ರಮಗಳನ್ನು ಕೈಗೊಂಡರೂ ಹಾನಿ ತಪ್ಪದು. ಮಳೆಗಾಲ ಬಂತೆಂದರೆ ಪ್ರವಾಹ, ಇಲ್ಲದಿದ್ದರೆ ಬರ. ಇದು ಭಾರತದಲ್ಲಿ ಅನೇಕ ಕಡೆಗಳಲ್ಲಿ ಪ್ರತಿ ವರ್ಷವೂ ಸಂಭವಿಸುವ ಅನಾಹುತ. ಪ್ರಕೃತಿ ವಿಕೋಪ ತಡೆಯುವುದಂತೂ ಸಾಧ್ಯವಿಲ್ಲ. ಅದು ಭೂಕಂಪನವಾಗಲಿ, ಚಂಡಮಾರುತವಾಗಲಿ. ಆದರೆ ಸರಕಾರಗಳು ಸೂಕ್ತ ಸಮಯದಲ್ಲಿ ಅಗತ್ಯವಾದ ಕ್ರಮಗಳನ್ನು ಕೈಗೊಂಡರೆ ಆಗುವ ಅನಾಹುತವನ್ನು ಕಡಿಮೆ ಮಾಡಬಹುದು. ಅದು ಕೆರೆಕಟ್ಟೆಗಳ, ಚರಂಡಿಗಳ ಹೂಳೆತ್ತುವುದರಿಂದ ಹಿಡಿದು ಮುನ್ನೆಚ್ಚರಿಕೆ


(೮ನೇ ಪುಟಕ್ಕೆ)



# ಸಂಪಾದಕೀಯ




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೨೦ ಸಂಚಿಕೆ-೧೧ ಜೂನ್ ೨೦೧೯

■ ***ಗೌರವ ಸಂಪಾದಕ***

ಜಿ. ರಾಮಕೃಷ್ಣ

■ ***ಸಂಪಾದಕ-ಮುದ್ರಕ-ಪ್ರಕಾಶಕ***

ಸಿದ್ದನಗೌಡ ಪಾಟೀಲ

■ ***ಸಹಸಂಪಾದಕರು***

ಎಂ. ಅಬ್ದುಲ್ ರೆಹಮಾನ್ ಪಾಷ

ಇಂದಿರಾ ಕುಮಾರಿ

ಸಿ. ಆರ್. ಕೃಷ್ಣರಾವ್

ಎನ್. ಗಾಯತ್ರಿ

ಎಸ್. ಸುರೇಂದ್ರ

■ ***ವ್ಯವಸ್ಥಾಪಕ***

ಎ. ರಮೇಶ ಉಡುಪ

■ ***ಮುದ್ರಣ***

**ಶ್ರೀ ವಿನಾಯಕ ಪ್ರಿಂಟರ್ಸ್**

೭೩೮/೧೦, ೬೦ನೇ ಅಡ್ಡರಸ್ತೆ

೫ನೇ ಬ್ಲಾಕ್, ರಾಜಾಜಿನಗರ

ಬೆಂಗಳೂರು - ೫೬೦ ೦೧೦

■ ***ಹೊಸತು ಕಚೇರಿಯ ವಿಳಾಸ***




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**

೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯

ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧

ದೂರವಾಣಿ : ೨೨೧೬೯೧೧, ೨೨೧೬೯೧೨

**e-mail : navakarnataka@gmail.com**

**hosathu@gmail.com**

**hosathu.nkp@gmail.com**

**URL : www.navakarnataka.com**

**http : //navakarnataka.blogspot.in**

**http : //hosathumonthly.blogspot.in**


## ಶಿಕ್ಷಣ ಕ್ಷೇತ್ರದ ಹುಸಿ ನಂಬಿಕೆಗಳು

**ಸಾ**ಮಾನ್ಯವಾಗಿ ಪ್ರತಿ ವರ್ಷದ ಮೇ ತಿಂಗಳು ಶಿಕ್ಷಣ ಕ್ಷೇತ್ರದ ಪ್ರಮುಖ ಘಟ್ಟವಾದ ಎಸ್‌ಎಸ್‌ಎಲ್‌ಸಿ ಮತ್ತು ಪಿಯುಸಿ ಪರೀಕ್ಷೆಗಳ ಫಲಿತಾಂಶದ ಸಮಯ, ಅದರಲ್ಲೂ ಎಸ್‌ಎಸ್‌ಎಲ್‌ಸಿ ವಿದ್ಯಾರ್ಥಿಗಳ ಬದುಕಿನಲ್ಲಿ ಮಹತ್ವದ ತಿರುವು ನೀಡುವ ಹಂತ. ಶಿಕ್ಷಣ ಯಾವುದೇ ದೇಶದ ಭವಿಷ್ಯವನ್ನು ನಿರ್ಧರಿಸುವ ಕ್ಷೇತ್ರ. ಸರಕಾರಗಳು, ಪಾಲಕರು, ಶಿಕ್ಷಣ ಸಂಸ್ಥೆಗಳು ಅತ್ಯಂತ ಕಾಳಜಿ ವಹಿಸಬೇಕಾದ ಕ್ಷೇತ್ರವಿದು. ಆದರೆ ಕಳೆದ ಹಲವಾರು ವರ್ಷಗಳಿಂದ ಉಳಿದ ಕ್ಷೇತ್ರಗಳಂತೆ ಶಿಕ್ಷಣ ಕ್ಷೇತ್ರವೂ ಖಾಸಗೀಕರಣದ ದಾಳಿಗೆ ತನ್ಮೂಲಕ ವ್ಯಾಪಾರೀಕರಣಕ್ಕೆ ಒಳಗಾಗಿದೆ. ಇಂಥ ಸಂದರ್ಭದಲ್ಲಿ ಪಾಲಕರಲ್ಲಿ ಮತ್ತು ಮಕ್ಕಳಲ್ಲಿ ಶಿಕ್ಷಣ ವ್ಯವಸ್ಥೆ ಕುರಿತ ಹಲವಾರು ಹುಸಿನಂಬಿಕೆಗಳು ವ್ಯಾಪಕವಾಗಿ ಬೆಳೆದಿವೆ. ಇಂಗ್ಲಿಷ್ ಮಾಧ್ಯಮದಲ್ಲಿ ಓದಿದರೆ ಮಕ್ಕಳು ಜಾಣರಾಗುತ್ತಾರೆ ಮತ್ತು ಅವರಿಗೆ ಭವಿಷ್ಯವಿದೆ, ದೊಡ್ಡ ಮಟ್ಟದ ರಾಷ್ಟ್ರೀಯ, ಅಂತರರಾಷ್ಟ್ರೀಯ ಖ್ಯಾತಿ ಪಡೆದ ಶಾಲೆಗಳು ಮಕ್ಕಳಿಗೆ ಗುಣಮಟ್ಟದ ಶಿಕ್ಷಣ ಒದಗಿಸುತ್ತವೆ, ಟ್ಯೂಶನ್ ಕೊಡಿಸಿದರೆ ಮಕ್ಕಳ ಕಲಿಕೆಯ ಗುಣಮಟ್ಟ ಹೆಚ್ಚುತ್ತದೆ, ನಗರದಲ್ಲಿ ಓದಿಸಿದರೆ ಮಕ್ಕಳು ಜಾಣರಾಗುತ್ತಾರೆ, ಹೆಣ್ಣುಮಕ್ಕಳಿಗಿಂತ ಗಂಡು ಮಕ್ಕಳಿಗೆ ಶಿಕ್ಷಣ ಹೆಚ್ಚು ಅವಶ್ಯಕ, ಸರಕಾರಿ ಶಾಲೆಗಳು ಕುರಿದೊಡ್ಡಿಗಳು, ಡೊನೇಶನ್ ಕೊಟ್ಟರೂ ಪರವಾಗಿಲ್ಲ ಖಾಸಗಿ ಶಾಲೆಗಳು ಉತ್ತಮ – ಹೀಗೆ ಹಲವಾರು ನಂಬಿಕೆಗಳನ್ನು ನಮ್ಮ ಮಕ್ಕಳ ಪಾಲಕರು ಮತ್ತು ಸಮಾಜ ಸಾಮಾನ್ಯವಾಗಿ ಹೊಂದಿದೆ. ಆದರೆ ಈ ಎಲ್ಲ ನಂಬಿಕೆಗಳು ಸತ್ಯವಲ್ಲ ಎಂಬುದನ್ನು ಎಸ್‌ಎಸ್‌ಎಲ್‌ಸಿ ಪರೀಕ್ಷಾ ಫಲಿತಾಂಶಗಳು ಸಾಬೀತುಪಡಿಸುತ್ತಲೇ ಬಂದಿವೆ.

ಈ ಸಲದ ಎಸ್‌ಎಸ್‌ಎಲ್‌ಸಿ ಫಲಿತಾಂಶವನ್ನೇ ಗಮನಿಸಿದರೆ ಸರಕಾರಿ ಶಾಲೆಗಳಲ್ಲಿ ಓದಿ ಉತ್ತೀರ್ಣರಾದ ವಿದ್ಯಾರ್ಥಿಗಳು ಶೇ. ೭೭.೮೪ ಇದ್ದರೆ ಅನುದಾನಿತ ಶಾಲೆಗಳ ವಿದ್ಯಾರ್ಥಿಗಳ ಸಂಖ್ಯೆ ಶೇ. ೭೭.೨೧ ಇದೆ. ಅನುದಾನ ರಹಿತ ಶಾಲೆಗಳಲ್ಲಿ ಉತ್ತೀರ್ಣರಾದವರು ಶೇ. ೮೨.೭೨, ಅಂದರೆ ಅನುದಾನಿತ ಶಾಲೆಗಳಿಗಿಂತ ಸರಕಾರಿ ಶಾಲೆಗಳಲ್ಲಿನ ಉತ್ತೀರ್ಣರಾದ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿದೆ. ಅನುದಾನ ರಹಿತ (ಖಾಸಗಿ) ಶಾಲೆಗಳ ಮತ್ತು ಸರಕಾರಿ ಶಾಲೆಗಳ ನಡುವಿನ ಫಲಿತಾಂಶದ ವ್ಯತ್ಯಾಸ ಹೆಚ್ಚೇನಿಲ್ಲ. ಕೇವಲ ಶೇ. ೫ ಮಾತ್ರ. ಈ ಬಾರಿ ೫೯೩ ಸರಕಾರಿ ಪ್ರೌಢ ಶಾಲೆಗಳು ನೂರಕ್ಕೆ ನೂರು ಫಲಿತಾಂಶ ಪಡೆದಿವೆ ಮತ್ತು ರಾಜ್ಯದ ಯಾವುದೇ ಸರಕಾರಿ ಶಾಲೆ ಶೂನ್ಯ ಫಲಿತಾಂಶ ಪಡೆದಿಲ್ಲ ಎಂಬುದು ಗಮನಾರ್ಹ ಅಂಶ. ಇದೇ ಸಂದರ್ಭದಲ್ಲಿ ೯ ಅನುದಾನಿತ, ೩೨ ಅನುದಾನರಹಿತ ಶಾಲೆಗಳು ಶೂನ್ಯ ಫಲಿತಾಂಶ ಪಡೆದಿವೆ ಎಂಬುದು ನೋವಿನ ವಿಷಯವಾದರೂ ವಾಸ್ತವ. ಇದು ಸರಕಾರಿ ಶಾಲೆಗಳನ್ನು ಅಸಡ್ಡೆಯಿಂದ ನೋಡುವುದು ಸರಿಯಲ್ಲ ಎಂಬುದಕ್ಕೆ ಸಾಕ್ಷಿ. ಗ್ರಾಮೀಣ ಮತ್ತು ನಗರ ಶಾಲೆಗಳನ್ನು ಹೋಲಿಕೆ ಮಾಡಿದರೆ ಗ್ರಾಮೀಣ ಭಾಗದಲ್ಲಿ ಶೇ. ೭೬.೬೭ರಷ್ಟು ವಿದ್ಯಾರ್ಥಿಗಳು, ನಗರ ಪ್ರದೇಶದಲ್ಲಿ ಶೇ. ೭೦.೦೫ರಷ್ಟು ವಿದ್ಯಾರ್ಥಿಗಳು ಉತ್ತೀರ್ಣರಾಗಿದ್ದಾರೆ. ನಗರ ಪ್ರದೇಶದ ವಿದ್ಯಾರ್ಥಿಗಳ ಫಲಿತಾಂಶ ಕಡಿಮೆಯಾಗಲು ಕಾರಣ ಹುಡುಕಬೇಕು. ಗಂಡು ಮತ್ತು ಹೆಣ್ಣು ಮಕ್ಕಳ ಮಧ್ಯೆ ತಾರತಮ್ಯ ತೋರುವ ನಮ್ಮ ಸಮಾಜ ಹೆಣ್ಣು ಮಕ್ಕಳೇ ಹೆಚ್ಚಿನ ಸಂಖ್ಯೆಯಲ್ಲಿ ಉತ್ತೀರ್ಣರಾಗುತ್ತಿರುವುದನ್ನು ಗಮನಿಸಬೇಕು. ಪ್ರತಿಸಲದಂತೆ ಈ ಸಲವೂ ಹೆಣ್ಣು ಮಕ್ಕಳು ಫಲಿತಾಂಶದಲ್ಲಿ ಮೇಲುಗೈ ಪಡೆದಿದ್ದಾರೆ. ರಾಜ್ಯದಲ್ಲಿ ಎಸ್‌ಎಸ್‌ಎಲ್‌ಸಿ ಪರೀಕ್ಷೆಗೆ ಹಾಜರಾದ ೩,೮೭,೯೧೧ ಹೆಣ್ಣು ಮಕ್ಕಳಲ್ಲಿ ೩,೦೮,೭೪೯ರಷ್ಟು ಉತ್ತೀರ್ಣರಾಗಿದ್ದಾರೆ (ಶೇ. ೭೯.೫೯). ಆದರೆ ಒಟ್ಟು ಪರೀಕ್ಷೆಗೆ ಹಾಜರಾದ ೪,೩೭,೫೫೭ ಬಾಲಕರಲ್ಲಿ ಉತ್ತೀರ್ಣರಾದವರು ೨,೯೯,೫೮೭ (ಶೇ. ೬೮.೫೬). ಹೆಣ್ಣು ಮಗುವಿನ ಕುರಿತ ತಾತ್ಸಾರ ಮನೋಭಾವನೆ ಹೊಂದಿರುವ ಸ್ಥಿತಿಯನ್ನು ಬದಲಾಯಿಸಿಕೊಳ್ಳಬೇಕು. ಈ ವರ್ಷ ರಾಜ್ಯದಲ್ಲಿ ಅತಿ ಹೆಚ್ಚು ಅಂಕ ಪಡೆದ ನಾಗಾಂಜಲಿ, ಕುಸುಮಾ, ಸೃಜನಾ ಎಲ್ಲರೂ ಬಾಲಕಿಯರೇ ಎನ್ನುವುದನ್ನು ಗಮನಿಸಬೇಕು. ಶಿಕ್ಷಣ ಮಾಧ್ಯಮದ ಕುರಿತು ನಿರಂತರ ಚರ್ಚೆಯಾಗುತ್ತಿದೆ. ಈ ಸಲದ ಎಸ್‌ಎಸ್‌ಎಲ್‌ಸಿ ಫಲಿತಾಂಶ ಕೂಡ ಅದಕ್ಕೆ ಸ್ವಲ್ಪ ಇಂಬುಕೊಡುತ್ತದೆ. ಇಂಗ್ಲಿಷ್ ಮಾಧ್ಯಮದ ಶೇ. ೮೦.೮೮ ವಿದ್ಯಾರ್ಥಿಗಳು ತೇರ್ಗಡೆಯಾಗಿದ್ದರೆ, ಕನ್ನಡ ಮಾಧ್ಯಮದಲ್ಲಿ ತೇರ್ಗಡೆ ಪ್ರಮಾಣ ಶೇ. ೭೦.೧೯ ಇದೆ. ಇದರಲ್ಲಿ ಬಹುತೇಕ ಇಂಗ್ಲಿಷ್ ವಿಷಯದಲ್ಲಿ ಅನುತ್ತೀರ್ಣರಾಗಿರುತ್ತಾರೆ. ಒಟ್ಟು ತೇರ್ಗಡೆಯ ಸಂಖ್ಯೆಯನ್ನು ಗಮನಿಸಿದರೆ ಅಂಥ ವ್ಯತ್ಯಾಸವಿಲ್ಲವಾದರೂ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ಸರಿಯಾದ ಇಂಗ್ಲಿಷ್ ಭಾಷಾ ಕಲಿಕೆಯ ವ್ಯವಸ್ಥೆಯಾದರೆ ಅಂಥ ವಿದ್ಯಾರ್ಥಿಗಳು ತೇರ್ಗಡೆಯಾಗುವ ಸಂಖ್ಯೆ ಹೆಚ್ಚುತ್ತದೆ.

ರಾಜ್ಯದಲ್ಲಿ ಅತಿ ಹೆಚ್ಚು ಅಂಕ ಪಡೆದವರಲ್ಲಿ ಬಹುತೇಕರು ಟ್ಯೂಶನ್‌ಗೆ ಹೋದವರಲ್ಲ ಎಂಬುದು ಮಹತ್ವದ ಸಂಗತಿ. ಕೊಟ್ಟೂರಿನ ಕುಸುಮಾ ಎಂಬ ಬಾಲಕಿ ತಂದೆಯ ಪಂಕ್ಚರ್ ತಿದ್ದುವ ಕಾಯಕದಲ್ಲಿ ಸಹಾಯ ಮಾಡುತ್ತಲೇ ಪುಟ್ಟ ಮನೆಯ ಮಾಳಿಗೆ ಮೇಲೆ ಕುಳಿತು ಅಲ್ಲಿ ಬೀಳುವ ಬೀದಿ ದೀಪದ ಬೆಳಕಿನಲ್ಲಿ ಓದಿ ರಾಜ್ಯಕ್ಕೆ ಅತ್ಯುನ್ನತ ಶ್ರೇಣಿಯಲ್ಲಿ ಉತ್ತೀರ್ಣಳಾಗಿದ್ದು ಬಡವರ ಮಕ್ಕಳಿಗೊಂದು ಸ್ಫೂರ್ತಿ. ಇಂಥ ಸಾವಿರಾರು ಉದಾಹರಣೆಗಳಿದ್ದರೂ ಮಕ್ಕಳ ಸಹಜ ಕ್ರಿಯಾಶೀಲತೆಯನ್ನು ಪ್ರೋತ್ಸಾಹಿಸದೇ ಅವರ ಮೇಲೆ ಒತ್ತಡ ಹಾಕಿ, ಹಣ ಖರ್ಚು ಮಾಡಿ ಓದಿಸುವ ಪಾಲಕರು ಎಚ್ಚೆತ್ತುಕೊಳ್ಳಬೇಕು. ಮಕ್ಕಳ

ಬಗ್ಗೆ, ಅವರ ವಿದ್ಯಾಭ್ಯಾಸದ ಬಗ್ಗೆ ಕಾಳಜಿ ವಹಿಸುವುದು ತಪ್ಪಲ್ಲ. ಆದರೆ ಶಿಕ್ಷಣ ಕ್ಷೇತ್ರದಲ್ಲಿ, ಪ್ರಚಲಿತವಿರುವ ಹುಸಿ ನಂಬಿಕೆ, ಮೌಢ್ಯಗಳ ಕುರಿತು ಎಚ್ಚರಿಕೆ ವಹಿಸುವ ಅಗತ್ಯವಿದೆ. ಮಕ್ಕಳಿಗೆ ಓದಿನ ಕುರಿತು ಆಸಕ್ತಿ ಬೆಳೆಸುವುದು, ಸಾಧ್ಯವಾದಷ್ಟು ಪೂರಕ ವಾತಾವರಣ ಸೃಷ್ಟಿಸುವುದು ಪಾಲಕರ, ಶಿಕ್ಷಕರ, ಸರಕಾರದ, ಸಮಾಜದ ಜವಾಬ್ದಾರಿಯಾಗಿದೆ.

ಈ ವರ್ಷದ ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಉತ್ತೀರ್ಣರಾದವರ ಸಂಖ್ಯೆ ಕಳೆದ ಬಾರಿಗಿಂತ ಸ್ವಲ್ಪ ಚೇತರಿಕೆ ಕಂಡಿದೆಯಾದರೂ ಒಟ್ಟು ಪರೀಕ್ಷೆಗೆ ಹಾಜರಾದ ೮,೨೫,೪೬೮ ವಿದ್ಯಾರ್ಥಿಗಳಲ್ಲಿ ೬,೦೮,೩೩೬ ವಿದ್ಯಾರ್ಥಿಗಳು ಉತ್ತೀರ್ಣರಾಗಿದ್ದಾರೆ. ಅಂದರೆ ೨,೧೭,೧೩೨ ವಿದ್ಯಾರ್ಥಿಗಳು ಅನುತ್ತೀರ್ಣರಾಗಿದ್ದಾರೆ. ಇದು ಕಡಿಮೆ ಸಂಖ್ಯೆಯಲ್ಲ. ಎರಡು ಲಕ್ಷಕ್ಕಿಂತ ಹೆಚ್ಚಿನ ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ವಿಫಲರಾಗುವುದಕ್ಕೆ ಕಾರಣಗಳನ್ನು ಹುಡುಕಬೇಕು. ಪೂರಕ ಪರೀಕ್ಷೆಗಳಿಗೆ ಶಿಕ್ಷಣ ಇಲಾಖೆ ತಯಾರಿ ಮಾಡಿದೆಯಾದರೂ ಈ ವೈಫಲ್ಯಕ್ಕೆ ಶೈಕ್ಷಣಿಕ, ಸಾಮಾಜಿಕ, ಆರ್ಥಿಕ, ಕೌಟುಂಬಿಕ ಕಾರಣಗಳನ್ನು ಕಂಡುಹಿಡಿದು ಮುಂದಿನ ದಿನಗಳಲ್ಲಿ ಈ ಪ್ರಮಾಣದ ಅನುತ್ತೀರ್ಣತೆಯನ್ನು ತಡೆಯಬೇಕು.

ಕನ್ನಡ ಮಾಧ್ಯಮದ ಕುರಿತು ಹೆಚ್ಚುತ್ತಿರುವ ಅಸಡ್ಡೆ ಮತ್ತು ಅನುಮಾನಗಳಿಗೆ ಸರಕಾರ ತಡೆಹಾಕಬೇಕಿದೆ. ಇಂಗ್ಲಿಷ್ ಮಾಧ್ಯಮವೇ ಭವಿಷ್ಯ, ಜಾಣತನಕ್ಕೆ ರಹದಾರಿ ಎನ್ನುವ ಮಿಥ್‌ಅನ್ನು ಹೋಗಲಾಡಿಸಬೇಕು. ಕನ್ನಡ ಮಾಧ್ಯಮದ ವಿದ್ಯಾರ್ಥಿಗಳು ಇಂಗ್ಲಿಷ್‌ಅನ್ನು ಒಂದು ಭಾಷೆಯಾಗಿ ಕಲಿಯುತ್ತಾರೆ. ಅದನ್ನೇ ವ್ಯವಸ್ಥಿತವಾಗಿ, ವೈಜ್ಞಾನಿಕವಾಗಿ ಕಲಿಸಿದರೆ ಇಂಗ್ಲಿಷ್ ಮಾಧ್ಯಮದ ಅವಶ್ಯಕತೆಯಿಲ್ಲ. ಮಾಧ್ಯಮದ ಆಯ್ಕೆ ಪಾಲಕರ ಹಕ್ಕು ಎಂಬ ನ್ಯಾಯಾಲಯದ ತೀರ್ಪು ಇರಬಹುದಾದರೂ ಸ್ವತಂತ್ರ ಪೂರ್ವದ, ಸ್ವಾತಂತ್ರ್ಯಾನಂತರದ ಭಾರತದ ವಿಶ್ವವಿಖ್ಯಾತ ಶಿಕ್ಷಣ ತಜ್ಞರೂ ವಿದ್ವಾಂಸರೂ ವಿಜ್ಞಾನಿಗಳೂ ವಿವಿಧ ಕ್ಷೇತ್ರಗಳ ತಜ್ಞರೂ ಇಂಗ್ಲಿಷ್‌ಅನ್ನು ಒಂದು ಭಾಷೆಯನ್ನಾಗಿ ಕಲಿತೇ ಉನ್ನತ ಹಂತಕ್ಕೇರಿದವರು. ಇಂಗ್ಲಿಷ್ ಒಂದು ಭಾಷೆಯೇ ಹೊರತು ಅದೇ ಜ್ಞಾನವಲ್ಲ. ಒಂದು ಭಾಷೆಯಲ್ಲಿ ಪರಿಣತಿ ಪಡೆಯುವ ಬದಲಾಗಿ ಇಡೀ ಕಲಿಕಾ ಮಾಧ್ಯಮವನ್ನೇ ಅನ್ಯಭಾಷೆಗೆ ವರ್ಗಾಯಿಸಿ ಮಾತೃಭಾಷೆ, ಪ್ರದೇಶ ಭಾಷೆಯನ್ನು ನಿರ್ಲಕ್ಷಿಸುವುದು ಮೂರ್ಖತನ. ಸರಕಾರ ಮತ್ತು ಪಾಲಕರು ಇಂಥ ಹುಸಿ ನಂಬಿಕೆಗಳನ್ನು ಬದಿಗಿಟ್ಟು ಶಿಕ್ಷಣ ಮತ್ತು ಶಿಕ್ಷಣಾರ್ಥಿಗಳ ಕುರಿತು ಗಂಭೀರ ಚಿಂತನೆ ನಡೆಸಲು ವಿವಿಧ ಶ್ರೇಣಿಗಳ ಪರೀಕ್ಷೆಗಳಿಂದ ಬರುತ್ತಿರುವ ಫಲಿತಾಂಶಗಳು ಸೂಕ್ತ ಆಕರ ಒದಗಿಸಿವೆ.

## ಸಂವಿಧಾನ ವಿರೋಧಿ ಪರಂಪರೆಯ ವಕ್ತಾರರ ಹುಚ್ಚಾಟ

ನಮ್ಮ ದೇಶದ ನೂರಾರು ಸಮುದಾಯಗಳ, ಸಾವಿರಾರು ವರ್ಷಗಳ ಇತಿಹಾಸ, ಸಂಸ್ಕೃತಿ, ಪರಂಪರೆಯ ಅರಿವಿರುವ ಹಲವಾರು ಪ್ರಜ್ಞಾವಂತರ ಚಿಂತನೆಯ ಭಾಗವಾಗಿ ರೂಪುಗೊಂಡ ನಮ್ಮ ಸಂವಿಧಾನವನ್ನು ಕುರಿತು 'ಸಂವಿಧಾನದಲ್ಲಿ ಪರಂಪರೆಯಿಲ್ಲ' ಎಂದು ಘೋಷಣೆ ಕೊಟ್ಟ ಕನ್ನಡದ 'ಸ್ಟಾರ್' ಸಾಹಿತಿ ಭೈರಪ್ಪನವರ ಮೆದುಳು ಸಂಪೂರ್ಣ ನಿಷ್ಕ್ರಿಯವಾಗಿದೆಯೆಂಬುದರಲ್ಲಿ ಅನುಮಾನವೇ ಇಲ್ಲ. ಕನ್ನಡದಲ್ಲಿ ಕಾದಂಬರಿಗಳ ಮಹಾಪೂರವನ್ನೇ ಹರಿಸಿರುವ ಈ ಮಹಾನ್ ಸಾಹಿತಿ ಪ್ರತಿಯೊಂದು ಕೃತಿಯನ್ನು ಬರೆಯುವಾಗಲೂ ಅಪಾರ ಸಂಶೋಧನೆ, ಅಧ್ಯಯನ ನಡೆಸುತ್ತಾರೆ ಎಂದು ವಿಮರ್ಶಕರ ಅಂಬೋಣ. ಆ ಸಂಶೋಧನೆಗಳ ಪರಿಣಾಮವೇನೆಂಬುದನ್ನು ಅವರ ಇತ್ತೀಚಿನ ಭಾಷಣಗಳ ಬಡಬಡಿಕೆಯಲ್ಲಿ ಕಾಣುತ್ತಿದ್ದೇವೆ. ಮುಸ್ಲಿಮರ ವಿರುದ್ಧ ದ್ವೇಷವನ್ನು ವ್ಯಕ್ತಪಡಿಸುವ ಅವರ 'ಆವರಣ', ಹೆಣ್ಣನ್ನು ತುಚ್ಛೀಕರಿಸಿ ಬರೆದ 'ಕವಲು' ಕಾದಂಬರಿಗಳು ಭೈರಪ್ಪನವರ ಚಿಂತನಾ ಧಾರೆಯನ್ನು ಈಗಾಗಲೇ ಸ್ಪಷ್ಟಪಡಿಸಿವೆ.

ಮಹಿಳೆಯರಿಗೆ, ದಲಿತರಿಗೆ, ಅಲ್ಪಸಂಖ್ಯಾತರಿಗೆ ತಲೆಯೆತ್ತಲು, ಬದುಕಲು ಶಕ್ತಿ ಕೊಡುತ್ತಿರುವ ನಮ್ಮ ಸಂವಿಧಾನವನ್ನು ಭೈರಪ್ಪನವರು ಕುಹಕವಾಗಿ ಟೀಕಿಸಿರುವುದು ಒಂದು ಆಕಸ್ಮಿಕ ಘಟನೆಯೇನಲ್ಲ. ಬದಲಾಗಿ ಅದು ಆಳುವ ವರ್ಗದ, ಕೇಂದ್ರ ಸರ್ಕಾರವನ್ನು ಖುಷಿಪಡಿಸಲೆಂದೇ ಹೇಳಿದ ಪ್ರಜ್ಞಾಪೂರ್ವಕವಾದ ಜಾಣತನದ ದುಷ್ಟ ಹೇಳಿಕೆಯಾಗಿದೆ. 'ಮನುಧರ್ಮ ಸಂಹಿತೆ' ಮತ್ತು ಭಾರತದ ಸಂವಿಧಾನಗಳು ಹಿಂದೆಂದಿಗಿಂತ ಹೆಚ್ಚು ಚರ್ಚೆಗೊಳಗಾಗುತ್ತಿರುವ ಇಂದಿನ ಸಂದರ್ಭದಲ್ಲಿ ದೇಶದ ಇಡೀ ಜನಸಮುದಾಯ ಎರಡು ಭಾಗಗಳಾಗಿ ಧ್ರುವೀಕರಣಗೊಳ್ಳುತ್ತಿದೆ. ಮನುಸಂಹಿತೆಯನ್ನು ಒಪ್ಪುವ, ಇಲ್ಲವೆ ಭಾರತದ ಸಂವಿಧಾನವನ್ನು ಗೌರವಿಸುವ ಈ ಎರಡು ಗುಂಪುಗಳ ಮಧ್ಯೆ ನಿಜವಾದ ರಣಕಹಳೆ ಮೊಳಗಿದೆ. ಅಧಿಕಾರ, ಆಸ್ತಿ ಇಲ್ಲದ ಭಾರತೀಯ ಸಮಾಜದಲ್ಲಿನ ಎಲ್ಲ ತಳಸಮುದಾಯದ, ಜಾತಿಗಳ, ಧರ್ಮಗಳ ವರೆಲ್ಲರಿಗೂ ಅನ್ವಯವಾಗುವಂತೆ ಮೂಲಭೂತ ಹಕ್ಕುಗಳ, ಸಮಾನತೆಯ ಆಶಯವನ್ನು ಕಲ್ಪಿಸಿರುವ ದೇಶದ ಸಂವಿಧಾನವನ್ನು ಮತ್ತು ಅದರ ಆನ್ವಯಿಕತೆಯನ್ನು ವ್ಯಾಟಿಕನ್‌ನಲ್ಲಿ ತಯಾರಾಗುವ ಯೋಜನೆಗಳು ಎಂದು ಹೇಳುವ ಧಾರ್ಷ್ಟ್ಯವಿರುವ ಭೈರಪ್ಪನವರಿಗೆ ಬ್ರಾಹ್ಮಣೀಯ ಪಿತೃಪ್ರಾಧಾನ್ಯತೆಯನ್ನು ಸಾರುವ ಮನುಸಂಹಿತೆಯ ಜೀವವಿರೋಧಿ ಪರಂಪರೆಯು ಆಪ್ಯಾಯಮಾನವಾಗಿದೆಯೆಂದರೆ ಅವರ ವ್ಯಕ್ತಿತ್ವದ ಘನತೆಯೆಷ್ಟೆಂದು ಯಾರಾದರೂ ಊಹಿಸಬಹುದು!

ಸಂವಿಧಾನದತ್ತವಾದ ಹಕ್ಕಿನಿಂದ ಬಲಪಡೆದು ಸ್ವತಂತ್ರವಾಗಿ ತಲೆ ಎತ್ತಿರುವ ಮಹಿಳಾ ಸಮುದಾಯದ ಮೇಲೂ ಭೈರಪ್ಪನವರ ಗಧಾಪ್ರಹಾರ ನಡೆದಿದೆ. ಹೆಣ್ಣೆಂದರೆ ಲೈಂಗಿಕಜೀವಿ ಮಾತ್ರ, ಅವಳು ಗಂಡಿನ ಅಡಿಯಾಳು ಮತ್ತು ಆಸ್ತಿಯೆಂದು ಪರಿಗಣಿಸುವ ಮನುಸಂಹಿತೆಯ ಆರಾಧಕ ಭೈರಪ್ಪನವರಿಗೆ 'ವಿವಾಹದೊಳಗೂ ಗಂಡಿಗೆ ಹೆಣ್ಣಿನೊಡನೆ ಸಂಬಂಧ ಬೆಳೆಸುವುದಕ್ಕೆ ಅವಳ ಸಮ್ಮತಿ ಇರಬೇಕು' ಎಂಬ ಮಾತಿಗೆ ಅದೆಷ್ಟು ಬಣ್ಣಗಳ ಅರ್ಥ ಕೊಡಬಲ್ಲರು! ಅವರು ತಮ್ಮ ಕಾದಂಬರಿಗಳಲ್ಲಿ ಚಿತ್ರಿಸುವ ವಿದ್ಯಾವಂತ, ಸ್ವತಂತ್ರ ಸ್ತ್ರೀ ಪಾತ್ರಗಳೆಲ್ಲ ಲಜ್ಜೆಗೆಟ್ಟವೇ ಎಂಬ ತೀರ್ಮಾನಕ್ಕೆ




ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| **ಬಿಡಿ ಸಂಚಿಕೆ** | ₹ ೨೫/- |
| **ವಾರ್ಷಿಕ ಚಂದಾ** | ₹ ೩೦೦/- |
| **ಮೂರು ವರ್ಷಕ್ಕೆ** | ₹ ೬೦೦/- |

**ನವಕರ್ನಾಟಕ ಶಾಖೆಗಳು**

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಬರುವುದರ ಹಿಂದೆ ಅವರ ಕೊಳೆತ, ವೈದಿಕಶಾಹಿ ಮೌಲ್ಯಗಳೇ ವಿಜೃಂಭಿಸಿವೆ.

'ಚಳುವಳಿ'ಯೆನ್ನುವ ಪದವೇ ಅಲರ್ಜಿಯಾಗಿರುವ ಭೈರಪ್ಪನವರಿಗೆ ಸಾಹಿತ್ಯ ದಲ್ಲಾಗಲೀ, ಸಾಮಾಜಿಕವಾಗಿಯಾಗಲೀ ಚಳುವಳಿ ಮಾಡುವವರ ಬಗ್ಗೆ ತಿರಸ್ಕಾರ, ತಾತ್ಸಾರ ಹೇರಳವಾಗಿದೆ. ಸಂವಿಧಾನದತ್ತವಾದ ಹಕ್ಕುಗಳಿಂದ ನಮ್ಮ ಸಮಾಜದ ಅಸಮಾನತೆಯ ನೆಲೆಗಳ ವಿರುದ್ಧ ಹೋರಾಟ ಮಾಡಿ ಅವಕಾಶಗಳನ್ನು ಪಡೆಯಲು ಹೊರಟ ದಮನಿತ ವರ್ಗದವರು ಇವರು ನಂಬುವ 'ಸಂಸ್ಕೃತಿಯ' ಬೇರುಗಳನ್ನು ಅಲ್ಲಾಡಿಸುತ್ತಾರೆಂಬ ಭಯವೇ ಅವರ ಈ ಬಡಬಡಿಕೆಗೆ ಕಾರಣವಾಗಿದೆ. ಇದನ್ನು ಒಬ್ಬ ವ್ಯಕ್ತಿಯ ಅನಿಸಿಕೆಯೆಂದು ನಿರ್ಲಕ್ಷಿಸುವಂತಿಲ್ಲ. ಈ ಜೀವವಿರೋಧಿ ಮೌಲ್ಯಗಳನ್ನು ಬೆಂಬಲಿಸುವ ಅಜೆಂಡಾಗಳನ್ನು ಇಟ್ಟುಕೊಂಡ ಪುರೋಹಿತಶಾಹಿಗಳ ಒಂದು ದೊಡ್ಡ ಪಡೆಯೇ ರೂಪುಗೊಳ್ಳುತ್ತಿರುವುದು ನಮ್ಮ ಪ್ರಜಾಪ್ರಭುತ್ವ ಸಂಸ್ಕೃತಿಯ ಒಂದು ದುರಂತವಾಗಿದೆ.

ನಮ್ಮ ರಾಜ್ಯದಲ್ಲಿಯೇ ಗಾಂಧಿಯನ್ನು ಕೊಂದ ಗೋಡ್ಸೆಯನ್ನು ಆರಾಧಿಸುವ ರಾಕ್ಷಸಪಡೆ ಈಗಾಗಲೇ ಸಂವಿಧಾನವನ್ನು ಬದಲಾಯಿಸುತ್ತೇವೆ ಎಂದು ಕರೆ ಕೊಟ್ಟಿರುವ ಪರಂಪರೆಯ ಮುಂದುವರಿದ ಭಾಗವಾಗಿ ಬಂದಿರುವ ಭೈರಪ್ಪನವರ ಈ ಮಾತುಗಳನ್ನು ಹಗುರವಾಗಿ ಪರಿಗಣಿಸುವಂತಿಲ್ಲ. ಅದು ಹೋರಾಟಕ್ಕೆ ವೀಳ್ಯ ವನ್ನು ಕೊಟ್ಟಂತಿದೆ. ಸ್ವಾತಂತ್ರ್ಯ ಹೋರಾಟದ ದೀರ್ಘ ಪರಂಪರೆಯಿಂದ ಹುಟ್ಟಿದ ಅತ್ಯುನ್ನತ ಮೌಲ್ಯಗಳಾದ ಪ್ರಜಾಪ್ರಭುತ್ವ, ಸಮಾನತೆ, ಜಾತ್ಯತೀತತೆ, ಸಾಮಾಜಿಕ ನ್ಯಾಯಗಳನ್ನು ರಕ್ಷಿಸುವ ನಮ್ಮ ಸಂವಿಧಾನವನ್ನು ಭೈರಪ್ಪನಂತಹವರ ಸಂತತಿಯಿಂದ ರಕ್ಷಿಸಲು ಹೋರಾಡುವ ಕಾಲಾಳುಗಳ ಸಂತತಿ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಬೆಳೆಯಬೇಕಿದೆ.

ಗಾಯತ್ರಿ. ಎನ್.

---

*(೩ನೇ ಪುಟದಿಂದ ಈ ತಿಂಗಳು)*

ಕ್ರಮಗಳನ್ನು ಕೈಗೊಳ್ಳುವವರೆಗೆ ಎಲ್ಲವೂ ಸೇರಿರುತ್ತವೆ. ಚೆನ್ನೈನಲ್ಲಿದ್ದಾಗ ಚಂಡಮಾರುತದ ಹಾವಳಿಯನ್ನು ಕಣ್ಣಾರೆ ಕಂಡು ಅನುಭವಿಸಿದ್ದೇನೆ. ಬೆಂಗಳೂರಿನಂಥ ನಗರದಲ್ಲಿ ಸಣ್ಣ ಮಳೆ ಬಂದರೆ ಸಾಕು ರಸ್ತೆಗಳಲ್ಲಿ ಪ್ರವಾಹ ಹರಿಯುತ್ತದೆ, ವಾಹನಗಳ ದಟ್ಟಣೆ ಹೆಚ್ಚುತ್ತದೆ. ಹಲವು ಪ್ರದೇಶಗಳಲ್ಲಿ ಜನಜೀವನ ಅಸ್ತವ್ಯಸ್ತ ಗೊಳ್ಳುತ್ತದೆ. ಇದಕ್ಕೆ ಹೊಣೆ ಯಾರು? ಸರಕಾರ ಮತ್ತು ನಗರಾಡಳಿತ ಸಮರ್ಪಕವಾಗಿ ಕೆಲಸ ಮಾಡಿದರೆ ಜನರ ಬವಣೆ ಕಿಂಚಿತ್ತಾದರೂ ಕಡಿಮೆಯಾದೀತು.

* * *

ವಿಕಿಲೀಕ್ಸ್‌ನ ಜೂಲಿಯನ್ ಅಸ್ಸಾಂಜ್ ಬಂಧನ ಪತ್ರಿಕಾ ಸ್ವಾತಂತ್ರ್ಯದ ಹರಣ. ಅಮೆರಿಕದ ರಕ್ಷಣಾ ಇಲಾಖೆಯ ಕೊಳಕು ವ್ಯವಹಾರಗಳನ್ನು ಬಯಲಿ ಗೆಳೆದದ್ದು ವಿಕಿಲೀಕ್ಸ್‌ನ ಈ ಪತ್ರಕರ್ತನ ಹಿರಿಮೆ. ಅಮೆರಿಕ ಸರಕಾರ ರಹಸ್ಯವೆಂದು ಪರಿಗಣಿಸಿದ್ದ ಕಡತಗಳನ್ನು ಬಹಿರಂಗಗೊಳಿಸಿದ ಆಪಾದನೆ ಅಸ್ಸಾಂಜ್ ಮೇಲೆ. ಇದಕ್ಕೆ ಮರಣದಂಡನೆ ಶಿಕ್ಷೆಯೂ ಆಗಬಹುದು. ಇದಲ್ಲದೆ ಸ್ವೀಡನ್ನಿನಲ್ಲಿದ್ದಾಗ ಈತನ ಮೇಲೆ ಮಹಿಳೆಯ ಮೇಲೆ ಅತ್ಯಾಚಾರ ಎಸಗಿದ ಆರೋಪವೂ ಇದೆ. ಎರಡೂ ದೇಶಗಳಿಗೆ ಬೇಕಾದ ವ್ಯಕ್ತಿ. ಈತ ಈಗ ಬ್ರಿಟನ್ನಿನ ಸರಕಾರದ ಕಾರಾಗೃಹ ವಾಸಿ. ದಕ್ಷಿಣ ಅಮೆರಿಕ ಖಂಡದ ಈಕ್ವೆಡಾರ್ ದೇಶದ ಲಂಡನ್ನಿನಲ್ಲಿರುವ ರಾಯಭಾರಿ ಕಚೇರಿಯಲ್ಲಿ ಏಳು ವರ್ಷಗಳಿಂದ ಅಸ್ಸಾಂಜ್ ಆಶ್ರಯ ಪಡೆದಿದ್ದ. ಈಕ್ವೆಡಾರ್‌ನಲ್ಲಿ ೨೦೧೯ರಲ್ಲಿ ಆಡಳಿತ ಬದಲಾದಾಗಲೇ ಸೂಚನೆ ಇತ್ತು ಆಶ್ರಯ ರದ್ದಾದೀತು ಎಂದು. ಇದರ ಮೇಲೆ ಹೊಸ ಅಧ್ಯಕ್ಷ ಲೆನಿನ್ ಮೊರೆನೊ ಅಧಿಕಾರಕ್ಕೆ ಬಂದ ಮೇಲೆ ಅಮೆರಿಕದ ನಿಯಂತ್ರಣದಲ್ಲಿರುವ ವರ್ಲ್ಡ್ ಬ್ಯಾಂಕ್ ಹಾಗೂ ಐಎಂಎಫ್‌ನಿಂದ ಹತ್ತು ಬಿಲಿಯ ಡಾಲರಿಗೂ ಅಧಿಕ ಸಾಲದ ಆಮಿಷವೂ ಸೇರಿತು. ಹಾಗಾಗಿ ಅಸ್ಸಾಂಜ್ ಬ್ರಿಟಿಷ್ ಪೊಲೀಸರ ವಶಕ್ಕೆ ಬಂದ. ಅಸ್ಸಾಂಜ್ ಬಂಧನ ಅಂತರರಾಷ್ಟ್ರೀಯ ಕಾನೂನಿನ ಉಲ್ಲಂಘನೆಯಾಗಿದೆ. ೨೦೧೮ರಲ್ಲೇ ಅಸ್ಸಾಂಜ್‌ಗೆ ಈಕ್ವೆಡಾರ್‌ನ ನಾಗರಿಕತ್ವ ದೊರೆತಿತ್ತು. ಕಳೆದ ವರ್ಷ ಅಮೆರಿಕದ ಅಧಿಕಾರಿಗಳು ಈತನ ಮೇಲೆ ಆರೋಪ ಪಟ್ಟಿಯನ್ನು ಪ್ರಕಟಿಸಿದ್ದರು. ವಿಕಿಲೀಕ್ಸ್‌ಗೆ ಕಡತಗಳನ್ನು ಒದಗಿಸಿದ ಆರೋಪಿ ಚೆಲ್ಸಿಯಾ ಮ್ಯಾನಿಂಗ್ ಎಂಬಾಕೆ ಅಮೆರಿಕ ಸೈನ್ಯದಲ್ಲಿ ಯೋಧೆ. ಅಧಿಕಾರಿಗಳ ತನಿಖೆಗೆ ಸಹಕರಿಸಲಿಲ್ಲ ಎಂಬ ಆರೋಪದ ಮೇಲೆ ಮಿಲಿಟರಿ ನ್ಯಾಯಾಲಯ ಈಕೆಯನ್ನು ಕಾರಾಗೃಹಕ್ಕೆ ದೂಡಿತ್ತು. ಅಧ್ಯಕ್ಷ ಒಬಾಮಾ ೨೦೧೭ರಲ್ಲಿ ನೀಡಿದ ಕ್ಷಮೆಯಿಂದ ಬಿಡುಗಡೆಯಾದಳು. ಆ ವೇಳೆಗಾಗಲೇ ಆಕೆ ಕಾರಾಗೃಹದಲ್ಲಿ ಏಳು ವರ್ಷ ಕಳೆದಿದ್ದಳು. ಇನ್ನು ಅಸ್ಸಾಂಜ್‌ಗೆ ಏನು ಕಾದಿದೆಯೊ.

* * *

ಕರ್ನಾಟಕದಲ್ಲಿ ಚುನಾವಣೆ ಅಬ್ಬರ ಮುಗಿದಿದೆ. ಉಪಚುನಾವಣೆಗಳು ಕೂಡ ಮುಗಿಯುತ್ತಿವೆ. ಇನ್ನೆಲ್ಲ ಮೇ ೨೩ರತ್ತವೇ ಚಿತ್ತ. ಫಲಿತಾಂಶ ಏನಾದೀತು ಎಂಬ ಊಹಾಪೋಹ ಜೋರಾಗಿ ನಡೆದಿದೆ. ಮಾಧ್ಯಮಗಳು ಈ ವಿಚಾರದಲ್ಲಿ ಹಿಂದೆ ಬಿದ್ದಿಲ್ಲ. ಚುನಾವಣೆಯಲ್ಲಿ ಯಾರು ಸೋಲುತ್ತಾರೆ ಯಾರು ಗೆಲ್ಲುತ್ತಾರೆ ಎಂಬುದಕ್ಕೆ ಬೆಟ್ಟಿಂಗ್ ದಂಧೆ ಶುರುವಾಗಿದೆ. ಈಗ ಸದ್ಯಕ್ಕೆ ಇರುವ ಚರ್ಚೆ, ಅದರಲ್ಲೂ ಇಲೆಕ್ಟ್ರಾನಿಕ್ ಮೀಡಿಯಾದಲ್ಲಿ ಅಬ್ಬರ ಎಲ್ಲ ಮೈತ್ರಿ ಸರಕಾರ ಉಳಿಯುತ್ತಾ, ಉರುಳುತ್ತಾ ಎನ್ನುವುದರ ಮೇಲೆ. ಇದು ಮೈತ್ರಿ ಸರಕಾರ ಅಸ್ತಿತ್ವಕ್ಕೆ ಬಂದಾಗಿನಿಂದಲೇ ಪ್ರಾರಂಭವಾಯಿತು. ಚಿಂಚೋಳಿ, ಕುಂದಗೋಳ ಕ್ಷೇತ್ರಗಳ ಉಪ ಚುನಾವಣೆಯ ಫಲಿತಾಂಶ ರಾಜ್ಯ ಸರಕಾರದ ಮೇಲೆ ಏನು ಪರಿಣಾಮ ಬೀರೀತು ಎನ್ನುವುದೇ ಚರ್ಚೆಗೆ ಗ್ರಾಸ. ಭಾಜಪ ನಾಯಕ ಯಡಿಯೂರಪ್ಪ ಪ್ರಕಾರ ರಾಜ್ಯ ಸರಕಾರ ಉರುಳುವುದು ಖಚಿತ. ಆಪರೇಷನ್ ಕಮಲಕ್ಕಿಂತ 'ದೋಸ್ತಿ'ಗಳಲ್ಲಿ ಇರುವ ಅತೃಪ್ತಿಯೇ ಕಾರಣವಾಗಿರುತ್ತದೆ. ರಾಜ್ಯದ ಒಟ್ಟು ೨೮ ಲೋಕಸಭಾ ಸ್ಥಾನಗಳ ಪೈಕಿ ೨೨ ತಮ್ಮದೇ ಎಂದು ಭಾಜಪ ನಾಯಕರು ಹೇಳಿಕೊಳ್ಳುತ್ತಿದ್ದಾರೆ. ದೋಸ್ತಿಗಳೂ ಹೇಳಿಕೊಳ್ಳುತ್ತಿದ್ದಾರೆ. ರಾಜಕಾರಣಿಗಳಿಗೆ ಇಲೆಕ್ಟ್ರಾನಿಕ್ ಮೀಡಿಯದವರು ಹಿಡಿಯುವ ಮೈಕ್ ಕಂಡರೆ ಮಾತಾಡುವ ಆಸೆ. ಟೆಲಿವಿಷನ್ ಪರದೆಯ ಮೇಲೆ ಕಾಣಿಸಿಕೊಳ್ಳುವ ಹಂಬಲ. ಕನ್ನಡದಲ್ಲೇ ಬೇಕಾದಷ್ಟು ಚಾನೆಲ್‌ಗಳಿವೆ ಈ ಪ್ರಚಾರ ಪ್ರಿಯ ರಾಜಕಾರಣಿಗಳಿಗೆ. ಆ ಸಮಯದಲ್ಲಿ ಈ ಮಹಾ ಪುರುಷರು ಬಾಯಿಗೆ ಬಂದದ್ದೇ ಮಾತನಾಡುತ್ತಾರೆ. ಆಯ್ದ ತುಣುಕುಗಳು ಪ್ರಸಾರಗೊಳ್ಳುತ್ತಿವೆ. ಟಿ.ವಿ. ಪತ್ರಕರ್ತರಿಗೆ ಖುಷಿಯೋ ಖುಷಿ. ಪದೇ ಪದೇ ಅದನ್ನೇ ತೋರಿಸಿ ತಮಗೆ ತೋಚಿದ ರೀತಿಯಲ್ಲಿ ವ್ಯಾಖ್ಯಾನಿಸುತ್ತಾರೆ. ಪ್ರತಿ ಚಾನೆಲ್‌ನಲ್ಲೂ ಅದರ ಕುರಿತು ಚರ್ಚೆ. ಇದರಲ್ಲಿ ಭಾಗವಹಿಸುವವರು ಕೂಡ ಪಕ್ಷದ ಕಾರ್ಯಕರ್ತರುಗಳೇ. ಮೂಗಿನ ನೇರಕ್ಕೆ ಚಾನೆಲ್‌ನ ನೀತಿಗೆ ಸರಿಹೊಂದುವಂತೆ ಆ್ಯಂಕರ್‌ಗಳೆಂದು ಕರೆದುಕೊಳ್ಳುವ, ಅರಚುವ ವ್ಯಕ್ತಿಗಳು ಬೇರೆ ಇರುತ್ತಾರೆ. ಸಿದ್ದರಾಮಯ್ಯ, ಶಿವಕುಮಾರ್, ಯಡಿಯೂರಪ್ಪ, ಪರಮೇಶ್ವರ್, ಅಶೋಕ್, ದೇವೇಗೌಡ, ಕುಮಾರಸ್ವಾಮಿ ಮೊದಲಾದವರ ಮುಖ ನೋಡಿ ನೋಡಿ ಬೇಸರ ಬರುತ್ತದೆ. ಹೆಚ್ಚು ಕಡಿಮೆ ಇವರುಗಳು ಕಾಣಿಸಿಕೊಳ್ಳದ ದಿನವೇ ಇಲ್ಲ. ಶುರುವಾಗುತ್ತದೆ ಕೆಸರೆರೆಚಾಟ. ಭಾಜಪಗೆ ಪ್ರಚಾರ ನೀಡುವ ಚಾನಲ್‌ಗಳೇ ಅಧಿಕ. ಎಲ್ಲವೂ ಸರಕಾರ ಯಾವ ಘಳಿಗೆಯಲ್ಲಾದರೂ ಬೀಳುತ್ತದೆ ಎಂದು ಒಂದೇ ಸಮನೆ ಭವಿಷ್ಯ ನುಡಿಯುತ್ತವೆ. ಚುನಾವಣೆಯ ಕೊನೆಯ ಸುತ್ತು ಬಾಕಿ ಇದೆ. ಅಂದೇ ರಾಜ್ಯದಲ್ಲಿ ಶಾಸನಸಭೆಗೆ ಉಪಚುನಾವಣೆಯೂ ನಡೆಯುತ್ತದೆ. ಅಲ್ಲಿಂದ ಮೇ ೨೩ರವರೆಗೆ ಚುನಾವಣೆ ಸಮೀಕ್ಷೆಗಳದ್ದೇ ಪಾರುಪತ್ಯ. ಅವು ಸುಳ್ಳಾಗುವುದೋ ನಿಜವಾಗುವುದೋ, ಬಣ್ಣ ಬಯಲಾಗುವುದು ಮೇ ೨೩ರಂದು ಮಧ್ಯಾಹ್ನದ ಹೊತ್ತಿಗೆ.

* * *

ಅಮೆರಿಕ–ಚೀಣ ವಾಣಿಜ್ಯ ಸಮರ ತೀವ್ರ ಗೊಂಡಿದೆ. ಅದು ಪ್ರಪಂಚದ ಆರ್ಥಿಕ ವ್ಯವಹಾರಗಳ ಮೇಲೆ ಈಗಾಗಲೇ ಸಾಕಷ್ಟು ಪರಿಣಾಮ ಬೀರಿದೆ. ವಿಶ್ವವಾಣಿಜ್ಯ ಸಂಸ್ಥೆ (ಡಬ್ಲ್ಯುಟಿಒ) ಈ ಎರಡೂ ದೇಶಗಳ ವಾಣಿಜ್ಯ ಯುದ್ಧದ ಮೂಕಪ್ರೇಕ್ಷಕ. ತೊಂಬತ್ತರ ದಶಕದಲ್ಲಿ ಹುಟ್ಟಿಕೊಂಡ ಈ ಸಂಸ್ಥೆ ನಿಷ್ಪ್ರಯೋಜಕ. ಚೀಣ ಅಮೆರಿಕದ ಅಧ್ಯಕ್ಷ ಡೋನಾಲ್ಡ್ ಟ್ರಂಪ್ ನೀಡಿದ್ದ ಎಚ್ಚರಿಕೆಗೆ, ಬೆದರಿಕೆಗೆ ಕ್ಯಾರೇ ಅನ್ನದೇ ಅಮೆರಿಕದಿಂದ ಆಮದು ಮಾಡಿಕೊಳ್ಳುವ ಸರಕುಗಳ ಮೇಲೆ ಸುಂಕ ವಿಧಿಸಿದೆ. ಅಧಿಕ ಸುಂಕ ಜೂನ್ ೧ರಿಂದ ಜಾರಿಯಾಗಲಿದೆ. ಈ ವಣಿಕ ಸಮರ ಶುರು ಮಾಡಿದ್ದು ಕೂಡ ಅಮೆರಿಕದ ಅಧ್ಯಕ್ಷ ಟ್ರಂಪ್. ಯರ್‍ರಾಬಿರ್‍ರಿ ನಡವಳಿಕೆಗೆ ಹೆಸರಾದ ಈತ ಭಾರತದ ಪ್ರಧಾನಿ ಮೋದಿಯಷ್ಟೇ ಬಾಯಿಬಡುಕ, ಪ್ರಚಾರಪ್ರಿಯ. ಅಮೆರಿಕ ಪ್ರತಿಷ್ಠೆಯನ್ನು ಪುನರುತ್ಥಾನ

ಮಾಡುವ ಹೆಸರಿನಲ್ಲಿ ಚುನಾವಣೆಯಲ್ಲಿ ಗೆದ್ದ ಈತ ಮಾಡಿದ್ದೇ ಕಾನೂನು. ಅಮೆರಿಕದವರು ಚೀಣದಿಂದ ತರಿಸಿಕೊಳ್ಳುವ ಸಾಮಗ್ರಿಗಳು ಅಧಿಕ ಪ್ರಮಾಣದವು. ಹಾಗಾಗಿ ಅಮೆರಿಕ ಚೀಣಕ್ಕೆ ಬಾಕೀದಾರ. ಅದನ್ನು ಸರಿದೂಗಿಸಲು ಟ್ರಂಪ್ ಕೈಗೊಂಡಿರುವ ಕ್ರಮವೇ ಈ ವಾಣಿಜ್ಯ ಸಮರಕ್ಕೆ ಕಾರಣ. ಬಿಲಿಯಗಟ್ಟಳೆ ಡಾಲರುಗಳನ್ನು ಅಮೆರಿಕ ಚೀಣಾಗೆ ಪಾವತಿಸಬೇಕಾಗಿದೆ. ಮೇ ತಿಂಗಳ ನಡುವಿನಲ್ಲಿ ಚೀಣಾ ಪ್ರತೀಕಾರ ತೀರಿಸಿಕೊಳ್ಳಲು ಮುಂದಾಗಿದೆ. ಅಮೆರಿಕದಿಂದ ತರಿಸಿಕೊಳ್ಳುವ ವಸ್ತುಗಳ ಮೇಲೆ ಸುಂಕ ಹೆಚ್ಚಿಸಿದೆ. ಇದರ ಪರಿಣಾಮದಿಂದ ಭಾರತದ ಷೇರು ಮಾರುಕಟ್ಟೆ ತತ್ತರಿಸಿದೆ. ಜಿ – ೨೦ ಶೃಂಗ ಸಭೆ ಸಮಯದಲ್ಲಿ ಟ್ರಂಪ್ ಮತ್ತು ಚೀಣೀ ಅಧ್ಯಕ್ಷ ಕ್ಸಿಜಿನ್ ಪಿಂಗ್ ಭೇಟಿಯಾಗುವ ಸಾಧ್ಯತೆ ಇದೆ. ಅದು ಈ ವಾಣಿಜ್ಯ ಸಮರಕ್ಕೆ ಇತಿಶ್ರೀ ಹಾಡುವುದೇ ನೋಡಬೇಕು.

✶ ✶ ✶

ಲೋಕಸಭಾ ಚುನಾವಣೆಯ ಫಲಿತಾಂಶ ಪ್ರಕಟವಾಗುವ ಮೇ ೨೩ರಂದೇ 'ಹೊಸತು' ಜೂನ್ ಸಂಚಿಕೆ ಅಚ್ಚಿನ ಮನೆಗೆ ಹೋಗುತ್ತದೆ. ಆದ್ದರಿಂದ ಫಲಿತಾಂಶಕ್ಕೆ ಪ್ರತಿಕ್ರಿಯೆ ಸಾಧ್ಯವಾಗುವುದಿಲ್ಲ. ವಿರೋಧ ಪಕ್ಷಗಳು ತಾವು ಈಗಾಗಲೆ ವಿಜಯಿಗಳಾಗಿರುವಂತೆ ಸಂಭ್ರಮಿಸುತ್ತಿದ್ದಾರೆ. ಕಾಂಗ್ರೆಸ್ ಪಕ್ಷವಂತೂ ೨೩ಕ್ಕೆ ಮುಂಚೆಯೇ ಎಲ್ಲ ಪಕ್ಷಗಳನ್ನೂ ಒಂದು ಸಭೆಗೆ ಆಹ್ವಾನಿಸಿರುವುದಾಗಿ ವರದಿಯಾಗಿದೆ. ಅದು ಅನೌಪಚಾರಿಕ ಸಭೆಯೇ ಆದರೂ ಆಹ್ವಾನವನ್ನು ನೀಡಿ ಅದರ ಮಾಹಿತಿಯನ್ನು ಪತ್ರಿಕೆಗಳಿಗೆ ಬಿಡುಗಡೆ ಮಾಡಿರುವುದು ತೀರಾ ಪ್ರಶ್ನಾರ್ಹವಾದ ನಡೆ. ಕೆಲವು ಪಕ್ಷಗಳು ಹಾಜರಾಗದಿರುವುದಕ್ಕೆ ಅದೂ ಒಂದು ಸಮರ್ಥನೀಯ ಕಾರಣವೇ. ಸಾಮೂಹಿಕ ಕ್ರಿಯೆ ಬೇಕಾಗಿದ್ದರೆ ಆಹ್ವಾನವೂ ಸಾಮೂಹಿಕತೆ ಮತ್ತು ಮೈತ್ರಿಕೂಟದ ಛಾಯೆಯನ್ನು ಹೊಂದಿರಬೇಕು. ಇಲ್ಲದಿದ್ದರೆ ಅದು ದೊಡ್ಡಣ್ಣನ ಅಹಂಕಾರದ ಸೂಚಕವಾಗುತ್ತದೆ. ಯಾವ ಚಿಂತಕರನ್ನೂ ಸಂಪರ್ಕಿಸದೆ 'ಚಿಂತಕರ ಸಂಘ' ರಚನೆಯಾಗಿದೆ, ನೀವು ಬಂದು ಸೇರಿಕೊಳ್ಳಿ ಎಂದು ಹೇಳಿದರೆ ಯಾರಾದರೂ ಏಕೆ ಬರುತ್ತಾರೆ! ವಿವಿಧ ಪಕ್ಷಗಳ ಮೈತ್ರಿ ಸಭೆ ಯಾವ ಪೂರ್ವಭಾವಿ ಚರ್ಚೆಗಳೂ ಇಲ್ಲದೆ ಕೊಲ್ಕತ್ತಾದಲ್ಲಿ ಜರುಗಿದ್ದೇ ಒಂದು ಪ್ರಹಸನ. ಬೃಹತ್ ಸಭೆ ನಡೆಯಿತು, ಹತ್ತಾರು ನಾಯಕರು ವೇದಿಕೆಯಲ್ಲಿದ್ದರು, ಕೈ ಕೈ ಹಿಡಿದು ಎತ್ತಿದರು, ಇನ್ನೇನು ಎಲ್ಲರೂ ಒಂದಾಗಿ ಸೆಣಸುತ್ತಾರೆಂಬ ಭಾವನೆಯನ್ನು ಬಿತ್ತಿದರು. ಆಮೇಲೆ ನಡೆದದ್ದು ತಿಳಿದೇ ಇದೆ. ಪ್ರಜಾಪ್ರಭುತ್ವವಾದಿ ಮೈತ್ರಿ ಸಂಘಟನೆಯು ಹೀಗೆ ರೂಪುಗೊಳ್ಳಲಾರದು. ಕೊಲ್ಕತ್ತಾದಲ್ಲಿ ಕೈ ಹಿಡಿದವರು ಆಮೇಲೆ ಮುಖ ಎತ್ತಲೋ ತಿರುಗಿಸಿಕೊಂಡು ಮೈತ್ರಿಕೂಟದ ವಿಚಾರವನ್ನು ತತ್ತ್ವಾಧಾರಿತ ನೆಲೆಯಲ್ಲಿ ಚರ್ಚಿಸಲೇ ಇಲ್ಲ. ರಾಷ್ಟ್ರಮಟ್ಟದ ಚುನಾವಣೆಗೆ ಈ ರೀತಿಯ ಸಿದ್ಧತೆರಹಿತ ಸಭೆಯು ನಾಚಿಕೆಗೇಡಿನ ಸಂಗತಿ. ಚುನಾವಣೆಯ ಫಲಿತಾಂಶ ಬಂದನಂತರ ಮತ್ತೆ ಮೈತ್ರಿಕೂಟವನ್ನು ಇದೇ ರೀತಿ ನಡೆಸುವುದಾದರೆ ಭಾರತೀಯ ಜನತಾ ಪಕ್ಷಕ್ಕೆ ಬಹುಮತ ದೊರೆಯದಿದ್ದರೂ ಚಾಣಾಕ್ಷತನದಿಂದ ಅದು ದೊರೆಯುವಂತೆ ಮಾಡಿಕೊಳ್ಳಲು ಆ ಪಕ್ಷವು ಸಮರ್ಥವಾಗಿದೆ. ಚುನಾವಣಾ ನಿಧಿಗೆ ದೇಣಿಗೆ ನೀಡಲು ಬ್ಯಾಂಕುಗಳಿಂದ ಬಾಂಡುಗಳನ್ನು ಕೊಂಡು ಅನಾಮಧೇಯರಾಗಿ ಉಳಿದಿರುವ ಕಂಪನಿಗಳ ಮಾಲೀಕರಿದ್ದಾರೆ. ಚುನಾವಣೆ ಪ್ರಕ್ರಿಯೆ ಆರಂಭವಾದ ನಂತರ ೩೨೦೦ ಕೋಟಿ ರೂಪಾಯಿಗಳಿಗೂ ಮಿಗಿಲಾಗಿ ಬಾಂಡುಗಳ ಕೊಳ್ಳುವಿಕೆ ಮತ್ತು ವಿತರಣೆ ನಡೆದಿದೆ; ಅದಕ್ಕೆ ಮುಂಚೆಯೂ ನಡೆದಿತ್ತು. ಬಾಂಡುಗಳ ಪೈಕಿ ಮುಕ್ಕಾಲು ಭಾಗಕ್ಕೂ ಹೆಚ್ಚು ಮೊತ್ತ ಪ್ರಧಾನಿ ಮೋದಿಯವರ ಪಕ್ಷಕ್ಕೆ ಹೋಗಿದೆಯೆಂದು ಅಧಿಕೃತ ಪ್ರಕಟಣೆಗಳು ತಿಳಿಸಿವೆ. ಅದನ್ನು ಬಳಸಿಕೊಂಡು ಮೈತ್ರಿಕೂಟದ ಭಾಗವಾಗುವ ಸಾಧ್ಯತೆ ಇರುವ ಪಕ್ಷಗಳಿಗೆ ಎಂತಹ ಆಮಿಷ ಒಡ್ಡಬಹುದೆಂದು ಊಹಿಸುವುದು ಕಷ್ಟವಲ್ಲ. ರಾಷ್ಟ್ರೀಯ ರಾಜಕೀಯ ಪಕ್ಷಗಳೆಂದು ಕರೆದುಕೊಳ್ಳುವ ಪಕ್ಷಗಳಿಗೆ, ವಿಶೇಷವಾಗಿ ಕಾಂಗ್ರೆಸ್‌ಗೆ, ಪ್ರಜಾಪ್ರಭುತ್ವವಾದಿ ಮೈತ್ರಿ ಸಂಘಟನಾ ಚಾತುರ್ಯವೇ ಇಲ್ಲದಿದ್ದರೆ ಇವು ಒಟ್ಟಾಗಿ ಸರ್ಕಾರ ರಚಿಸಲು ಸಾಧ್ಯವಾದೀತೆ? ಅಲಿಖಿತವಾಗಿ ಭಾರತೀಯ ಜನತಾ ಪಕ್ಷದ ಜೊತೆ ಒಡಂಬಡಿಕೆ ಮಾಡಿಕೊಳ್ಳುವುದಕ್ಕೆ ಕೆಲವು ಪಕ್ಷಗಳಿಗೆ ಇದು ಸಾಕಷ್ಟು ಅವಕಾಶ ಕಲ್ಪಿಸಿಕೊಟ್ಟಿದೆ. ಆದ್ದರಿಂದಲೇ ಬಹುಮತ ಇಲ್ಲದಿದ್ದರೂ ಬಹುಮತವನ್ನು ಸಾಧಿಸಲು ಶ್ರೀ. ಮೋದಿಯವರಿಗೆ ವಿಪುಲ ಅವಕಾಶಗಳು ನಿರ್ಮಾಣವಾಗಿವೆ. ಹಾಗೇನಾದರೂ ಅವರು ಯಶಸ್ವಿಯಾದರೆ ಅದಕ್ಕೆ ಹೊಣೆ ಕಾಂಗ್ರೆಸ್ ಪಕ್ಷವೇ ಎನ್ನಲಡ್ಡಿಯಿಲ್ಲ. "ನಮ್ಮ ಪಕ್ಷ ಏಕಾಕಿಯಾಗಿ ಭಾಜಪವನ್ನು ಹಿಮ್ಮೆಟ್ಟಿಸಲು ಸಮರ್ಥವಾಗಿದೆ" ಎಂದು ಮೈತ್ರಿಕೂಟದ ಚಿಂತನೆ ಇನ್ನೂ ನಡೆಯುತ್ತಿದ್ದಾಗಲೇ ಕಾಂಗ್ರೆಸ್ ಅಧ್ಯಕ್ಷರು ಸಾರ್ವಜನಿಕ ಹೇಳಿಕೆ ನೀಡಿದ್ದರು. ಹಾಗಿದ್ದರೆ ಕೊಲ್ಕತ್ತಾಗೆ ಹೋಗಿ ಕೈ ಕೈಹಿಡಿದು ಕೇಕೆ ಹಾಕಿದ್ದೇಕೆ? ಉತ್ತರ ಪ್ರದೇಶದಲ್ಲಿ ಮೈತ್ರಿಗಾಗಿ ಸಂಧಾನ ನಡೆದಿದ್ದರೆ ಸನ್ನಿವೇಶ ಬೇರೆಯೇ ಇರುತ್ತಿತ್ತು. ಅಂತೆಯೇ ದೆಹಲಿಯಲ್ಲಿ ಭಾಜಪಕ್ಕೆ ಅನುಕೂಲವಾಗುವಂತೆ ಮೈತ್ರಿಯನ್ನು ಚಿವುಟಿ ಹಾಕಲಾಯಿತು. ದೆಹಲಿಯ ಅದೆಷ್ಟು ಸ್ಥಾನಗಳನ್ನು ಈ ರೀತಿ ಭಾಜಪಕ್ಕೆ ಸುಲಭವಾಗಿ ದಕ್ಕುವಂತೆ ಮಾಡಲಾಯಿತೆಂಬುದು ಚುನಾವಣಾ ಫಲಿತಾಂಶ ಬಂದನಂತರ ತಿಳಿಯುತ್ತದೆ. ನಿಜಕ್ಕೂ ಭಾಜಪದ ಹಾನಿಕಾರಕ ಆಡಳಿತವನ್ನು ಇಲ್ಲವಾಗಿಸಬೇಕೆಂಬ ಆಶಯವಿದ್ದಿದ್ದರೆ ಕಾಂಗ್ರೆಸ್‌ನ ನೀತಿ ಹೀಗಿರಬೇಕಾಗಿರಲಿಲ್ಲ. "ನಾವು ಒಂಟಿಯಾಗಿ ಭಾಜಪವನ್ನು ಎದುರಿಸುತ್ತೇವೆ, ಹಾಗೆ ಎದುರಿಸಿ ಸೋತರೆ ನೀವೆಲ್ಲಾ ಬಂದು ನಮಗೆ ಬೆಂಬಲ ನೀಡಿ" ಎನ್ನುವುದು ರಾಜಕೀಯ ನಡೆಯಲ್ಲ, ಪ್ರಜಾಪ್ರಭುತ್ವವಾದಿ ಕ್ರಮವಲ್ಲ. ತಾನೇ ಸ್ವತಂತ್ರವಾಗಿ ಭಾಜಪವನ್ನು ಸೋಲಿಸಿದರೆ ಆಗ ಬೇಕಾದರೆ ಎಲ್ಲರ ಅಭಿನಂದನೆಯೂ ಆ ಪಕ್ಷಕ್ಕೆ ಸಲ್ಲಲಿ, ಯಾರು ಬೇಡವೆನ್ನುತ್ತಾರೆ! ಹಲವು ದಶಕಗಳ ಕಾಲ ಪಕ್ಷದಲ್ಲಿ ದುಡಿದ ಶ್ರೀ ಮಲ್ಲಿಕಾರ್ಜುನ ಖರ್ಗೆಯವರನ್ನು ಮೈತ್ರಿಕೂಟದ ಪ್ರಧಾನಿ ಅಭ್ಯರ್ಥಿ ಎಂದು ಬಿಂಬಿಸಿ ಐಕ್ಯ ಚುನಾವಣಾ ಹೋರಾಟ ನಡೆಸಿದ್ದರೆ ಅನುಮಾನಗಳೇ ಇಲ್ಲದೆ ಪರ್ಯಾಯದ ರಚನೆಗೆ ಮುಂದಡಿ ಇಡಬಹುದಿತ್ತು. ಈಗ ಎಂತಹ ಗೊಂದಲ ಉಂಟಾಗುತ್ತದೋ ಹೇಳಬರುವುದಿಲ್ಲ. ಯೋಜನಾರಹಿತ ಕೋಲ್ಕತ್ತಾ ಸಮಾವೇಶಕ್ಕೆ ಎಡಪಕ್ಷಗಳನ್ನೂ ಬರಮಾಡಿಕೊಳ್ಳದಿದ್ದುದು ಪ್ರಶಂಸನೀಯ. ಅವು ಏಕಾಕಿಯಾಗಿ ಚುನಾವಣೆಗಳಲ್ಲಿ ಭಾಗವಹಿಸಿವೆ. (ಬಿಹಾರದಲ್ಲಿ ಒಂದು ಸ್ಥಾನವನ್ನು ಮಾತ್ರ ಭಾಜಪ ನಾಯಕತ್ವದ ಮೈತ್ರಿಕೂಟವು ಒಂದು ಎಡಪಕ್ಷಕ್ಕೆ ಬಿಟ್ಟುಕೊಟ್ಟಿತ್ತು). ಸೈದ್ಧಾಂತಿಕ ಬದ್ಧತೆಯೆನ್ನಿ, ಅವಕಾಶವಾದಿತನವೆನ್ನಿ, ಅಡ್ಡಿಯಿಲ್ಲ; ಆದರೆ ಉತ್ತರ ಪ್ರದೇಶದಲ್ಲಿ ಸಮಾಜವಾದಿ ಪಕ್ಷ ಮತ್ತು ಬಹುಜನ ಸಮಾಜಪಕ್ಷ ಮೈತ್ರಿಕೂಟ ರಚಿಸಿಕೊಂಡಿದ್ದು ಶ್ಲಾಘನೀಯ. ಆ ಮಾದರಿಯು ಭಾಜಪ ವಿರೋಧಿ ಹೋರಾಟಕ್ಕೆ ಸೂಕ್ತವಾದ ಸಂರಚನೆ ಎನ್ನಬಹುದು. ತತ್ತ್ವಾಧಾರಿತ ಮೈತ್ರಿಕೂಟ ರಚಿಸಿಕೊಳ್ಳಲು ವಿಫಲವಾದ ರಾಜಕೀಯ ಪಕ್ಷಗಳು ಭಾಜಪವನ್ನು ಎದುರಿಸಲು ಬದ್ಧವಾಗಿವೆಯೇ ಎಂಬುದು ಅನುಮಾನಾಸ್ಪದವಾಗಿದೆ. ಲೆಕ್ಕಾಚಾರಗಳು ತಲೆಕೆಳಗಾಗಿ ಭಾಜಪವು ಕೇಂದ್ರದಲ್ಲಿ ಮತ್ತೆ ಅಧಿಕಾರಕ್ಕೆ ಬಂದರೆ ಈ ಪಕ್ಷಗಳು ಅದರ ನೀತಿಗಳನ್ನು ಪರಾಮರ್ಶೆ ಮಾಡಿ ಜನಪರವಾದ ಕಾರ್ಯಕ್ರಮಗಳನ್ನು ಮಾತ್ರ ಜಾರಿಗೊಳಿಸಲು ಆಗ್ರಹಿಸುವ ದಿಟ್ಟತನವನ್ನು ತೋರಿಯಾವೆ? ಚುನಾವಣಾ ಫಲಿತಾಂಶದ ನಂತರ ಮೈತ್ರಿಕೂಟ ಅಸ್ತಿತ್ವಕ್ಕೆ ಬಂದರೆ ಅದೆಷ್ಟು ಕಾಲ ಗಟ್ಟಿಯಾಗಿ ಉಳಿದು ಜನಪರ ನೀತಿಗಳನ್ನು ಜಾರಿಗೊಳಿಸಿಯಾವು? ಈ ಇಡೀ ವಿಶ್ಲೇಷಣೆಯು ಪೂರ್ತಿ ದಾರಿ ತಪ್ಪಿದ್ದರೆ ಅಸಂತೃಪ್ತಿಗೇನೂ ಆಸ್ಪದವಿಲ್ಲ, ಆದರೆ ಕಾಂಗ್ರೆಸ್ ತನ್ನ ದೊಡ್ಡಣ್ಣತನವನ್ನು ಮರೆಯುತ್ತಾ ಹೋದರೆ ಭವಿಷ್ಯವು ಮಸುಕಾಗುವುದನ್ನು ತಪ್ಪಿಸಲಾಗುವುದಿಲ್ಲವೆನಿಸುತ್ತದೆ. ಇನ್ನೊಂದು ಷರಾ: ಕನ್ಹಯ್ಯಕುಮಾರ್ ಲೋಕಸಭೆಗೆ ಬೇಕೇ ಬೇಕು, ಆದರೆ ಆತನೊಬ್ಬನೇ ಏನೇನೂ ಸಾಲದು. ಆತನ ಜೊತೆ ಇನ್ನೆಷ್ಟು ಮಂದಿ ಎಡಪಕ್ಷಗಳ ಪ್ರತಿನಿಧಿಗಳಿರುತ್ತಾರೋ ಕಾದು ನೋಡೋಣ. ಆತನೇ ಇಲ್ಲದಂತಹ ಲೋಕಸಭೆ ಈ ಬಾರಿ ಅಸ್ತಿತ್ವಕ್ಕೆ ಬರುವುದಿಲ್ಲವೆಂಬ ಭರವಸೆ ಅತಾರ್ಕಿಕವಲ್ಲ.

✶ ✶ ✶

ಸರ್ವೋಚ್ಚ ನ್ಯಾಯಾಲಯವು ಪ್ರಮುಖವೂ ಆತಂಕಕಾರಿಯೂ ಆದ ಒಂದು ಪ್ರಶ್ನೆಯನ್ನೆತ್ತಿತು. ರಫ಼ಾಲ್ ಹಗರಣ ಮತ್ತು ನ್ಯಾಯಾಲಯ ನಿಂದನೆ, ಇವೆರಡನ್ನೂ ಜೊತೆಯಾಗಿಸಿ ವಿಚಾರಣೆ ನಡೆಸುವುದಾಗಿ ಮೊದಲು ಹೇಳಿತ್ತು ಮತ್ತು ವಿಚಾರಣೆಗೆ ದಿನಾಂಕವನ್ನು ಸೂಚಿಸಿ ನ್ಯಾಯಾಲಯದಲ್ಲೇ ಪ್ರಕಟಿಸಿತ್ತು. ಆ ಸಮಾಚಾರವು ಪತ್ರಿಕೆಗಳಲ್ಲೂ ವರದಿಯಾಗಿತ್ತು. ನ್ಯಾಯಾಲಯದ ಸಿಬ್ಬಂದಿಯಲ್ಲಿ ಅಧಿಕಾರಿಗಳು ನ್ಯಾಯಮೂರ್ತಿಗಳ ಮೌಖಿಕ ಆಜ್ಞೆಗಳನ್ನು ದಾಖಲಿಸಿಕೊಂಡು ನಡಾವಳಿಗಳನ್ನು ಅಧಿಕೃತವಾಗಿ ಪ್ರಕಟಿಸುವುದು ಪದ್ಧತಿ. ರಫ಼ಾಲ್ ಮತ್ತು ನ್ಯಾಯಾಲಯ ನಿಂದನೆ ಪ್ರಕರಣದಲ್ಲಿ ಮಾಹಿತಿಯನ್ನು ಸಂಬಂಧಪಟ್ಟ ಅಧಿಕಾರಿಗಳು ತಪ್ಪಾಗಿ ದಾಖಲಿಸಿಕೊಂಡು ಪ್ರಕಟಿಸಿಬಿಟ್ಟರು. ಬೇಸಿಗೆ ರಜಾ

ಆರಂಭವಾಗುವ ಮುನ್ನಾ ದಿನ ಎರಡೂ ಮೊಕದ್ದಮೆಗಳ ವಿಚಾರಣೆ ಒಮ್ಮೆಗೇ ನಡೆಸುವ ಆಶಯ ನ್ಯಾಯಮೂರ್ತಿಗಳದು; ಅಧಿಕಾರಿಗಳು ಅದರಲ್ಲಿ ರಫ಼ಾಲ್ ಹಗರಣದ ವಿಚಾರವನ್ನು ಬಿಟ್ಟು ನ್ಯಾಯಾಲಯ ನಿಂದನೆಯೊಂದನ್ನು ವಿಚಾರಣೆಗೆ ಬರುವ ವಿಷಯಗಳ ಪಟ್ಟಿಯಲ್ಲಿ ಸೇರಿಸಿದರು. ಆ ವಿಚಾರಣಾ ದಿನದಂದು ಇದು ನ್ಯಾಯಮೂರ್ತಿಗಳ ಗಮನಕ್ಕೆ ಬಂದು ಅವರು ಭಾರಿ ಸಿಟ್ಟಾದರು. "ನ್ಯಾಯಾಲಯದಲ್ಲಿ ಇದೇನು ನಡೆಯುತ್ತಿದೆ, ಹೇಗೆ ಇದೆಲ್ಲಾ ಸಾಧ್ಯವಾಯಿತು" ಎಂದು ಹೇಳಿ ರಫ಼ಾಲ್ ಹಗರಣದ ಬಗೆಗಿನ ಅಫಿಡವಿಟ್‌ಅನ್ನು ಸಲ್ಲಿಸಲು ಕೇಂದ್ರ ಸರ್ಕಾರಕ್ಕೆ ಮೂರು–ನಾಲ್ಕು ದಿನಗಳ ಗಡುವನ್ನು ಕೊಟ್ಟರು. ತರುವಾಯ ನ್ಯಾಯಾಲಯ ದಿಂದ ಈ ಕುರಿತು ಸಮಾಚಾರವೇನೂ ಬಂದಂತಿಲ್ಲ. ನ್ಯಾಯಾಲಯದ ಬೇಸಿಗೆ ರಜೆಯೂ ಆರಂಭ ವಾಯಿತು. ರಫ಼ಾಲ್ ಬಗೆಗಿನ ಕೇಂದ್ರ ಸರ್ಕಾರದ ಹೇಳಿಕೆಯನ್ನು ನೀಡಬೇಕಾದ ದಿನವನ್ನು ಅನಿರ್ದಿಷ್ಟ ವಾಗಿ ಮುಂದೂಡುವಂತೆ ಮಾಡುವ ಸಂಚು ನಡೆದಿದೆಯೆಂಬುದು ಮೇಲ್ನೋಟಕ್ಕೆ ತಿಳಿಯುತ್ತದೆ. ನ್ಯಾಯಾಲಯದ ತೀರ್ಮಾನವನ್ನು ದಾಖಲಿಸಿ ಕೊಂಡು ಪ್ರಕಟಿಸುವ ವಿಭಾಗದ ಅಧಿಕಾರಿಗಳು ಏಕೆ ಹೀಗೆ ಮಾಡಿದರೆಂಬುದನ್ನು ನ್ಯಾಯಮೂರ್ತಿಗಳು ತನಿಖೆ ನಡೆಸುತ್ತಾರೆಂದು ನಿರೀಕ್ಷಿಸಬಹುದಾಗಿದೆ. ಆ ರಫ಼ಾಲ್ ಹಗರಣದ ಬಗೆಗಿನ ವಿಚಾರಣೆಯನ್ನು ಕೈಗೆತ್ತಿಕೊಳ್ಳದಂತೆ ಮಾಡುವ ಹುನ್ನಾರವು ಇದರ ಹಿನ್ನೆಲೆಯೆಂದು ಭಾವಿಸಲಾಗುತ್ತದೆ. ಅದೂ ಚುನಾವಣೆಯ ಸಂದರ್ಭದಲ್ಲಿ ವಿಚಾರಣೆಯನ್ನು ಸ್ಥಗಿತಗೊಳಿಸಬೇಕೆಂಬ ಉದ್ದೇಶ ಹೊಂದಿರಬಹುದು ಎಂದು ಶಂಕಿಸಲಾಗಿದೆ. ದೇಶದ ಸರ್ವೋಚ್ಚ ನ್ಯಾಯಾಲಯದ ನಡಾವಳಿಯಲ್ಲೇ ಮೂಗುತೂರಿಸಿ ವಿಚಾರಣೆಯ ಹಾದಿತಪ್ಪಿಸುವಷ್ಟು ಪ್ರಭಾವ ಬೀರುವ ಶಕ್ತಿಗಳು ಯಾವುವು, ಅವು ಯಾರ ಮೂಲಕ ತಮ್ಮ ಮಧ್ಯಪ್ರವೇಶವನ್ನು ಸಾಧ್ಯವಾಗಿಸಿಕೊಂಡಿವೆ ಎಂಬ ನಿಗೂಢ ಪ್ರಶ್ನೆಗೆ ಉತ್ತರ ಬೇಕಾಗಿದೆ. ಫ್ರಾನ್ಸ್ ಈ ಮೊಕದ್ದಮೆಯಲ್ಲಿ ಆಸಕ್ತಿ ಹೊಂದಿರುವಂತೆ ನಮ್ಮ ದೇಶದ ಕೆಲವು ಕಂಪನಿಗಳು ಮತ್ತು ಕೇಂದ್ರ ಸರ್ಕಾರ ಇದರಲ್ಲಿ ಸಹಜವಾಗಿಯೇ ಆಸಕ್ತಿ ಹೊಂದಿವೆ. ನ್ಯಾಯಾಲಯದ ನಡಾವಳಿಯ ತೀರ್ಮಾನಗಳನ್ನೇ ತಿರುಚಲು ಸಮರ್ಥವಾದ ಕೈಗಳು ಉಕ್ಕಿನಷ್ಟು ಗಟ್ಟಿಯಾಗಿರಬೇಕು. ಹಗರಣವನ್ನು ಚಾಪೆ ಕೆಳಗೆ ತೂರಿಸುವ ಉದ್ದೇಶವಿರುವ ಹಲವು ಮಂದಿಗಳ ಬಗ್ಗೆ ಗುಮಾನಿ ಸಾಧ್ಯ, ಆದರೆ ಆಧಾರ ಇಲ್ಲದೆ ಅದನ್ನು ನಂಬಲಾಗದು. ವಿದೇಶಿ ಕೈವಾಡ ಇರಲಿ, ಸ್ವದೇಶಿ ಕೈವಾಡವಿರಲಿ, ಇದೊಂದು ಕರಾಳ ಬೆಳವಣಿಗೆ ಎಂಬುದರಲ್ಲಿ ಸಂಶಯವಿಲ್ಲ. ಇದನ್ನು ಗಂಭೀರವಾಗಿ ಪರಿಗಣಿಸಿ ನ್ಯಾಯಾಲಯವು ಸರ್ವತೋಮುಖ ಸಾಧ್ಯತೆಗಳನ್ನು ಗುರುತಿಸಬೇಕು; ಸಂಬಂಧಪಟ್ಟ ಅಧಿಕಾರಿಗಳನ್ನು ಅವರ ಸ್ಥಾನಗಳಿಂದ ಹೊರಕ್ಕೆ ಹಾಕಬೇಕು; ಯಾರ ಪ್ರಚೋದನೆಯಿಂದ ಇದು ಸಾಧ್ಯವಾಯಿತೆಂಬುದನ್ನು ಕಂಡುಹಿಡಿದು ಅದನ್ನು ಸಾರ್ವಜನಿಕರೊಂದಿಗೆ ಹಂಚಿಕೊಳ್ಳಬೇಕು. ನ್ಯಾಯಾಲಯದಲ್ಲಿ ನ್ಯಾಯಮೂರ್ತಿಗಳು ಅತ್ಯಾಶ್ಚರ್ಯ ಮತ್ತು ಅಸಮಾಧಾನವನ್ನು ವ್ಯಕ್ತಪಡಿಸಿದ್ದರು. ಪ್ರಕರಣವು ಅಲ್ಲಿಗೆ ಮುಕ್ತಾಯವಾಗಬಾರದು. ನಮ್ಮ ದೇಶದ ಸಾರ್ವಭೌಮತ್ವ, ನ್ಯಾಯಾಲಯದ ಹಿರಿಮೆ, ಇವನ್ನೆಲ್ಲಾ ಅಲುಗಾಡಿಸುವ ಸಂಚು ನಡೆದಿದೆಯೆಂದು ಊಹಿಸಬಹುದಾಗಿದೆ. ಕಾಣದ ಕೈಗಳು ಕಾಣದೆ ಉಳಿಯಬಾರದು. ಸರ್ವೋಚ್ಚ ನ್ಯಾಯಾಲಯವು ಇಡೀ ಪ್ರಕರಣದ ಬಗ್ಗೆ ತನ್ನ ನಿಲುವನ್ನು ಬಹಿರಂಗವಾಗಿ ಪ್ರಕಟಿಸಿ ನಮ್ಮ ಸಂವಿಧಾನಾತ್ಮಕ ಸಂಸ್ಥೆಗಳ ಸ್ವಾಯತ್ತತೆಗೆ ಏನೂ ಧಕ್ಕೆ ಬರುವುದಿಲ್ಲ ಎಂಬ ಭರವಸೆಯನ್ನು ನೀಡಬೇಕು. ಬೇಸಿಗೆ ರಜೆ ಕಳೆದ ನಂತರ ಈ ವಿಚಾರದ ವಿವರಗಳು ತಿಳಿಯಬರುತ್ತವೆಂದು ನಿರೀಕ್ಷಿಸೋಣ.

* * *

ನಮ್ಮ ದೇಶದಲ್ಲಿ ಏನೆಲ್ಲಾ ನಡೆಯುತ್ತಿದೆ ಎಂದು ತಿಳಿದರೆ ಎದೆ ಝಲ್ಲೆನ್ನುತ್ತದೆ. ಮೃಗೀಯ ಕ್ರೌರ್ಯವು ಎಷ್ಟು ಘೋರ ರೂಪ ತಾಳುತ್ತಿದೆ ಎಂದು ವ್ಯಸನ ವಾಗುತ್ತದೆ, ಆತಂಕ ಮೂಡುತ್ತದೆ. ಇಂತಹ ಮೃಗೀಯ ವರ್ತನೆಯು ಭಾರತೀಯ ಸಂಸ್ಕೃತಿಯನ್ನು ರಕ್ಷಿಸುವ ಹೆಸರಿನಲ್ಲಿ ನಡೆಯುತ್ತಿದೆಯೆಂಬುದು ಸಂಕಟ ಉಂಟುಮಾಡುತ್ತಿದೆ, ನಮ್ಮ ಪ್ರಾಚೀನ ಪರಂಪರೆಯ ಮೌಲ್ಯಗಳನ್ನು ನಾಶ ಮಾಡಲಾಗುತ್ತಿದೆಯೆಂಬುದು ಆಕ್ರೋಶ ಉಂಟುಮಾಡುತ್ತಿದೆ. ಸಂಸ್ಕೃತಿಯ ಹೆಸರಿನಲ್ಲಿ ಇಂತಹ ಕುಕೃತ್ಯಗಳು ಅಸಹನೀಯ. ನಮ್ಮ ದೇಶದ ಉತ್ತರ ಭಾಗದ ಒಂದು ರಾಜ್ಯದ ಕಾರಾಗೃಹ; ಅಲ್ಲಿ ಅಪರಾಧಿಗಳು, ಅಪರಾಧ ಎಸಗಿದ್ದಾರೆಂದು ಶಂಕಿಸಲಾದ ಆಪಾದಿತರು, ಇದ್ದಾರೆ. ಅವರಲ್ಲಿ ವಿವಿಧ ಕೋಮಿನವರು, ವರ್ಣದವರು ಇರುವುದು ಸಹಜ. ಕಾರಾಗೃಹದ ಯಾವನೋ ದುಷ್ಟ ಅಧಿಕಾರಿ ಒಬ್ಬ ಆಪಾದಿತನ ಬೆನ್ನಮೇಲೆ ಕಾದ ಕಬ್ಬಿಣದ ಸಲಾಕೆಯಿಂದ ದೊಡ್ಡದಾಗಿ "ಓಂ" ಎಂಬಕ್ಷರವನ್ನು ದೇವನಾಗರಿ ಲಿಪಿಯಲ್ಲಿ ಬಿಡಿಸಿದ್ದಾನೆ. ಆಪಾದಿತನು ಹಿಂದುವೋ ಅಥವಾ ಹಿಂದುಯೇತರನೋ ಎಂಬುದು ಗೌಣ. ಈ ಅಧಿಕಾರಿಯು ಅವನನ್ನು ಶಿಕ್ಷಿಸಲು "ಓಂ" ಎಂದು ಬೆನ್ನಿನ ಮೇಲೆ ಅರ್ಧ ಅಂಗುಲ ಆಳದ ಚಿಹ್ನೆಯನ್ನು ದೊಡ್ಡದಾಗಿ ಮೂಡಿಸಬೇಕಾದರೆ ಅದೆಷ್ಟು ಭಯಂಕರ ಹಿಂಸೆ ನೀಡಿರಬೇಕು! ಇದಕ್ಕಿಂತಲೂ ಹೆಚ್ಚಿನ ಹೀನಾಯ ಶ್ವಪಚತನವನ್ನು "ಓಂ" ಬಗ್ಗೆ ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ಇದು ಕೇವಲ ಹಿಂಸೆಯಲ್ಲ, ನಮ್ಮ "ಓಂ" ಎಂಬುದರ ಅತ್ಯಂತ ನೀಚಮಟ್ಟದ ದುರ್ಬಳಕೆ. ಇದು ನಮ್ಮ ದೇಶದ ಮೇಲೆ, ಅದರ ಪ್ರಾಚೀನ ಸಂಸ್ಕೃತಿಯ ಮೇಲೆ ಮತ್ತು "ಓಂ" ಮೇಲೆ ನಡೆದಿರುವ ಅತ್ಯಾಚಾರ. ಸಂಬಂಧಪಟ್ಟ ದುರುಳ ಅಧಿಕಾರಿಯನ್ನು ಬಹಿರಂಗವಾಗಿ ಶಿಕ್ಷಿಸಿ ಅವನನ್ನು ವೃತ್ತಿಯಿಂದ ಹೊರಗೆ ಹಾಕಬೇಕು; ಕಾರಾಗೃಹದ ಅಧಿಕಾರಿ ವರ್ಗವು ದೇಶದ ಕ್ಷಮೆ ಕೇಳಬೇಕು. ಇಂತಹ ಪಾತಕಗಳು ಇನ್ನೆಷ್ಟು ನಡೆದಿವೆಯೆಂಬುದರ ತನಿಖೆ ನಡೆಸಿ ವರದಿಯನ್ನು ಸಾರ್ವಜನಿಕರೆದುರು ಮಂಡಿಸಬೇಕು. ಬೆನ್ನಮೇಲೆ "ಓಂ" ಬರೆಸಿಕೊಳ್ಳಲು ಈ ಆಪಾದಿತ ಅನುಭವಿಸುವ ಹಿಂಸೆಗೆ 'ಹೊಸತು' ತನ್ನ ವ್ಯಗ್ರತೆ ಮತ್ತು ಸಂತಾಪವನ್ನು ಪ್ರಕಟಿಸುತ್ತದೆ.

* * *

ಎದುವಾರ್ದೊ ಗಲಿಯಾನೊ ದಕ್ಷಿಣ ಅಮೆರಿಕಾದ ಅತ್ಯಂತ ಪ್ರತಿಭಾನ್ವಿತ ಲೇಖಕ. "ಲ್ಯಾಟಿನ್ ಅಮೆರಿಕಾದ ಮುಕ್ತ ಅಭಿಧಮನಿಗಳು" ಎನ್ನುವ ಅವನ ಗ್ರಂಥ ಅಪೂರ್ವವಾದ್ದು. ಫಿಡೆಲ್ ಕ್ಯಾಸ್ಟ್ರೋ, ಹ್ಯೂಗೋ ಚಾವೇಜ಼್ ಮುಂತಾದವರು ಸಹ ತಮ್ಮ ದೇಶಗಳ ಶೋಷಣೆಯ ಇತಿಹಾಸವನ್ನು ಅವನಿಂದ ತಿಳಿದು ಸ್ವಕೀಯ ನೀತಿಗಳನ್ನು ರೂಪಿಸಿ ಅಭಿವೃದ್ಧಿಯ ಹಾದಿಯಲ್ಲಿ ಮುನ್ನಡೆದಿದ್ದಾರೆ. ಅವರಿಗೆಲ್ಲಾ ಗಲಿಯಾನೊ ವೈಯ್ಯಕ್ತಿಕವಾಗಿ ಸ್ನೇಹಿತನಾಗಿದ್ದವನು. ವಸಾಹತುಶಾಹಿಯು ನಮ್ಮ ದೇಶದ ಮೇಲೆ ನಡೆಸಿದ ಆರ್ಥಿಕ ಶೋಷಣೆಯನ್ನು ಸಮಗ್ರವಾಗಿ ತಿಳಿಯಲು ಗಲಿಯಾನೊ ಅಂತಹ ಒಬ್ಬ ಅರ್ಥಶಾಸ್ತ್ರಜ್ಞನ ಅವಶ್ಯಕತೆ ಇದೆ. ೨೦೦೮ರಲ್ಲಿ ಸ್ಪ್ಯಾನಿಶ್ ಭಾಷೆಯಲ್ಲಿ, ನಂತರ ೨೦೧೯ರಲ್ಲಿ ಇಂಗ್ಲಿಷ್‌ನಲ್ಲಿ ಅವನ 'ಮಿರರ್ಸ್' ಎಂಬ ಅದ್ಭುತ ಪುಸ್ತಕ ಪ್ರಕಟವಾಯಿತು. ಅದನ್ನು "ಬಹುಮಟ್ಟಿಗೆ ಎಲ್ಲರದೂ ಇತಿಹಾಸ" ವೆಂದು ಕರೆದಿದ್ದಾನೆ. ಗಲಿಯಾನೊ ೩೬೬ ಪುಟಗಳ ಆ ಪುಸ್ತಕದಿಂದ ಕೆಲವು ಆಯ್ದ ಉಪಕಥೆಗಳನ್ನು ಪ್ರಕಟಿಸಲು 'ಹೊಸತು' ಉದ್ದೇಶಿಸಿದೆ. ಪ್ರಸ್ತುತ ಒಂದೆರಡು ತುಣುಕುಗಳನ್ನು ನೀಡಲಾಗುತ್ತಿದೆ. (ಅನು : ಶ್ರೀ ವಿನಾಯಕ ಕುಲಕರ್ಣಿ ಅವರದು)

## ಕೊನೆಯ ಬಯಕೆ

ಲಾ ಕೊರುನಾ – ೧೯೩೬ರ ಬೇಸಿಗೆ: ಬೆಬೆಲ್ ಗಾರ್ಸಿಯಾನನ್ನು ಗುಂಡಿಟ್ಟು ಕೊಂದದ್ದು.

ಬೆಬೆಲ್ ಒಬ್ಬ ಎಡಪಂಥೀಯ, ಎಡಚ.

ಕಾಲ್ಚೆಂಡು ಮೈದಾನದಲ್ಲಿ ಆತ ಡಿಪೋರ್ ಜೆರ್ಸಿಯನ್ನು ಧರಿಸುವವ. ಮೈದಾನದಾಚೆ ಅವನು ಯುವ ಸಮಾಜವಾದಿಗಳ ಜೆರ್ಸಿ ಧರಿಸುವವ.

ಫ್ರಾಂಕೋನ ಕ್ರಾಂತಿಯ (ಮಿಲಿಟರಿ ಕಾರ್ಯಾಚರಣೆ) ಹನ್ನೊಂದು ದಿವಸಗಳ ನಂತರ ಆಗ ತಾನೇ ಇಪ್ಪತ್ತೊಂದು ವರ್ಷಗಳಿಗೆ ಕಾಲಿಡುತ್ತಿದ್ದಾಗಲೇ ಬೆಬೆಲ್ ಗುಂಡಿಟ್ಟು ಕೊಲ್ಲುವವರ ಮುಂದೆ ನಿಂತಿದ್ದಾನೆ.

"ಒಂದು ನಿಮಿಷ", ಅವನು ಉಸುರುತ್ತಾನೆ.

ಆ ಸೈನಿಕರು ಅವನಂತೆಯೇ ಕಾಲ್ಚೆಂಡು ಆಟದ ಅಭಿಮಾನಗಳಾಗಿದ್ದರು, ಅವನಂತೆಯೇ ಗೆಲಿಷಿಯನ್ ಆಗಿರುವುದರಿಂದ ಅವನ ವಿನಂತಿಯನ್ನು ಪುರಸ್ಕರಿಸುತ್ತಾರೆ.

ಬೆಬೆಲ್ ತನ್ನ ಪ್ಯಾಂಟಿನ ಝಿಪ್‌ನ ಒಂದೊಂದೇ ಗುಂಡಿಗಳನ್ನು ತೆರೆಯುತ್ತಾ, ಪಿಸ್ತೂಲಿನವರತ್ತ ಮುಖಮಾಡಿ ದೀರ್ಘವಾಗಿ ಉಚ್ಚೆ ಹೊಯ್ಯುತ್ತಾನೆ.

ಅನಂತರ ತನ್ನ ಪ್ಯಾಂಟ್‌ನ ಝಿಪ್ಪನ್ನು ಸರಿಪಡಿಸಿಕೊಂಡು, "ನೀವೀಗ ಮುಂದುವರೆಸಿ" ಎಂದು ಹೇಳುತ್ತಾನೆ.

*(೧೧ನೇ ಪುಟಕ್ಕೆ)*




## ಒಪ್ಪಂದ ಕೃಷಿಯಲ್ಲಿ ಕಾನೂನಿನ ಅರಿವು... “ಪೆಪ್ಸಿಕೋ–ಆಲೂ” ವ್ಯಾಜ್ಯದಿಂದ ಪಾಠ !

ಅಮೇರಿಕ ದೇಶದ ಉತ್ತರ ಕೆರೋಲಿನದಲ್ಲಿ ೧೮೯೩ರಲ್ಲಿ ಕ್ಯಾಲೆಬ್ ಬ್ರಾಢೆಮ್ ಎಂಬ ವ್ಯಕ್ತಿ ತನ್ನ ಔಷಧ ಮಳಿಗೆಯಲ್ಲಿ “ಬ್ರ್ಯಾಡ್ಸ್ ಡ್ರಿಂಕ್” ಎಂಬ ಹೆಸರಿನಡಿ ಪೇಯ ಒಂದನ್ನು ತಯಾರಿಸಿದ. ತದನಂತರ, ಕೆಲವು ಸುಧಾರಣೆಗಳ ಹಿನ್ನೆಲೆಯಲ್ಲಿ ೧೮೯೮ರಲ್ಲಿ ಈ ಪೇಯಕ್ಕೆ ‘ಪೆಪ್ಸಿ–ಕೋಲ’ ಎಂದು ಮರುನಾಮಕರಣ ಮಾಡಲಾಯಿತು. ೧೯೮೯ರಲ್ಲಿ ಭಾರತದಲ್ಲಿ ಪೆಪ್ಸಿಕೋ ಸಂಸ್ಥೆ ‘ಲೇಸ್’ ಆಲೂಗಡ್ಡೆ ಉಪ್ಪೇರಿಯನ್ನು (ಚಿಪ್ಸ್) ತಯಾರಿಸುವ ಘಟಕವನ್ನು ಸ್ಥಾಪಿಸಿ ಎಫ್.ಸಿ–೫ ತಳಿಯ ಆಲೂಗಡ್ಡೆ ಬಳಕೆಯನ್ನು ‘ಲೇಸ್ ಚಿಪ್ಸ್’ ತಯಾರಿಕೆಗಾಗಿ ಪರಿಚಯಿಸಿ ಈ ಆಲೂಗಡ್ಡೆ ತಳಿಯನ್ನು ಪೆಪ್ಸಿಕೋ ಸಂಸ್ಥೆ ತನ್ನ ಒಡೆತನಕ್ಕೆ ನೋಂದಣಿ ಮಾಡಿ ಭಾರತ ದೇಶದ ಗುಜರಾತ್ ರಾಜ್ಯದ ಕೆಲವು ಆಯ್ದ ರೈತಾಪಿ ವರ್ಗಕ್ಕೆ ಈ ಆಲೂಗಡ್ಡೆ ತಳಿಯ ಬೀಜವನ್ನು ವಿತರಿಸಿ ಅವರು ಬೆಳೆದ ಆಲೂಗಡ್ಡೆ ಬೆಳೆಯನ್ನು ಅದರ ಗುಣಮಟ್ಟದ ಹಾಗೂ ಗಾತ್ರದ ಅನ್ವಯ ಸಂಪೂರ್ಣ ಪ್ರಮಾಣ ವನ್ನು ಪೂರ್ವ ನಿಗದಿತ ಬೆಲೆ ನೀಡಿ ಕೊಳ್ಳುವ ಒಪ್ಪಂದ ಮಾಡಿಕೊಂಡಿತ್ತು. ಈ ಕರಾರಿನ ಪ್ರಕಾರ ಆಲೂಗಡ್ಡೆ ಗಾತ್ರ ೪.೫೦ ಸೆಂಟಿಮೀಟರ್‌ಗಿಂತಲೂ ಕಡಿಮೆ ಇರಬಾರದು, ಸೀಳಿರಬಾರದು ಹಾಗೂ ಆಲೂಗಡ್ಡೆಯ ಮೇಲ್ಮೈಯಲ್ಲಿ ಹಸಿರು ಬಣ್ಣದ ಮಚ್ಚೆಗಳಿರ ಬಾರದೆಂಬುದು ಕೆಲವು ಮಹತ್ತರವಾದ ಅಂಶಗಳು. ಎಫ್.ಸಿ–೫ ಆಲೂಗಡ್ಡೆಯ ವಿಶೇಷತೆ ಎಂದರೆ ಅತೀ ಕಡಿಮೆ ತೇವಾಂಶವಾಗಿದ್ದು ಚಿಪ್ಸ್ ತಯಾರಿಕೆಗೆ ಅತ್ಯಂತ ಸೂಕ್ತವಾಗಿರುವುದು. ಅಂದರೆ, ಈ ಎಫ್.ಸಿ–೫ ತಳಿಯ ಆಲೂಗಡ್ಡೆಯನ್ನು ದೇಶದ ಅನ್ಯ ರೈತರು ಬೆಳೆಯುವ ಹಾಗಿರುವುದಿಲ್ಲ ಎಂಬುದು ಒಪ್ಪಂದದ ಮೂಲ ಕರಾರಾಗಿತ್ತು. ಈ ಸಂದರ್ಭದಲ್ಲಿ ಮಂಡಿಸಲೇಬೇಕಾದ ಮಾಹಿತಿ ಎಂದರೆ ಪೆಪ್ಸಿಕೋ ಸಂಸ್ಥೆ ಎಫ್.ಸಿ–೫ ಆಲೂಗಡ್ಡೆಯ ಬೀಜಕ್ಕೆ ಸುಮಾರು ರೂ. ೧೩೦೦ ದರ (೫೦ ಕಿಲೊ ಚೀಲಕ್ಕೆ) ನಿಗದಿ ಪಡಿಸಿದ್ದು ಫಸಲನ್ನು ಖರೀದಿ ಮಾಡುವ ದರ ೨೦ ಕಿಲೋ ಚೀಲ ಒಂದಕ್ಕೆ ರೂ. ೧೯೬/–; ಆದರೆ, ಇನ್ನಿತರೆ ದೇಶೀಯ ಆಲೂಗಡ್ಡೆ ತಳಿಗಳ ಬೀಜ ಮಾರುಕಟ್ಟೆಯಲ್ಲಿ ಸುಮಾರು ರೂ. ೭೫೦ಕ್ಕೆ (೫೦ ಕಿಲೊ ಚೀಲ) ಲಭ್ಯವಿದ್ದು ಈ ಬೀಜದಿಂದ ಉತ್ಪಾದನೆಯಾದ ಆಲೂಗಡ್ಡೆಗೆ ಮಾರುಕಟ್ಟೆಯಲ್ಲಿ ರೂ. ೨೨೦/– (೨೦೦ ಕಿಲೊ ಚೀಲಕ್ಕೆ) ಸಿಗುತ್ತಿದ್ದು ಕಟಾವು ಮಾಡಿದ ಸಂಪೂರ್ಣ ಸರಕನ್ನು ಮಾರಾಟ ಮಾಡುವುದು ಒಪ್ಪಂದ ಕೃಷಿಗಿಂತ ಹೆಚ್ಚು ಲಾಭದಾಯಕವೆಂದು ತಿಳಿಸಲಾಗಿದೆ.

ಗುಜರಾತ್ ರಾಜ್ಯದಲ್ಲಿ ಅನೇಕ ರೈತಾಪಿ ಮಂದಿ ಹಲವಾರು ವರ್ಷಗಳಿಂದ ವಿವಿಧ ಆಲೂಗಡ್ಡೆ ತಳಿಗಳನ್ನು ಬೆಳೆಯುತ್ತಿದ್ದು ತಾವೇ ಬೆಳೆದ ಫಸಲಿನಿಂದ ತಯಾರಿಸಿದ ಬೀಜವನ್ನು ಮುಂದಿನ ಸಾಲಿನಲ್ಲಿ ಬಿತ್ತನೆ ಬೀಜವನ್ನಾಗಿ ಬಳಸಿಕೊಳ್ಳುವುದು ರಿವಾಜಾಗಿತ್ತು. ಆದರೆ, ಪೆಪ್ಸಿಕೋ ಸಂಸ್ಥೆಯ ಮಾಹಿತಿಯ ಅನ್ವಯ ಗುಜರಾತ್ ರಾಜ್ಯದ, ಸಬರ್‌ಕಾಂತಾ ಜಿಲ್ಲೆಯ ಒಂಬತ್ತು ಬೆಳೆಗಾರರು ಪೆಪ್ಸಿಕೋ ಸಂಸ್ಥೆ ತನ್ನ




ಹೆಸರಿನಲ್ಲಿ ನೋಂದಣಿ ಮಾಡಿರುವ ಆಲೂಗಡ್ಡೆ ತಳಿಯನ್ನು (ಎಫ್.ಸಿ–೫ ಅಥವಾ ಎಫ್.ಐ. ೨೦೨೭) ಕಾನೂನುಬಾಹಿರವಾಗಿ ಬಳಸಿ ಆಲೂಗಡ್ಡೆಯನ್ನು ಬೆಳೆದಿದ್ದು ಈ ವಿಚಾರದಲ್ಲಿ ನ್ಯಾಯಾಲಯದಲ್ಲಿ ದಾವೆ ಹೂಡಿದ್ದು ಈ ಒಂಬತ್ತು ಬೆಳೆಗಾರರಿಂದ ತಲಾ $ ೧,೪೨,೮೪೦/– ಅಂದರೆ ಸರಿಸುಮಾರು ಒಂದು ಕೋಟಿ ರೂ.ಗಳ ಪರಿಹಾರಕ್ಕೆ ಒತ್ತಾಯಿಸುತ್ತಿದ್ದು ಸ್ಥಳೀಯ ನ್ಯಾಯಾಲಯ ಸಹ ರೈತರ ವಿರುದ್ಧ ಎಫ್.ಸಿ–೫ ತಳಿಯ ಆಲೂಗಡ್ಡೆಯನ್ನು ಬೆಳೆಯದಂತೆ ತಡೆಯಾಜ್ಞೆಯನ್ನು ಜಾರಿಗೊಳಿಸಿದೆ. ನ್ಯಾಯಾಲಯದ ಈ ಆಜ್ಞೆಯಿಂದ ಒಂಬತ್ತು ಮಂದಿ ಆಲೂಗಡ್ಡೆ ಬೆಳೆಗಾರರು ವಿಚಲಿತರಾಗಿದ್ದು ಭಾರತೀಯ ಕಿಸಾನ್ ಸಂಘ ಹಾಗೂ ಇನ್ನಿತರೆ ರೈತ ಸಂಘ ಸಂಸ್ಥೆಗಳ ಮೊರೆ ಹೋಗಿದ್ದು ‘ಪೆಪ್ಸಿಕೋ’ ಸಂಸ್ಥೆಯ ವಿರುದ್ಧ ಒಗ್ಗಟ್ಟಿನ ಹೋರಾಟ ಆರಂಭವಾಗಿದೆ; ಮುಂದುವರೆದು, ರೈತಾಪಿ ವರ್ಗ ಹಾಗೂ ಸಂಘ ಸಂಸ್ಥೆಗಳು PPV & FR (Protection of Plant Varieties & Farmers Rights Authority) ಕಾಯಿದೆಯ ೬೪ನೇ ಪರಿಚ್ಛೇದದ ಅನ್ವಯ ಯಾವುದೇ ಸಂಸ್ಥೆ ರೈತಾಪಿ ವರ್ಗದ ಪೂರ್ವ ಅನುಮತಿ ಇಲ್ಲದೇ ಆತನ ಜಮೀನಿನಲ್ಲಿ ಪ್ರವೇಶಿಸುವುದು ಅತಿಕ್ರಮಣ ಎಂದು ವಾದ ಮಂಡಿಸುತ್ತಿವೆ; ಹಾಗೂ ಪೆಪ್ಸಿಕೋ ಸಂಸ್ಥೆ ವಿತರಿಸುವ ಆಲೂಗಡ್ಡೆ ಬೀಜ ಜಿ.ಎಮ್. ತಳಿಯಾಗಿದ್ದು ಅದರಿಂದ ಬೀಜೋತ್ಪಾದನೆಯ ಬಗ್ಗೆಯೂ ಸಂದೇಹಗಳಿವೆ! ಆ ಸಂಸ್ಥೆಯಿಂದಲೇ ಪ್ರತಿ ಬಾರಿ ದುಪ್ಪಟ್ಟು ಬೆಲೆ ನೀಡಿ ಬೀಜ ಕೊಳ್ಳುವುದು ಅನಿವಾರ್ಯವಾಗಿದೆ ಎಂಬುದು ಆಲೂಗಡ್ಡೆ ಬೆಳೆಗಾರರ ವಾದ; ಈ ಸಂದರ್ಭದಲ್ಲಿ ರೈತಾಪಿ ವರ್ಗ ಎತ್ತಿರುವ ಮತ್ತೊಂದು ಕಾನೂನಾತ್ಮಕ ಸವಾಲೆಂದರೆ ಕೃಷಿ ಬೆಳೆಗಳ, ಸಸ್ಯಗಳ ವಿಚಾರದಲ್ಲಿ ಒಡೆತನದ (Patent) ದಾಖಲೆ ಸಾಧ್ಯವೇ, ಎಂಬುದಾಗಿದೆ. ಇವೆಲ್ಲ ವಿವಾದಗಳ ನಡುವೆ ಕಾನೂನು ತಜ್ಞರ ವ್ಯಾಖ್ಯಾನದ ಅನ್ವಯ “ಯಾವುದೇ ಒಬ್ಬ ರೈತ ತಾನು ಬೆಳೆದ ಕೃಷಿ ಪದಾರ್ಥಗಳನ್ನು ಉಳಿಸಿಕೊಳ್ಳುವುದು, ಬಳಸುವುದು, ಬಿತ್ತುವುದು, ಮರುಬಿತ್ತನೆ ಮಾಡುವುದು, ವಿನಿಮಯ ಮಾಡಿಕೊಳ್ಳುವುದು, ಪಾಲು ಮಾಡುವುದು ಅಥವಾ ಮಾರಾಟ ಮಾಡುವುದಕ್ಕೆ PPV & FR ೨೦೦೧ರ ಕಾಯಿದೆಯ ೩೯(೪)ನೇ ಕಲಂನ ಪ್ರಕಾರ ಯಾವುದೇ ನಿರ್ಬಂಧ ಇರದು” ಎಂಬ ವಾದವನ್ನು ಮಂಡಿಸಿವೆ. ಮಾತ್ರವಲ್ಲ, ಆಲೂಗಡ್ಡೆ ಬೆಳೆಗಾರರ ಮತ್ತೊಂದು ಗುರುತರವಾದ ಬಗೆಹರಿಯದ ಸಮಸ್ಯೆ ಎಂದರೆ ಗುಣಮಟ್ಟದ ಪದಾರ್ಥವನ್ನು ಸಂಸ್ಥೆ ಖರೀದಿ ಮಾಡಿ ಉಳಿದ ಸರಕನ್ನು ಬಳಸುವ ರೀತಿಯ ಬಗ್ಗೆ ಯಾವುದೇ ಮಾನದಂಡಗಳು, ಸೂಚನೆಗಳು ನಿಖರವಾಗಿಲ್ಲದಿರುವುದು; ಒಟ್ಟು ಫಸಲಿನಲ್ಲಿ ಸುಮಾರು ೧೫ ಶೇಕಡ ಪದಾರ್ಥ ರೈತಾಪಿ ವರ್ಗದ ಬಳಿಯಲ್ಲಿಯೇ ಉಳಿಯುವ ಹಿನ್ನೆಲೆಯಲ್ಲಿ ಅದರ ಸೂಕ್ತ ವಿಲೇವಾರಿಯ ಬಗ್ಗೆ ಗೊಂದಲಗಳು ಹೆಚ್ಚಾಗಿವೆ. ವ್ಯಾಜ್ಯಕ್ಕೆ ಕಾರಣವಾಗಿದೆ.

ಈ ಎಲ್ಲ ಅಹಿತಕರ ಬೆಳವಣಿಗೆಗಳ ಹಿನ್ನೆಲೆಯಲ್ಲಿ, ಸಮಸ್ಯೆ ಉಲ್ಬಣಗೊಳ್ಳುವುದನ್ನು ತಡೆಯುವ ಉದ್ದೇಶದಿಂದ, ‘ಲೇಸ್ ಚಿಪ್ಸ್’ ತಯಾರಿಸುವ ‘ಪೆಪ್ಸಿಕೋ’ ಸಂಸ್ಥೆ ನ್ಯಾಯಾಲಯದ ಸುಪರ್ದಿನ ಆಚೆ ಸಮಸ್ಯೆಯ ಇತ್ಯರ್ಥಕ್ಕೆ ಇರಾದೆ ವ್ಯಕ್ತಪಡಿಸಿದ್ದು ಪ್ರಕರಣದ ವಿಚಾರಣೆಯನ್ನು ಜೂನ್ ೧೨ಕ್ಕೆ ಮುಂದೂಡಲಾಗಿದ್ದು ಸೌಹಾರ್ದದ ಪರಿಹಾರಕ್ಕೆ ಎರಡೂ ಬಣಗಳು ಎದುರು ನೋಡುತ್ತಿವೆ. ಈ ಸಂದರ್ಭದಲ್ಲಿ ಪೆಪ್ಸಿಕೋ ಸಂಸ್ಥೆಯ ವಾದ ಕಾನೂನಿನ ಪರಿಮಿತಿಯಲ್ಲಿ ಸಮಂಜಸವಾಗಿದ್ದರೂ ಅಮಾಯಕ ರೈತಾಪಿ ವರ್ಗದ ಮಾನಸಿಕ ಸ್ಥಿತಿ–ಗತಿಗಳನ್ನು ಪರಿಗಣಿಸಿ ಸಮಸ್ಯೆಯ ಸೂಕ್ತ ಪರಿಹಾರಕ್ಕೆ ಮುಂದಾಗಲು ಗುಜರಾತ್ ರಾಜ್ಯ ಸರ್ಕಾರ ಸಹ ಪ್ರಯತ್ನಗಳನ್ನು ಮಾಡುತ್ತಿದೆ.... ವಿದೇಶಿ ಸಂಸ್ಥೆಗಳಿಂದ ಬಂಡವಾಳ ಹೂಡಿಕೆಯೂ ಪ್ರಮುಖ, ಸ್ಥಳೀಯ ರೈತಾಪಿ ಮಂದಿಯ ಒಳಿತೂ ಸಹ ಅಷ್ಟೇ ಮುಖ್ಯ, ನ್ಯಾಯಾಲಯದ ಅಭಿಪ್ರಾಯವನ್ನೂ ಸಹ ನಿರ್ಲಕ್ಷಿಸುವಂತಿಲ್ಲ ಎಂಬ ಸೂತ್ರದ ಆಧಾರದಡಿ

ಸಮಸ್ಯೆಯ ಸೌಹಾರ್ದಯುತ ಪರಿಹಾರಕ್ಕೆ ಪ್ರಯತ್ನಗಳಾಗುತ್ತಿವೆ. ಒಪ್ಪಂದ ಕೃಷಿಯತ್ತ ಒಲವಿರುವ ರೈತಾಪಿ ವರ್ಗಕ್ಕೆ ಇದೊಂದು ಕಣ್ಣು ತೆರೆಸುವ ವಿಚಾರವಾಗಿದೆ ಎಂದರೂ ಸಹ ತಪ್ಪಾಗದು! ಒಪ್ಪಂದ ಕೃಷಿಯಲ್ಲಿನ ಸಾಧಕ–ಬಾಧಕಗಳನ್ನು ಪೂರ್ವಭಾವಿಯಾಗಿ ಪರಿಶೀಲಿಸಿ, ಪರಿಗಣಿಸಿ, ಚರ್ಚಿಸಿದ ನಂತರವಷ್ಟೇ ಒಪ್ಪಂದಕ್ಕೆ ಸಹಿ ಮಾಡಬೇಕಿರುವುದು ರೈತಾಪಿ ವರ್ಗದ ಕಾನೂನಾತ್ಮಕ ಜವಾಬ್ದಾರಿಯಾಗಿದ್ದು ಮುಂದಿನ ದಿನಗಳಲ್ಲಿ ದೇಶದ ವ್ಯವಸಾಯಗಾರರಿಗೆ "ಪೆಪ್ಸಿಕೊ–ಆಲೂ" ವ್ಯಾಜ್ಯ ಅತ್ಯಂತ ಬೋಧಪ್ರದ ನಿದರ್ಶನವಾಗಿದೆ ಎಂದರೆ ತಪ್ಪಾಗದು! ಒಟ್ಟಾರೆಯಾಗಿ ರೈತಾಪಿ ಮಂದಿ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆಯುವಾಗಲೂ, ಒಪ್ಪಂದ ಕೃಷಿಯ ದಾಖಲೆಗಳ ಮೇಲೆ ಹಸ್ತಾಕ್ಷರ ಮಾಡುವಾಗಲೂ ನುರಿತ, ಅನುಭವಿಗಳ ಸಲಹೆ ಪಡೆಯುವುದು ಸೂಕ್ತವಾದೀತು... ಅನಕ್ಷರಸ್ಥರ ಬಳಿ ಒಪ್ಪಂದ ಪತ್ರಕ್ಕೆ ಸಹಿ ಹಾಕಿಸಿಕೊಳ್ಳುವಾಗ ಕೂಡ ಸಾಮಾಜಿಕ ಜವಾಬ್ದಾರಿ ತೋರ ಬೇಕಿರುವುದು ಸಂಸ್ಥೆಗಳ ಕರ್ತವ್ಯವಾಗಿರುತ್ತದೆ. ಈ ವಿಚಾರದಲ್ಲಿ ವಿವಿಧ ರಾಜ್ಯ ಸರ್ಕಾರಗಳು ತಮ್ಮ ತಮ್ಮ ಕಾನೂನು ಪ್ರಾಧಿಕಾರದ ಸೇವೆಯನ್ನು ಗ್ರಾಮೀಣ ಭಾಗದ ರೈತಾಪಿ ವರ್ಗಕ್ಕೆ ತಲುಪಿಸುವ ಪ್ರಯತ್ನಕ್ಕೆ ಮುಂದಾಗಬೇಕೆನ್ನುವುದು ಕೇವಲ ಮನವಿಯಲ್ಲ, ಆಗ್ರಹ ಕೂಡ! ಕಾರಣ, ಅಪಾರ ಬಂಡವಾಳ ಹೂಡುವ ವಿದೇಶೀ ಸಂಸ್ಥೆಗಳು ಹೆಜ್ಜೆ–ಹೆಜ್ಜೆಯಲ್ಲಿಯೂ ಸಹ ಕಾನೂನಿನ ಸಲಹೆ ಪಡೆದೇ ಮುಂದುವರೆಯುವ ರಿವಾಜನ್ನು ಕಾನೂನಿನ ಹೋರಾಟದಿಂದ ಗೆಲ್ಲುವುದು ಕಠಿಣವಾದರೂ ಅನುಕೂಲಸಿಂಧು ರಾಜಕೀಯ ಕೆಸರೆರಚಾಟಕ್ಕೆ ನಾಂದಿಯಾಗಬಾರದು ಎಂಬ ವಾಸ್ತವವನ್ನು ಮನಗಾಣಬೇಕಿದೆ.

ಹಾಸನ **ರಾಜೀವ್ ಎನ್. ಮಾಗಲ್**

## ಮುಟ್ಟು

✉ ಸದಾ ಚಿಂತಿತಳಾಗಿರುವ ಕಲಾ ತನ್ನ ಸಹೋದ್ಯೋಗಿಗಳೊಂದಿಗೆ ನಗುತ್ತಾ ಕಾಲ ಕಳೆಯುತ್ತಿದ್ದಳಷ್ಟೆ. ಮನದ ನೋವು ಮಾತ್ರ ಯಾರಲ್ಲಿಯೂ ಹಂಚಿಕೊಂಡವಳಲ್ಲ.

ಇತ್ತೀಚೆಗೆ ಬಹು ಚರ್ಚಿತವಾಗಿರುವ ಶಬರಿಮಲೆ ಪ್ರವೇಶ ಅವಳಲ್ಲಿ ಚೂರು ಆಶಾಭಾವನೆ ಮೂಡಿಸಿದರೂ, ಅದು ತನ್ನ ಬದುಕಿನಲ್ಲಿ ಜಾರಿಗೊಳ್ಳಬಹುದೇ ಎನ್ನುವ ಚಿಂತೆ ಅವಳನ್ನು ಸದಾ ಕಾಡುತ್ತಿತ್ತು...! ಜಯಮಾಲಾಳಂತೆ ಅಯ್ಯಪ್ಪ ಸ್ವಾಮಿಯ ದರ್ಶನಾಪೇಕ್ಷಿಯಾಗಿದ್ದಳು. ಆದರೆ ಗಂಡ ಶಂಕರ ಮಾತ್ರ ಎಂದಿಗೂ ಒಪ್ಪದ ವ್ಯಕ್ತಿ. ತರಗತಿ ಕ್ಲಾಸ್ ಮುಗಿಸಿ ಮನೆಗೆ ಹೊರಡುತ್ತಿದ್ದಂತೆ ಸಹೋದ್ಯೋಗಿ ರಜನಿ ಜತೆಗೂಡಿದಳು.

ದೇವಸ್ಥಾನ ಪ್ರವೇಶದ ಬಗ್ಗೆ ನೀನೇನು ಹೇಳ್ತಿ?

ಪ್ರಶ್ನೆಗೆ ಕಲಾ ಕ್ಷಣಹೊತ್ತು ಮಂಕಾಗಿ ರಜನಿಯ ಮುಖವನ್ನೇ ಕೌತುಕದಲ್ಲಿ ದಿಟ್ಟಿಸಿದಳು.

ಪುರುಷನಂತೆ ಮಹಿಳೆಯೂ ಪ್ರವೇಶಿಸಬಹುದು. ದೇವರನ್ನು ಮುಟ್ಟಬಹುದೆಂದು ಸುಪ್ರೀಂಕೋರ್ಟ್ ಆದೇಶ ನೀಡಿದೆಯಲ್ಲಾ... ಇನ್ನೇನು ಬೇಕು...?

ಈ ಮುಟ್ಟು ಗಂಡಸರಿಗೆ ಸಮಸ್ಯೆ ಯಾಗಿದೆಯಲ್ಲಾ...?

ಆದರೆ ದೇವಸ್ಥಾನದ ಸಮಿತಿಯವರು ಒಪ್ಪಬೇಕಲ್ಲಾ... ಪುರುಷರ ಪರವಾದ ನ್ಯಾಯವೇ ಅವರಿಗೆ ಮುಖ್ಯವಾಗಿದೆ... ಎಂದು ರಜನಿ ತನ್ನ ಮನೆ ಹಾದಿ ಹಿಡಿದಳು. ಕಲಾ ತನ್ನ ಧೋರಣೆಗೆ ತಾನೇ ಚಕಿತಗೊಂಡು ಚಿಂತೆಯಲ್ಲಿ ಮುಳುಗಿದಳು. ಗಂಡನಿಗೆ ಸ್ತ್ರೀ ಅಧೀನಳಾಗಿರಬೇಕು ಎಂಬ ಪುರುಷ ಸಮಾಜದ ದಬ್ಬಾಳಿಕೆಯಲ್ಲೇ ಕೈ ತುಂಬ ಸಂಬಳ ಪಡೆಯುವ ಸ್ವಾವಲಂಬಿ ಹೆಣ್ಣಾಗಿದ್ದರೂ ಗೂಟಕ್ಕೆ ಕಟ್ಟಿದ ಆನೆಯಂತೆ ಗಂಡನ ಅಧೀನ ದಲ್ಲಿಯೇ ಜೀತದಾಳಾಗಿರುವುದರ ಅರಿವಿದ್ದರೂ ಸಿಡಿದೇಳುವ ಸ್ಥೈರ್ಯವಿಲ್ಲ. ತನ್ನದು ಇದೆಂಥ ಹೇಡಿ ಬದುಕು...!? ಕಾರ್ಯತತ್ಪರಳಾಗದೆ ನಿಷ್ಕ್ರಿಯ ಳಾಗಿಯೇ ಉಳಿದಳು. ಆರ್ಥಿಕವಾಗಿ ಕೈಗೊಳ್ಳುವ ಕೆಲಸಕಾರ್ಯಗಳಿಗೆ ಗಂಡನ ಅನುಮತಿಯ ಅಗತ್ಯವಿರುವುದು ದುರಂತವೇ...!? ಭೌತಿಕ ನೋವಿಗಿಂತ ಮಾನಸಿಕ ಹಿಂಸೆ ಅಸಹನೀಯ. ಶಂಕರನ ಸ್ವೇಚ್ಛಾಚಾರ ನಡತೆಗೆ ಬೇಸತ್ತ ಕಲಾ ತನ್ನ ಮಾನಸಿಕ ನೋವಿನ ಪರಿಯನ್ನು ಬರೆದಿಡಲು ಯೋಚಿಸುತ್ತಾ ಮನೆಗೆ ಬಂದಳು. ಕೋಣೆಯ ಬಾಗಿಲು ಹಾಕಿಕೊಂಡು ಹಾಳೆ ತೆಗೆದಿರಿಸಿದಳು. ಯಾರ ಗಲಾಟೆಯೂ ಇರಲಿಲ್ಲ. ಸಂಬಂಧಗಳ ವ್ಯಾಮೋಹದಿಂದ ಬಿಡಿಸಿಕೊಳ್ಳುವುದೆಂತು...? ಚಿಂತೆ ಅವಳನ್ನಾವರಿಸಿಬಿಟ್ಟಿತು. ಅಷ್ಟು ಗಟ್ಟಿ ಮನಸ್ಸು ಅವಳಿಗಿರಲಿಲ್ಲ. ಸ್ವತಂತ್ರ ವ್ಯಕ್ತಿತ್ವವೇ ಇಲ್ಲದವರಿಗೆ ಸಂಕಲ್ಪ ಶಕ್ತಿ ಬರಲು ಎಲ್ಲಿ ಸಾಧ್ಯ...? ಸಂಕಲ್ಪ ಶಕ್ತಿಯಿಂದಲೇ ವ್ಯಕ್ತಿ ಸ್ವಾಭಿಮಾನಿ...! ಸ್ವಾಭಿಮಾನಕ್ಕಾಗಿ ವ್ಯಕ್ತಿಯಲ್ಲಿ ಅಹಂಕಾರವಿರಬೇಕು. ಅಲ್ಲದಿದ್ದರೆ ವ್ಯಕ್ತಿ ಹೇಡಿ ಎನಿಸಿಕೊಳ್ಳುತ್ತಾನೆ...!

ತುಮಕೂರು **ಬಸವರಾಜ್ ಮಠಪತಿ**

## ಕಾರ್ಮಿಕ ವರ್ಗದ ಶಕ್ತಿ ಬಲವಾಗಲಿ !

✉ ೨೦೧೯ನೇ ಮೇ ಒಂದರಂದು, ರಾಜ್ಯ, ದೇಶ, ವಿದೇಶಗಳಲ್ಲಿ ವಿಶ್ವದ ಕಾರ್ಮಿಕರಿಗಾಗಿ "ಕಾರ್ಮಿಕ ದಿನಾಚರಣೆ" ಆಚರಿಸಿ ಅಭಿನಂದನೆ, ಶುಭಾಶಯ, ಧನ್ಯವಾದ ಅರ್ಪಿಸಿದ್ದು ಸಂತೋಷ. ಪ್ರಾಚೀನ ಕಾಲದಿಂದ ಕೂಲಿ ಕೆಲಸದ ಕಾರ್ಮಿಕರು ಶ್ರೀಮಂತರ, ಬಂಡವಳಿಗರ, ಕಾರ್ಪೊರೇಟ್ ಕಂಪನಿ, ವಸಾಹತುಶಾಹಿ, ಜಮೀನ್ದಾರ, ಪಟ್ಟಭದ್ರ ಹಿತಾಸಕ್ತರು, ಆಡಳಿತದ ಪ್ರಭುತ್ವಗಳು ಮುಂತಾದ ವರ್ಗಗಳಿಂದ ಶೋಷಣೆ, ಹಿಂಸೆ, ಅವಮಾನ, ಅಪವಾದ, ಅಗೌರವಗಳಿಗೆ ಗುರಿಯಾಗಿದ್ದಾರೆ. ಕಾರ್ಮಿಕರ ಅನುಭವಗಳನ್ನೊಳಗೊಂಡ ಚಿಂತನೆ "ಹೊಸತು" ಪತ್ರಿಕೆ ಲೇಖನಗಳಿಂದ ದೊರೆತದ್ದು ಸ್ವಾಗತಾರ್ಹ. ಕಾರ್ಮಿಕವರ್ಗಕ್ಕೆ ಜೀವನ ಮಾಡಲು ತಮ್ಮದೇ ಆದ ಸ್ವಂತ ಆಸ್ತಿಸಂಪತ್ತು ಇಲ್ಲ. ಕೂಲಿ ಕೆಲಸ, ಜೀತದಾಳು, ಸಂಬಳಗಾರರಾಗಿ ತಮ್ಮ ಜೀವನ ನಡೆಸುವರು. ತಮ್ಮ ಹೊಟ್ಟೆಪಾಡಿಗಾಗಿ ಶ್ರಮದ ಕೆಲಸ ಮಾಡಿ, ಹಗಲಿರಳು ದುಡಿದು ಹಿಂಸೆ, ಶೋಷಣೆ ಯಿಂದಿರುವರು. ಇವರೆಲ್ಲಾ ಜಮೀನು, ಕೃಷಿ, ಕಾರ್ಖಾನೆ, ಬಂಡವಳಿಗರ ಕಂಪನಿಗಳು ಮುಂತಾದ ಸ್ಥಳಗಳಲ್ಲಿ ಜೀತದಾಳು ಸಂಬಳಗಾರರಾಗಿ ಶ್ರಮದ ದುಡಿಮೆ ಮಾಡುವರು. ಇವರಿಗೆ ಆರ್ಥಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ನ್ಯಾಯ ದೊರೆಯದೆ, ಪ್ರಭುತ್ವದಿಂದ ಸಹಕಾರ ಸಿಗದೆ, ವಂಚಿತರಾಗಿ ಹಿಂಸೆಯ ಬದುಕು ಸಾಗಿಸುವುದು ತುಂಬ ಕಷ್ಟವೆಂದು ಅನುಭವ ಹೇಳುತ್ತದೆ. ಕಾರ್ಮಿಕರ ಸಂಘ ಸಂಸ್ಥೆಗಳು ತಮ್ಮ ಸತತ ಹೋರಾಟ, ಮುಷ್ಕರ, ಚಳುವಳಿ ಹೂಡುತ್ತಾ ಸಾಗಿಬಂದಿದ್ದರೂ, ಸಾಕಷ್ಟು ಪರಿಹಾರ ದೊರೆತಿಲ್ಲ. ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕರು ಸೌಲಭ್ಯಗಳನ್ನು ಪಡೆಯಲು ಚಳುವಳಿಗಳು ಅನಿವಾರ್ಯ. ಭಾರತದ ಲೋಕಸಭೆ ಚುನಾವಣೆಯಲ್ಲಿ ವಿವಿಧ ಪಕ್ಷಗಳು ಭಾಗವಹಿಸಿ ಮುಂದಾಳತ್ವ ಪಡೆದಿದ್ದರೂ, ಸರಕಾರ ರಚನೆಯಾದ ನಂತರ ತಮ್ಮ ದಿಕ್ಕು ಬದಲಿಸಿ ಕಾರ್ಮಿಕರನ್ನು ಯಾಮಾರಿಸುತ್ತವೆ.

ಇಂದು ಪ್ರಭುತ್ವಗಳು ಕಾರ್ಮಿಕರ ಉತ್ಪಾದನಾ ಶಕ್ತಿ ಕುಗ್ಗಿಸಿ ಖಾಸಗಿ ಕಂಪನಿಗಳಿಗೆ ಮಣೆ ಹಾಕುತ್ತಿವೆ. ಕಾರ್ಮಿಕರಲ್ಲದವರೂ ಕಾರ್ಮಿಕ ಹೋರಾಟಗಳಿಗೆ ಬೆಂಬಲ ನೀಡಿ ಸಾರ್ವಜನಿಕ ಔದ್ಯಮಿಕವಲಯ ವನ್ನು ಗಟ್ಟಿಗೊಳಿಸುವುದು ಅಗತ್ಯ.

ಚೌಡಪುರ **ಮರಿದೇವರ ಸಿದ್ಧಪ್ಪ ಮೇಷ್ಟ್ರು**

*(೮ನೇ ಪುಟದಿಂದ)*

## ಬಾಂಬಿನ ಪಿತಾಮಹ

ಬಾಂಬಿನ ಮೊದಲ ಪ್ರಯೋಗವನ್ನು ನ್ಯೂ ಮೆಕ್ಸಿಕೋ ಮರುಭೂಮಿಯಲ್ಲಿ ನಡೆಸಲಾಯಿತು. ಆಕಾಶದಲ್ಲೆಲ್ಲ ಬೆಂಕಿ ಆವರಿಸಿತು. ಇಂಥ ಪರೀಕ್ಷೆಗಳನ್ನು ಪ್ರಯೋಗಿಸುವುದರಲ್ಲಿ ಭಾಗಿಯಾದ ರಾಬರ್ಟ್ ಓಪನ್‌ಹೈಮರ್‌ಗೆ ತಾನು ಕೈಗೊಂಡ ಕಾರ್ಯದ ಬಗ್ಗೆ ಒಂದು ರೀತಿಯ ಹೆಮ್ಮೆ, ಅಭಿಮಾನ.

ಹಿರೋಷಿಮಾ, ನಾಗಸಾಕಿ ನಗರಗಳ ಮೇಲೆ ಪ್ರಯೋಗಿಸಿದ ಬಾಂಬುಗಳ ಆಸ್ಫೋಟಗಳ ನಂತರ ಓಪನ್‌ಹೈಮರ್ ಅಂದಿನ ಅಮೇರಿಕದ ಅಧ್ಯಕ್ಷ ಹ್ಯಾರಿ ಟ್ರೂಮನ್‌ಗೆ ಹೇಳಿದ್ದಿಷ್ಟು, "ನನ್ನ ಕೈಗಳು ರಕ್ತಸಿಕ್ತವಾಗಿವೆ ಎಂಬ ಭಾವನೆ ನನ್ನಲ್ಲಿ ಉಂಟಾಗಿದೆ."

ಇದನ್ನು ಕೇಳಿಸಿಕೊಂಡ ಅಧ್ಯಕ್ಷ ಟ್ರೂಮನ್ ರಾಜ್ಯ ಕಾರ್ಯದರ್ಶಿಯಾದ ಡೀನ್ ಏಕ್ಸನ್ ಅನ್ನು ಕರೆದು, "ನಾನು ಇನ್ನು ಮುಂದೆ ಈ ಕೊಳಕು ವ್ಯಕ್ತಿಯನ್ನು (ನಾಯಿ ಮಗನನ್ನು) ನೋಡಲು ಬಯಸುವುದಿಲ್ಲ" ಎಂದು ಹೇಳಿದ.






# ಮನುಸ್ಮೃತಿಯ ಪರಿಚಯ –೬

೨೦೧೯ರ ಮಾರ್ಚ್-ಏಪ್ರಿಲ್‌ನಲ್ಲಿ ಪತ್ರಿಕೆಗಳಲ್ಲಿ ವರದಿಯಾಗಿದ್ದ ಎರಡು ಪ್ರಸಂಗಗಳು ನಮ್ಮ ದೇಶ ಮತ್ತು ಜನರಿಗೆ ಮಾನಹಾನಿ ಉಂಟುಮಾಡುವಂಥವು. ಆ ಘಟನೆಗಳನ್ನು ನೋಡಿ ತಲೆ ತಗ್ಗಿಸದವರು ರಾಷ್ಟ್ರೀಯತೆಯೆಂಬ ಪರಿಕಲ್ಪನೆಗೆ ಒಂದು ಕೊಡದಷ್ಟು ಮಸಿ ಬಳಿದಿದ್ದಾರೆ. ಅಂತಹ ಘಟನೆಗಳು ದಿನಂಪ್ರತಿ ನಡೆಯುತ್ತಲೇ ಇವೆ. ಮಾನವೀಯತೆಯ ಲವಲೇಶವೂ ಇಲ್ಲದವರು ಮಾತ್ರವೇ ಇಂತಹ ಹೀನಕೃತ್ಯಗಳನ್ನೆಸಗಲು ಸಾಧ್ಯ, ಆದರೆ ಪಾತಕಿಗಳಿಗೆ ಶಿಕ್ಷೆಯಾದದ್ದು, ಆಗುವುದು, ವಿರಳ. ಉದಾಹರಿಸಲಾಗುತ್ತಿರುವ ಪ್ರಸಂಗಗಳೆರಡೂ ಉತ್ತರಪ್ರದೇಶದಲ್ಲಿ ನಡೆದಂಥವು, ಆದರೆ ಬೇರೆ ರಾಜ್ಯಗಳಲ್ಲಿ ಅಂಥವು ನಡೆಯುತ್ತಿಲ್ಲವೆಂದಲ್ಲ. ಮೊದಲ ಪ್ರಸಂಗದಲ್ಲಿ ಒಬ್ಬ ದಲಿತ ಯುವಕನು ಮದುವೆ ಮಾಡಿಕೊಳ್ಳುವುದರ ಭಾಗವಾಗಿ ತನ್ನ ಊರಿನಲ್ಲಿ ಕುದುರೆಯ ಮೇಲೆ ಕೂತು ದಿಬ್ಬಣ ಹೊರಟ. ಉತ್ತರ ಭಾರತದಲ್ಲಿ ಇದು ಯಾವಾಗಲೂ ಕಾಣಬರುವ ಸಂಪ್ರದಾಯ. ಆದರೆ ದಲಿತರು ಹಾಗೆ ಸಂಭ್ರಮಿಸುವಂತಿಲ್ಲವೆಂಬ ಅಲಿಖಿತ ಕಾನೂನನ್ನು ದುರ್ಜನರು ತಾವೇ ಹೇರಿದ್ದಾರೆ. ಆ ಯುವಕನನ್ನು ತನ್ನದೇ ಗ್ರಾಮದ ದಲಿತೇತರ ನಾಯಕರು ಕುದುರೆಯಿಂದ ಕೆಳಗಿಳಿಸಿ ಹಿಗ್ಗಾಮುಗ್ಗಾ ಥಳಿಸಿದರು. ಅವರಿಗೆ ಯಾವ ಶಿಕ್ಷೆಯೂ ಆಗಲಿಲ್ಲ. ಇನ್ನೊಂದು ಪ್ರಸಂಗ ಇದು : ಊರಿನಲ್ಲಿ ಒಂದು ಮದುವೆ. ಅದರ ನಿಮಿತ್ತ ಅತಿಥಿಗಳಿಗೆ ಔತಣಕೂಟ. ಒಬ್ಬ ದಲಿತ ಯುವಕನೂ ಅದಕ್ಕೆ ಆಹ್ವಾನಿತ. ಊಟದಲ್ಲಿ ಮಾಂಸದಡಿಗೆಯೂ ಇತ್ತು. ಅದನ್ನು ತಿನ್ನುತ್ತಾ ಕೂತಿದ್ದಾಗ ಎದುರಿನ ಸಾಲಿನಲ್ಲಿ ಒಬ್ಬ ದಲಿತೇತರ ಯುವಕ ಕುಳಿತು ಊಟ ಮಾಡುತ್ತಿದ್ದ. ದಲಿತ ಯುವಕ ಅವನನ್ನು ದಿಟ್ಟಿಸಿ ನೋಡಿದ ಎಂಬ ಕಾರಣಕ್ಕೆ ಅವನನ್ನು ಹಿಡಿದು ಚಚ್ಚಲಾಯಿತು. ನಮ್ಮ ದೇಶದ ಸಂವಿಧಾನವು ಇಂತಹ ದಲಿತರಿಗೂ ರಕ್ಷಣೆಯನ್ನು ನೀಡುತ್ತದೆ, ಆದರೆ ಅದು ಅಕ್ಷರಗಳಲ್ಲಿ ಉಳಿದುಹೋಗಿದೆ. ಇದರಿಂದ ಬೆಚ್ಚದಿರುವ ಮನಸ್ಸುಗಳು ನಮ್ಮ ನಡುವೆ ಇವೆ. ತತ್ತ್ವಶಾಸ್ತ್ರ ಪ್ರವೀಣರೂ ಕನ್ನಡದ ಪ್ರಸಿದ್ಧ ಸಾಹಿತಿಗಳೂ ಆದ ಹಿರಿಯರೊಬ್ಬರು ಇತ್ತೀಚೆಗೆ ಒಂದು ಸಭೆಯಲ್ಲಿ ಮಾತನಾಡುತ್ತಾ "ಭಾರತದ ಸಂವಿಧಾನದಲ್ಲಿ ಪರಂಪರೆಯೇ ಇಲ್ಲ. ನಮ್ಮ ಪರಂಪರೆ ಇಲ್ಲದ ಸಂವಿಧಾನವನ್ನು ಕಟ್ಟಿಕೊಂಡು ಏನು ಮಾಡುವುದು?" ಎಂದು ಉದ್ಗರಿಸಿದ್ದಾಗಿ ವರದಿಯಾಗಿದೆ. ಇವರಿಗೆ ಯಾವ ಪರಂಪರೆ ಬೇಕು? ಶತಮಾನಗಳಿಂದ ದಲಿತರಿಗೆ ನಮ್ಮ ದೇಶವು ನೀಡುತ್ತಾ ಬಂದಿರುವ ದೌರ್ಜನ್ಯದ ಪರಂಪರೆಯನ್ನು ಗಟ್ಟಿಗೊಳಿಸಲು ಸಂವಿಧಾನವು ಸಾಧನವಾಗಬೇಕಿತ್ತೆ? ಅಥವಾ ದೌರ್ಜನ್ಯಗಳನ್ನು ಇಲ್ಲವಾಗಿಸುವ ಮಾನವೀಯ ಮೌಲ್ಯಗಳನ್ನು ಪುರಸ್ಕರಿಸುವ ಹೊಸ ಸಮಾನತೆಯ ಪರಂಪರೆಗೆ ನಾಂದಿ ಹಾಡಬೇಕಿತ್ತೆ? ಮನುಸ್ಮೃತಿಯು ನಮ್ಮ ಸಂವಿಧಾನವಾಗಬೇಕಿತ್ತೆಂದು ಹೇಳುವವರು ಮತ್ತು 'ಈಗಲೂ ಕಾಲ ಮಿಂಚಿಲ್ಲ, ಮನುಸ್ಮೃತಿಯ ಅಂಶಗಳನ್ನು ಸಂವಿಧಾನದಲ್ಲಿ ಅಳವಡಿಸೋಣ'ವೆಂದು ತುದಿಗಾಲ ಮೇಲೆ ನಿಂತವರು, ಮನುಸ್ಮೃತಿಯ ಪುಟಗಳನ್ನು ತಿರುವಿಹಾಕಿ ಅದರಲ್ಲಿ ಉಕ್ತವಾಗಿರುವ ಅನೇಕ ವಿಧಿಗಳು ಸಮಂಜಸವೇ, ಸ್ವಾಗತಾರ್ಹವೇ ಅಥವಾ ಅವು ಅಚಾರಿತ್ರಿಕವಾಗಿರುವುದರಿಂದ ಇಂದಿನ ಮಹದಾಶಯಗಳ ದೃಷ್ಟಿಯಿಂದ ಖಂಡನೀಯವೇ ಎಂಬುದನ್ನು ರಾಷ್ಟ್ರೀಯತೆ ಮತ್ತು ಮಾನವತೆಯ ಹಿನ್ನೆಲೆಯಲ್ಲಿ ಪರಾಮರ್ಶಿಸಿಕೊಳ್ಳಬೇಕಾಗಿದೆ. ಸಾಹಿತ್ಯದಲ್ಲಿ ಮನುಸ್ಮೃತಿಯ "ಮೌಲ್ಯ" (?)ಗಳನ್ನು ಅಳವಡಿಸಿಕೊಳ್ಳುವುದು ಸಾಹಿತಿಯ ವೈಯ್ಯಕ್ತಿಕ ಸ್ವಾತಂತ್ರ್ಯವಿರಬಹುದು, ಆದರೆ ಸಮುದಾಯದ ಹಿತಕ್ಕೆ ಅವು ಮಾರಕವಾಗುವಂಥವು. ಎಲ್ಲ ಆಚರಣೆಗಳನ್ನೂ ನಾಲ್ಕು ಶ್ರೇಣೀಕೃತ ವರ್ಣಗಳ ನೆಲೆಯಲ್ಲೇ ವಿಧಿಸುವ ಪರಂಪರೆಯನ್ನು ಭಾರತದ ಸಂವಿಧಾನವು ಅನುಸರಿಸಿಲ್ಲದಿರುವುದು ಶ್ಲಾಘನೀಯ. ವರ್ಣ ವಿಭಜಿತ ಸಮಾಜದ ಮೌಲ್ಯಗಳು ಸಾರ್ವಭೌಮ ಗಣರಾಜ್ಯದ ಮೌಲ್ಯಗಳಲ್ಲ.

---

**ಜಿ. ರಾಮಕೃಷ್ಣ**

ಮನುಸ್ಮೃತಿಯ ಹನ್ನೊಂದನೆಯ ಅಧ್ಯಾಯವು ಆರಂಭವಾಗುವುದು ಯಾರುಯಾರಿಗೆ ಎಂತೆಂತಹ ದಾನಗಳನ್ನು ಮಾಡಬೇಕೆಂಬ ಸಲಹೆಗಳಿಂದ. ಆದರೆ ಮುಖ್ಯವಾಗಿ ಈ ಅಧ್ಯಾಯವು ಪ್ರಾಯಶ್ಚಿತ್ತದ ಕ್ರಮಗಳನ್ನು ಸೂಚಿಸುವ ಆಶಯವನ್ನು ಹೊಂದಿದೆ. ಮೊದಲಿಗೆ, ದಾನಗಳ ವಿಷಯ : ಸಂತಾನವನ್ನು ಅಪೇಕ್ಷಿಸುವವನು (ಎಲ್ಲಾ ಪುಲ್ಲಿಂಗವೇ!), ಯಜ್ಞ ಮಾಡಹೊರಟಿರುವವನು, ಪ್ರಯಾಣಿಕ, ಗುರುಗಳಿಗಾಗಿ ದಕ್ಷಿಣೆ ಬೇಡುವವನು, ತಂದೆ–ತಾಯಿಗಳಿಗಾಗಿ ಬೇಡುವವನು, ಸ್ವ–ಅಧ್ಯಯನಕ್ಕೆ ಸಹಾಯ ಅಪೇಕ್ಷಿಸುವವನು ಮತ್ತು ರೋಗಪೀಡಿತ, ಇವರಿಗೆ ವಿದ್ಯಾರ್ಹತೆಯನ್ನು ಆಧರಿಸಿ ದಾನ ನೀಡಬೇಕು. ಈ ದಾನವು ಸ್ನಾತಕರಾಗಿರುವವರಿಗೆ ಮೀಸಲು; ಅಂದರೆ, ಒಂದು ಮಟ್ಟದ ಅಧ್ಯಯನ ಪೂರೈಸಿ ಗುರುವನ್ನು ಬೀಳ್ಕೊಟ್ಟು ಬಂದಿರುವವರು. ಅವರು ಯಾವ ವರ್ಣದವರೆಂಬುದನ್ನು ಹೇಳಬೇಕಾಗಿಲ್ಲ ! (೧೧.೧). ಇವರಿಗಾದರೆ ಯಜ್ಞಶಾಲೆಯೊಳಕ್ಕೆ ಬರಮಾಡಿಕೊಂಡು ದಕ್ಷಿಣೆ ನೀಡಬೇಕು ಮತ್ತು ಭೋಜನ ಮಾಡಿಸಬೇಕು; ಇತರರಿಗಾದರೆ ಹೊರಗಡೆಯೇ ಅನ್ನದಾನ ಮಾಡಬೇಕು, ದಕ್ಷಿಣೆಯೇನೂ ಇಲ್ಲ (೧೧.೩). ಇದೊಂದು ವಿಚಿತ್ರ ಕ್ರಮ : ಪತ್ನಿ ಇರುವವನೊಬ್ಬ ಇನ್ನೊಂದು ಮದುವೆ ಮಾಡಿಕೊಳ್ಳಲು ಹಣ ಪಡೆಯುತ್ತಾನೆ; ಅವನಿಗೆ ರತಿಸುಖ ಉಂಟು, ಆದರೆ ಅವನ ಸಂತತಿಯು ಹಣ ಕೊಟ್ಟಿದ್ದವನಿಗೆ ಸೇರುತ್ತದೆ (೧೧.೫ : ಕೃತದಾರೋऽಪರಾನ್ ದಾರಾನ್ ಭಿಕ್ಷಿತ್ವಾ ಯೋऽಧಿಗಚ್ಛತಿ । ರತಿಮಾತ್ರಂ ಫಲಂತಸ್ಯ ದ್ರವ್ಯದಾತುಸ್ತು ಸಂತತಿಃ ॥). ಅಂದರೆ, ಅವನು ಸಾಲವನ್ನು ಹಿಂದಿರುಗಿಸಿಲ್ಲದವನು; ಆದ್ದರಿಂದ ಅವನ ಸಂತತಿಗೆ ಜೀತದಾಳಿನ ಸ್ಥಿತಿ. 'ಜೀತದಾಳು' ಎಂದು ಹೇಳಿಲ್ಲವಾದರೂ ಪರಿಣಾಮ ಅದೇ; ಇಲ್ಲದಿದ್ದರೆ ಬೇರೆಯವರ ಸಂತತಿಯನ್ನು ಇವನೇಕೆ ಪಾಲಿಸಿಯಾನು! ಸಾಲ ಮಾಡಿ ಎರಡನೆ ಹೆಂಡತಿಯನ್ನು ಹೊಂದುವವನು ಒಂದು ಮಾದರಿಯಾದರೆ, ಬಡತನದಲ್ಲಿದ್ದೂ ದಾನ ಮಾಡಿ ದೊಡ್ಡವನಾಗುವ ಧರ್ಮಶ್ರದ್ಧೆ ಇನ್ನೊಬ್ಬನದು. ಬೇರೆಯವರ ಕಣ್ಣಲ್ಲಿ ದಾನಿಯಾಗಿ ಕಾಣಬೇಕೆಂಬ ಆಸೆ ಇವನದು. "ಇದು ಧರ್ಮವೆನಿಸಿಕೊಳ್ಳುವುದಿಲ್ಲ, ತೋರಿಕೆಗೆ ಮರುಳಾಗಬೇಡಿ," ಎಂಬ ಹಿತವಚನ ಮನು ನೀಡುತ್ತಾನೆ. ದಾನ ಮಾಡಿದ್ದು ಜೇನಿನಂತೆ ಸಿಹಿ ಎನಿಸಬಹುದು, ಆದರೆ ಅವನಿಗೆ ಮತ್ತು ಅವನ ಕುಟುಂಬಕ್ಕೆ ವಿಷಫಲ ನೀಡುತ್ತದೆ (೧೧.೯ : ಶಕ್ತಃ ಪರಜನೇ ದಾತಾ ಸ್ವಜನೇ ದುಃಖಜೀವಿನಿ । ಮಧ್ವಾಪಾತೋ ವಿಷಾಸ್ವಾದಃ ಸ ಧರ್ಮಪ್ರತಿರೂಪಕಃ ॥).

ಇಕ್ಕಟ್ಟಿನಲ್ಲಿರುವವರಿಗೆ ದಾರಿ ತೋರಿಸುವುದರಲ್ಲಿ ಮನು ನಿಷ್ಣಾತ; ಆದರೆ ಪ್ರಯೋಜನ ಪಡೆಯುವವನು ಬ್ರಾಹ್ಮಣನಾಗಿರಬೇಕು, ಅಷ್ಟೆ. ಒಬ್ಬ ಧಾರ್ಮಿಕ ರಾಜನಿದ್ದಾನೆ, ಅವನ ರಾಜ್ಯದಲ್ಲಿ ಬ್ರಾಹ್ಮಣನೋ ಕ್ಷತ್ರಿಯನೋ ಯಜ್ಞ ಮಾಡಿದ್ದಾನೆ. ಬೇರೆಲ್ಲ ಏರ್ಪಾಟು ಇದ್ದಾಗ್ಯೂ ಅನ್ನದಾನ ಮಾಡಲು ಅವನು ಅಶಕ್ತನಾದ್ದರಿಂದ ಯಜ್ಞಕ್ಕೆ ಅಡಚಣೆ ಉಂಟಾಗಲಿದೆ. ಅಂತಹ ಸಂದರ್ಭದಲ್ಲಿ ರಾಜನು ಮಧ್ಯಪ್ರವೇಶ ಮಾಡಿ ಸಹಾಯ ಒದಗಿಸಬೇಕು. ಆದರೆ ಹೇಗೆ? ಒಬ್ಬ ಧನಿಕ ವೈಶ್ಯನಿದ್ದಾನೆ, ಅವನು ಯಜ್ಞ–ಯಾಗಗಳನ್ನು ಮಾಡುವುದಿಲ್ಲ; ಅವನಿಂದ ಅಗತ್ಯವಾದ ದ್ರವ್ಯವನ್ನು ಬಲಾತ್ಕರಿಸಿ ತಂದುಕೊಟ್ಟರೂ ಆದೀತು! (೧೧.೧೧–೧೨ : ...ಯೋ ವೈಶ್ಯಃ ಸ್ಯಾದ್ಬಹುಪಶುಃ ಹೀನಕ್ರತುಃ ಅಸೋಮಪಃ । ಕುಟುಂಬಾತ್ ತಸ್ಯ ತದ್ದ್ರವ್ಯಂ ಆಹರೇದ್ಯಜ್ಞಸಿದ್ಧಯೇ ॥). ಈ ಪರಂಪರೆಯನ್ನು ಸಮಕಾಲೀನ ಸಂದರ್ಭದಲ್ಲಿ ಜಾರಿಗೊಳಿಸಲು ಸಂವಿಧಾನಕ್ಕೊಂದು ತಿದ್ದುಪಡಿ ತಂದರೆ ಹೇಗೆಂದು ಯಾರಾದರೂ ಸಾಹಿತಿಗಳು ತಿಳಿಸಿಕೊಡಬಹುದು. ಧನಿಕನಲ್ಲದ ವೈಶ್ಯನೊಬ್ಬ ಕಷ್ಟಕ್ಕೆ ಸಿಲುಕಿದ್ದಾಗ ಅವನಿಗೆ ರಾಜನು ಸಹಾಯ ಮಾಡಬೇಕೆಂದು ಮನು ಹೇಳಿಲ್ಲ; ವೈಶ್ಯನು ಕೃಷಿಕನೂ ಹೌದು. ಆದ್ದರಿಂದ ರೈತರಿಗೆ ಪ್ರಭುತ್ವವು ಸಹಾಯಹಸ್ತ ಚಾಚಬೇಕಿಲ್ಲವೆಂದು ಮನುವಿನ ಸೂಚನೆಯೆ? ಯಜ್ಞಕ್ಕೆ ಅಗತ್ಯವಾದ ಕೆಲವು ಸಾಮಗ್ರಿಗಳನ್ನು ಶೂದ್ರನಿಂದಲೂ ಪಡೆಯಬಹುದಂತೆ; ಏಕೆಂದರೆ ಶೂದ್ರನು ಸ್ವತಃ ಯಜ್ಞ ಮಾಡುವಂತಿಲ್ಲವಲ್ಲ, ಅದಕ್ಕೆ (೧೧.೧೩). ಒಂದು ರೀತಿಯಲ್ಲಿ ಮನು ಉದಾರವಾದಿಯೇ : ಬ್ರಾಹ್ಮಣ–ಕ್ಷತ್ರಿಯರು ಶ್ರೀಮಂತರಾಗಿದ್ದು, ಯಜ್ಞಾದಿಗಳನ್ನು ಮಾಡದಿದ್ದಲ್ಲಿ ಅವರಿಂದ ಯಜ್ಞಕ್ಕೆ ಅಗತ್ಯವಾದ ಸಾಮಗ್ರಿಗಳನ್ನು ಬಲವಂತವಾಗಿ ಕಸಿದು ತರಬಹುದು ಎಂದು ಅವನು ಪರವಾನಗಿ ನೀಡಿದ್ದಾನೆ (೧೧.೧೪). ಇವೆಲ್ಲಾ ವಿಧಿಗಳಲ್ಲ, ಆದರೆ ಸಾಧ್ಯತೆಗಳು; ಆಪದ್ಧರ್ಮಗಳಲ್ಲ, ಆದರೆ ಆಪತ್ಕಾಲವನ್ನು ನಿಭಾಯಿಸಬಹುದಾದ ಕ್ರಮಗಳು. ಅದರಲ್ಲಿ ಯಥಾಪ್ರಕಾರ ಒಂದು ನಿಷೇಧವಿದೆ : ಅದೇನೆಂದರೆ, ಕ್ಷತ್ರಿಯನು ಬ್ರಾಹ್ಮಣನಿಂದ ಸಂಪತ್ತನ್ನು ಅಪಹರಿಸಬಾರದು; ಆದರೆ ಬ್ರಾಹ್ಮಣನು ನಿಷಿದ್ಧ ಕರ್ಮವನ್ನು ಮಾಡುತ್ತಿರುವಂಥವನಾದರೆ ಬಲವಂತವಾಗಿ ಅವನ ಸಂಪತ್ತನ್ನು ಪಡೆಯಬಹುದು (೧೧.೧೮). ಮುಖ್ಯವಾಗಿ ತಿಳಿಯಬೇಕಾದ ಸಂಗತಿಯೇನೆಂದರೆ, ಮನುವಿನ ಸಂವಿಧಾನದಲ್ಲಿ ಅಗ್ರ ವರ್ಣದವರಿಗೆ ಎಲ್ಲ ಸೌಲಭ್ಯಗಳನ್ನೂ ಪಡೆಯುವ ಇಲ್ಲವೇ ನೀಡುವ ಪ್ರಕ್ರಿಯೆಗೆ ಮಾನ್ಯತೆ ಇದೆ; ಆದರೆ ಅನ್ಯ ವರ್ಣದವರಿಗೆ, ವಿಶೇಷವಾಗಿ ಕಡೆಯ ವರ್ಣದವರಿಗೆ, ಯಾವ ಸೌಲಭ್ಯವನ್ನೂ ನೀಡಬೇಕಾಗಿಲ್ಲವಷ್ಟೇ ಅಲ್ಲ, ಅದು ಕೂಡದು, ಎಂಬ ಆಗ್ರಹವಿದೆ. 'ವರ್ಣ' ಎಂಬುದನ್ನು ಇಂದು 'ವರ್ಗ' ಎಂದು ಓದಿಕೊಂಡರೆ, ಮನುಸಂಹಿತೆಯ ಮೌಲ್ಯಗಳ ನೆರಳಿನಲ್ಲಿ ಮಲ್ಯ, ಮೋದಿ, ಅದಾನಿಗಳಿಗೆ ಸಾಕಷ್ಟು ರಕ್ಷಣೆ ಇರುತ್ತದೆ. ಬ್ಯಾಂಕುಗಳ ಸಾಲ ಹಿಂದಿರುಗಿಸದಿರುವ ವಿಶಿಷ್ಟ ಸೌಲಭ್ಯವಿರುವುದು ಅವರಿಗೇ ತಾನೆ! "ನಮ್ಮ ಸಂವಿಧಾನದಲ್ಲಿ ಪರಂಪರೆ ಇಲ್ಲ" ಎಂದು ಖಿನ್ನರಾಗುವವರಿಗೆ ಬಹುಶಃ ಇದು ಸ್ವಲ್ಪ ಸಮಾಧಾನ ತರಬಹುದೇನೊ! ಈ ಬಗೆಗೆ ಮನುವಿನ ಚರಮವಾಕ್ಯ ಬಹಳ ಸ್ವಾರಸ್ಯವಾದ್ದು : "ಯಜ್ಞಾದಿಗಳನ್ನು ಮಾಡದ ಶ್ರೀಮಂತ ದುರ್ಜನರ ಸಂಪತ್ತನ್ನು, ಸಜ್ಜನರು ಮಾಡುವ ಸತ್ಕಾರ್ಯಗಳಿಗೆಂದು (ಬಲವಂತವಾಗಿಯಾದರೂ ಸರಿಯೇ) ಯಾವನು ತಂದುಕೊಡುತ್ತಾನೋ ಅವನು ಎರಡು ರೀತಿ ಶ್ರೇಯಸ್ಸನ್ನು ಹೊಂದುತ್ತಾನೆ : ದುರ್ಜನರ ಪಾಪವನ್ನು ಕಳೆಯುವ ಮೂಲಕ ಮತ್ತು ಸಜ್ಜನರ ಕೀರ್ತಿಗೆ ಕಾರಣವಾಗುವುದರ ಮೂಲಕ" (೧೧.೧೯ : ಯೋऽಸಾಧುಭ್ಯೋऽರ್ಥಮಾದಾಯ ಸಾಧುಭ್ಯಃ ಸಂಪ್ರಯಚ್ಛತಿ । ಸ ಕೃತ್ವಾ ಪ್ಲವಮಾತ್ಮಾನಂ ಸಂತಾರಯತಿ ತಾವುಭೌ ॥). ಇದೊಂದು "ಪ್ರಾಚೀನ ರಾಬಿನ್ ಹುಡ್" ಮಾದರಿಯಾಗಲು ಅಡ್ಡಿಯಿಲ್ಲ. ರಾಬಿನ್ ಹುಡ್‌ಗೆ ಶಿಕ್ಷೆಯಿಲ್ಲ; ಏಕೆಂದರೆ ಅವನದು ಸತ್ಕರ್ಮ. ಅಂತೆಯೇ, "ಯಜ್ಞಕಾರ್ಯಕ್ಕೆಂದು ಬಲವಂತವಾಗಿ ಹಣ ಪಡೆದುಕೊಂಡ ಬ್ರಾಹ್ಮಣನನ್ನು ರಾಜನು ಶಿಕ್ಷಿಸಕೂಡದು. ಹಾಗೇನಾದರೂ ದಂಡಿಸಿದರೆ ಈ ಕ್ಷತ್ರಿಯ ರಾಜನ ಮೂರ್ಖತನದಿಂದಾಗಿ ಬ್ರಾಹ್ಮಣನಿಗೆ ಹಸಿವಿನ ಬಾಧೆಯು ತಟ್ಟುತ್ತದೆ" (೧೧.೨೧). ಈ ಪರಂಪರೆಯ ವಾರಸುದಾರರಾಗಿರುವುದರಿಂದ ನಾವು "ಸತ್ಕಾರ್ಯ"ವೆಸಗುವ ಖದೀಮ ಬಂಡವಳಿಗರನ್ನು ಶಿಕ್ಷಿಸ ಹೋಗುವುದಿಲ್ಲ ಎನ್ನೋಣವೆ?

ಮನುವಿನ ಬಿಂಕಕ್ಕೇನೂ ಕೊರತೆಯಿಲ್ಲ : "ಯಜ್ಞದಂತಹ ಕಾರ್ಯಗಳಿಗೆ ಸಹ ಬ್ರಾಹ್ಮಣನು ಶೂದ್ರನಿಂದ ಸಹಾಯ ಪಡೆಯಬಾರದು; ಶೂದ್ರನಿಂದೇನಾದರೂ ಹೀಗೆ ಭಿಕ್ಷೆ ಪಡೆದರೆ ಯಜ್ಞಕರ್ತ ಬ್ರಾಹ್ಮಣನು ಮುಂದೆ ಚಂಡಾಲನಾಗಿ ಹುಟ್ಟುತ್ತಾನೆ" (೧೧.೨೪ : ನ ಯಜ್ಞಾರ್ಥಂ ಧನಂ ಶೂದ್ರಾದ್ವಿಪ್ರೋ ಭಿಕ್ಷೇತ ಕರ್ಹಿಚಿತ್ । ಯಜಮಾನೋ ಹಿ ಭಿಕ್ಷಿತ್ವಾ ಚಂಡಾಲಃ ಪ್ರೇತ್ಯ ಜಾಯತೇ ॥). ಆದರೆ ಕೆಲವು ವಿಧಿಗಳಿಗೆ ಸಂಬಂಧಿಸಿದಂತೆ ಕಾಲವು ಬದಲಾಗಿದೆ : ವಿಶ್ವೇಶ್ವರ ಮಠವೋ ಶಂಕರ ಮಠವೋ ತನ್ನ "ಸತ್ಕಾರ್ಯ"ಗಳಿಗೆ ಶೂದ್ರಾತಿಶೂದ್ರರಿಂದ ಬೇಕಾದರೂ ಆರ್ಥಿಕ ಸಹಾಯ ಪಡೆಯಲು ಹಿಂಜರಿಯಬೇಕಾಗಿಲ್ಲ; ಮನು ಅದಕ್ಕೆ ಅಡಚಣೆಯಲ್ಲ. ವರ್ಣ ವಿಭಜನೆಯ ಸೂತ್ರವನ್ನು ಮಾತ್ರ ಮನು ಪಟ್ಟುಹಿಡಿದು ಸಂರಕ್ಷಿಸುತ್ತಾನೆ. ಮನಸ್ಸುಗಳ ಮೇಲಿನ ಅಧಿಕಾರವು ಅವನಿಗೆ ಪರಂಪರೆಯಿಂದ ದೊರೆತುಬಿಟ್ಟಿದೆ; ಅದಕ್ಕೀಗ ವ್ಯತ್ಯಯ ಬೇಕಾಗಿದೆ. ಅಧಿಕಾರಸ್ಥಾನದಲ್ಲಿ ಬ್ರಾಹ್ಮಣ–ಕ್ಷತ್ರಿಯ ವರ್ಣಗಳು ಸಮಭಾಗಿಗಳು; ಬೃಹದಾರಣ್ಯಕ ಉಪನಿಷತ್ತಿನ ಯಾಜ್ಞವಲ್ಕ್ಯ – ಜನಕರ ಕಾಲದಿಂದ ನಡೆದುಬಂದ ಪದ್ಧತಿ ಅದು. ಆದರೆ ಬ್ರಾಹ್ಮಣರಿಗೆ ಮನು ಹೆಚ್ಚಿನ ಸ್ಥಾನ ಕೊಡುತ್ತಾನೆ : "ಬ್ರಾಹ್ಮಣಶಕ್ತಿ ಮತ್ತು ರಾಜಶಕ್ತಿ ಇವೆ; ಇವುಗಳಲ್ಲಿ ಬ್ರಾಹ್ಮಣಶಕ್ತಿ ಹೆಚ್ಚು ಶ್ರೇಷ್ಠವಾದ್ದು. ಆದ್ದರಿಂದ ಬ್ರಾಹ್ಮಣನು ಸ್ವ–ಸಾಮರ್ಥ್ಯದಿಂದಲೇ ಅಪರಾಧಿಗಳನ್ನು ಮತ್ತು ವೈರಿಗಳನ್ನು ನಿಗ್ರಹಿಸಬೇಕು" (೧೧.೩೨ : ಸ್ವವೀರ್ಯಾತ್ ರಾಜವೀರ್ಯಾಚ್ಚ ಸ್ವವೀರ್ಯಂ ಬಲವತ್ತರಂ । ತಸ್ಮಾತ್ ಸ್ವೇನೈವ ವೀರ್ಯೇಣ ನಿಗೃಹ್ಣೀಯಾತ್ ಅರೀನ್ ದ್ವಿಜಃ ॥). ಅದನ್ನು ಹೇಗೆ ಕಾರ್ಯಗತಗೊಳಿಸುವುದು? ಬ್ರಾಹ್ಮಣರಿಗೆ ಅದಕ್ಕಾಗಿ ಬೆದರಿಕೆಯೂ ಸೇರಿದಂತೆ

ಹಲವು ಸಾಧನಗಳನ್ನು ಮನು ಕಲ್ಪಿಸಿಕೊಟ್ಟಿದ್ದಾನೆ: ಅಥರ್ವವೇದದ ಅಂಗಿರಸ ಮಂತ್ರಗಳನ್ನು ಯಾವ ಅಳುಕೂ ಇಲ್ಲದೆ ಬಳಸಬಹುದು; ಅವನ್ನು ಮಾಟ ಮಂತ್ರಗಳು ಅಥವಾ ಅಭಿಚಾರ ಕರ್ಮಗಳು ಎನ್ನುತ್ತಾರೆ. ಅಭಿಚಾರವೇ ಬ್ರಾಹ್ಮಣನ ಶಸ್ತ್ರ, ಅದರಿಂದ ವೈರಿಗಳ ಮರ್ದನ ಮಾಡಬೇಕು (೧೧.೩೩ : ಶ್ರುತೀರಥರ್ವಾಂಗಿರಸೀಃ ಕುರ್ಯಾದಿತ್ಯವಿಚಾರಯನ್। ವಾಕ್‌ಶಾಸ್ತ್ರಂ ವೈ ಬ್ರಾಹ್ಮಣಸ್ಯ ತೇನ ಹನ್ಯಾತ್ ಅರೀನ್ ದ್ವಿಜಃ॥). ಮಾಟ–ಮದ್ದು ಪ್ರಯೋಗಿಸಿಯಾದರೂ ಸರಿಯೇ, ಅವನು ವೈರಿಗಳನ್ನು ಕೊಲ್ಲಬೇಕು! ಬೇರೆ ಸೌಲಭ್ಯಗಳನ್ನೂ ಅವರಿಗೆ ಮನು ಕರುಣಿಸಿದ್ದಾನೆ: "ಶಾಸ್ತ್ರದಲ್ಲಿ ವಿಧಿಸಲ್ಪಟ್ಟಿರುವುದಕ್ಕಿಂತಲೂ ಕಡಿಮೆ ದಕ್ಷಿಣೆ ಕೊಟ್ಟು ಯಜ್ಞ ಮಾಡಬಾರದು" (೧೧.೩೯ : ... ನ ತು ಅಲ್ಪ ದಕ್ಷಿಣೈಃ ಯಜ್ಞೈಃ ಯಜೇತ ಇಹ ಕಥಂಚನ). "ಶಾಸ್ತ್ರ ವಿಧಿಗಿಂತಲೂ ಕಡಿಮೆ ದಕ್ಷಿಣೆ ನೀಡಿದರೆ ಯಜ್ಞವು ಇಂದ್ರಿಯಗಳನ್ನು, ಯಶಸ್ಸನ್ನು, ಸ್ವರ್ಗ – ಆಯುಷ್ಯಗಳನ್ನು, ಕೀರ್ತಿ – ಸಂತತಿ – ಪಶುಗಳನ್ನು ನಾಶ ಮಾಡುತ್ತದೆ. ಕಡಿಮೆ ಸಂಪತ್ತಿದ್ದರೆ ಯಜ್ಞ ಮಾಡದಿರುವುದೇ ಲೇಸು" (೧೧.೪೦ : ...ನ ಅಲ್ಪಧನೋ ಯಜೇತ್).

ಮುಂದೆ ಮಹಾಪಾಪಗಳ ಪಟ್ಟಿಯನ್ನು ಮನು ನೀಡಿದ್ದಾನೆ: ಬ್ರಾಹ್ಮಣಹತ್ಯೆ, ಸುರಾಪಾನ, ಕಳ್ಳತನ, ಗುರುಪತ್ನೀ ಸಂಸರ್ಗ, ಇತ್ಯಾದಿ (೫೪); ಬ್ರಹ್ಮಹತ್ಯೆಗೆ ಸಮಾನವಾದ ಪಾಪಗಳನ್ನೂ ಹೇಳಿದ್ದಾನೆ: ಮೇಲೇರುವ ಆಸೆಯಿಂದ ಸುಳ್ಳು ಹೇಳುವುದು, ರಾಜನಿಗೆ ಚಾಡಿ ಹೇಳಿ ಶಿಕ್ಷೆ ಕೊಡಿಸುವುದು, ಗುರುವಿನ ಬಗ್ಗೆ ಸುಳ್ಳು ಆರೋಪದ ಪ್ರಚಾರ ಮಾಡುವುದು, ಇತ್ಯಾದಿ (೫೫). ಸಂತಸದ ಸಂಗತಿಯೆಂದರೆ ಒಲೆ ಉರಿಸಲೆಂದು ಎಳೆಯ ಗಿಡಮರಗಳನ್ನು ಕಡಿಯುವುದನ್ನು ಮನು ಮಹಾಪಾಪವೆಂದು ಹೇಳಿರುವುದು (೧೧.೬೪ : ಇಂಧನಾರ್ಥಂ ಅಶುಷ್ಕಾಣಾಂ ದ್ರುಮಾಣಾಮವಪಾತನಂ). ಯಾವ ನಿಷೇಧಗಳನ್ನು ಹೇಳಲಾಗಿವೆಯೋ ಅವುಗಳ ಉಲ್ಲಂಘನೆ ಮಾಡಿದರೆ ಬಾಧಕವಿಲ್ಲ; ಏಕೆಂದರೆ, ಬಹುತೇಕ ಎಲ್ಲಕ್ಕೂ ಮನು ಪ್ರಾಯಶ್ಚಿತ್ತ ಕ್ರಮಗಳನ್ನು ಸೂಚಿಸಿದ್ದಾನೆ. ಉದಾಹರಣೆಗೆ ಬ್ರಾಹ್ಮಣನ ಹತ್ಯೆ: ಅದರ ದೋಷ ಪರಿಹಾರ (ಪ್ರಾಯಶ್ಚಿತ್ತ) ಕ್ರಮವೆಂದರೆ ಆ ಶವದ ತಲೆ ಬುರುಡೆಯ ಚಿಹ್ನೆಯನ್ನು ಹಣೆಯ ಮೇಲೆ ಧರಿಸಿ, ಭಿಕ್ಷೆ ಬೇಡುತ್ತಾ, ಕಾಡಿನಲ್ಲಿ ಹನ್ನೆರಡು ವರ್ಷ ವಾಸಿಸುವುದು (೧೧.೭೨). ಇಲ್ಲವೇ ಅಶ್ವಮೇಧ, ಸ್ವರ್ಜಿತ್, ಅಭಿಜಿತ್, ವಿಶ್ವಜಿತ್ ಮುಂತಾದ ಯಾಗಗಳನ್ನು ಮಾಡುವುದು (೭೪). ಅದಕ್ಕಿಂತಲೂ ಸುಲಭವಾದ ಪ್ರಾಯಶ್ಚಿತ್ತ ಕ್ರಮವೂ ಉಂಟು: "ಬ್ರಾಹ್ಮಣನ ಸಂಪತ್ತನ್ನು ದೋಚುವ ಪ್ರಯತ್ನ ನಡೆದಾಗ ಅದನ್ನು ಹಿಮ್ಮೆಟ್ಟಿಸಲು ಮೂರು ಬಾರಿ ಕಾದಾಡಬೇಕು. ಆಗ ಬ್ರಹ್ಮಹತ್ಯಾ ದೋಷದ ನಿವಾರಣೆಯಾಗುತ್ತದೆ; ಗೆದ್ದು ಸಂಪತ್ತು ವಾಪಸ್ಸು ಕೊಡಿಸಿದರಂತೂ ಹೇಳಲೇಬೇಕಿಲ್ಲ (೧೧.೮೦). ಒಟ್ಟಿನಲ್ಲಿ "ಜನ್ಮದಿಂದಲೇ ಬ್ರಾಹ್ಮಣನು ಶ್ರೇಷ್ಠ; ದೇವತೆಗಳಿಗೂ ಅವನು ದೇವತೆ. ಈ ಲೋಕದಲ್ಲಿ




ಧರ್ಮದ ಜಯಕ್ಕೆ ಬ್ರಾಹ್ಮಣನೇ ಪ್ರತ್ಯಕ್ಷ ಪ್ರಮಾಣ. ಇದಕ್ಕೆ ವೇದ ಸಹ ಸಾಕ್ಷಿಯಾಗಿದೆ" (೧೧.೮೪ : ಬ್ರಾಹ್ಮಣಃ ಸಂಭವೇನೈವ ದೇವಾನಾಮಪಿ ದೈವತಂ। ಪ್ರಮಾಣಂ ಚೈವ ಲೋಕಸ್ಯ ಬ್ರಹ್ಮಾತ್ರೈವ ಹಿ ಕಾರಣಂ॥). ನಾವು ಶಾಸ್ತ್ರದಲ್ಲಿ ಹಾಗೆ ಸುಮ್ಮನೆ ಬರೆದಿಟ್ಟುಕೊಂಡರೆ ಎಲ್ಲವೂ ಸಿದ್ಧಿಸುವುದಿಲ್ಲ. ಅದಕ್ಕೆ ಕ್ಷಾತ್ರಬಲವೂ ಬೇಕು, ಜೀವನವನ್ನು ಹೊರೆಯಲು ಅಗತ್ಯವಾದ ಸಾಧನಗಳ ಮೇಲೆ ಹತೋಟಿಯೂ ಬೇಕು. ಬ್ರಹ್ಮಬಲ ಮತ್ತು ಕ್ಷಾತ್ರಬಲ ಒಟ್ಟಾಗಿ ಪರಸ್ಪರರ ಹಿತರಕ್ಷಣೆ ಮಾಡಿದಾಗಲೇ ಸ್ವಸ್ಥ ಮತ್ತು ಮುಕ್ತ ಊಳಿಗಮಾನ್ಯ ಪ್ರಭುತ್ವ ಪದ್ಧತಿ ಭದ್ರನೆಲೆಯಲ್ಲಿರಲು ಸಾಧ್ಯ. ಅದಕ್ಕೆ ಪೂರಕವಾಗಿ ಮನು ತನ್ನ ದನಿಯನ್ನು ವೇದಸಮ್ಮತವೆಂದು ಹರಿಯಬಿಟ್ಟಿದ್ದಾನೆ.

ಬ್ರಾಹ್ಮಣರ ಬಗೆಗೂ ಕ್ರುದ್ಧನಾಗಿ ಮನು ಕೆಲವು ಕಟುವಾದ ವಿಧಿಗಳನ್ನು ಹೇಳಲು ಅಂಜುವುದಿಲ್ಲ: "ಬ್ರಾಹ್ಮಣನು ಹೆಂಡ ಕುಡಿದರೆ ಪ್ರಾಯಶ್ಚಿತ್ತಕ್ಕಾಗಿ ಇನ್ನಷ್ಟು ಹೆಂಡ ಕುಡಿಯಬೇಕು; ಆದರೆ ಅದು ಕುದಿಯುವ ಹೆಂಡವಾಗಿರಬೇಕು. ಅದು ಶರೀರದೊಳಗೆ ಅಂಗಾಂಗಗಳನ್ನು ಸುಟ್ಟರೆ ಅವನ ಪಾಪ ಪರಿಹಾರವಾಗುತ್ತದೆ" (೧೧.೯೦). ಆಧುನಿಕ ಬ್ರಾಹ್ಮಣರು ಮನುವಿನ ವಿಧಿಯನ್ನು ಮಾನ್ಯ ಮಾಡಿ ಬಿಯರ್ ಮೇಲೆ ವಿಸ್ಕಿ ಸೇವಿಸಿದರೆ ಪ್ರಾಯಶ್ಚಿತ್ತ ಪೂರ್ಣಗೊಳ್ಳುತ್ತದೆ!! ಪಾಪ, ಮನುವಿಗೆ ಅದು ತಿಳಿದಿರಲಿಲ್ಲ. ಅವನ ಬೀಭತ್ಸ ಕಲ್ಪನೆಗಳಿಗೆ ಎಲ್ಲೆಯೇ ಇಲ್ಲ. ಅವನು ಹೇಳುತ್ತಾನೆ: "ಸಾರಾಯಿಯು (ಮದ್ಯ) ಮಲಕ್ಕೆ ಸಮಾನ; ಆದ್ದರಿಂದ ಆ ಪಾಪಮಯ ಮಲಸದೃಶ ಮದ್ಯವನ್ನು ಮೇಲಿನ ಮೂರು ವರ್ಣದವರು ಕುಡಿಯಬಾರದು" (೧೧.೯೪). ಸೋಮರಸವನ್ನು ಮದ್ಯವೆಂದು ಋಗ್ವೇದದ ಋಷಿಗಳು ಭಾವಿಸಿರಲಿಲ್ಲವೆಂದು ಮನು ತಿಳಿದಿರುವಂತಿದೆ. "ನಾವು ಸೋಮ ಕುಡಿದು ಅಮೃತತ್ವ ಪಡೆದೆವು" ಎಂದು ದೇವತೆಗಳೇ ಹೇಳುತ್ತಾರೆ (ಅಪಾಮ ಸೋಮಂ ಅಮೃತಾ ಅಭೂಮ). ಸೋಮವನ್ನು ವಿಪರೀತ ಪ್ರಮಾಣದಲ್ಲಿ ಹೀರಿ ಇಂದ್ರನು ತನ್ನ ಹುಚ್ಚು ಆಶಯಗಳನ್ನು ಪ್ರಕಟಿಸುವುದು ಒಂದು ಋಗ್ವೇದ ಸೂಕ್ತದ ವಸ್ತುವೆಂಬುದನ್ನು ಮನುವೂ ತಿಳಿದಿದ್ದಿರಬೇಕು. ಆದರೂ ಬ್ರಾಹ್ಮಣರನ್ನು ಕುರಿತು ಅವನು ಹಿತವಚನವೊಂದನ್ನು ಹೇಳಿದ್ದಾನೆ: "ಮದ್ಯ ಸೇವನೆಯಿಂದ ಮತ್ತನಾದ ಬ್ರಾಹ್ಮಣನು ಅಮೇಧ್ಯದಲ್ಲಿ ಬಿದ್ದಾನು. ಅಲ್ಲಿಯೂ ವೇದಮಂತ್ರ ಹೇಳಿಯಾನು. ಎಲ್ಲಾದರೂ ಉಂಟೆ? ಆದ್ದರಿಂದ ಬ್ರಾಹ್ಮಣನು ಮದ್ಯ ಸೇವಿಸಬಾರದು" (೧೧.೯೬). ಇನ್ನೊಂದು ಪದ್ಯವನ್ನು ಮಾತ್ರ ಈ ಅಧ್ಯಾಯದಿಂದ ಉದ್ಧರಿಸಿ ವಿರಮಿಸೋಣ: "ಗುರುಪತ್ನಿಯನ್ನು ಸಂಭೋಗಿಸಿದವನಿಗೆ ಇರುವುದೊಂದೇ ಪ್ರಾಯಶ್ಚಿತ್ತ ವಿಧಿ. ಅವನು ಮೊದಲು ತನ್ನ ಪಾಪವನ್ನು ಪ್ರಕಟಿಸಬೇಕು. ನಂತರ, ಕಾದ ಕಬ್ಬಿಣದ ಮಂಚದಲ್ಲಿ ಮಲಗಿ, ಚೆನ್ನಾಗಿ ಕಾಯಿಸಿದ ಸ್ತ್ರೀವಿಗ್ರಹವೊಂದನ್ನು ಅಪ್ಪಿಕೊಂಡು ಪ್ರಾಣ ಬಿಡಬೇಕು. ಆಗ ಅವನ ಪಾಪವು ಶುದ್ಧಿಗೊಳ್ಳುತ್ತದೆ" (೧೧.೧೦೩). ಸುಮ್ಮನೆ ಮರಣವನ್ನಪ್ಪಿದರೆ ಪಾಪ ಪರಿಹಾರವಾಗುವುದಿಲ್ಲ; ಹೀಗೆ ಬೀಭತ್ಸವಾಗಿಯೇ ಸತ್ತು ಪಾಪ ಪರಿಹಾರ ಮಾಡಿಕೊಳ್ಳಬೇಕು! ಅದಕ್ಕೇ ಮನು ಹೇಳುತ್ತಾನೆ: ಹೀಗೆ ಮಾಡದಿದ್ದರೆ ಒಂದು ಪರ್ಯಾಯ ಮಾರ್ಗವಿದೆ: "ತನ್ನ ಶಿಶ್ನ ಮತ್ತು ವೃಷಣಗಳನ್ನು ಕೊಯ್ದು ಬೊಗಸೆಯಲ್ಲಿಟ್ಟುಕೊಂಡು ಅಸುನೀಗುವವರೆಗೂ ನಡೆದು ಹೋಗಿಬಿಡಬೇಕು" (೧೧.೧೦೪). ಲೈಂಗಿಕತೃಷೆ ಅತಿಯಾಗಿ ಪ್ರಕಟವಾಗುತ್ತಿದ್ದ ಸಂದರ್ಭ ಅದಾಗಿದ್ದಿರಬೇಕು; ಆದ್ದರಿಂದಲೇ ಮನು ರಕ್ಷಾಕವಚಗಳನ್ನು ಸಿದ್ಧಗೊಳಿಸಿಕೊಟ್ಟಿದ್ದಾನೆ. ಇದು ಗುರು ಮತ್ತು ಗುರುಪತ್ನಿಯ ಬಗ್ಗೆ ಅಪಾರ ಶ್ರದ್ಧೆ–ಗೌರವಗಳ ಸೂಚಕವೂ ಹೌದು.

ಮಿಕ್ಕಂತೆ ಹನ್ನೊಂದನೆಯ ಅಧ್ಯಾಯವು ವಿವಿಧ ಪಾಪಕ್ರಿಯೆಗಳಿಗೆ ಪ್ರಾಯಶ್ಚಿತ್ತ ರೂಪದ ವಿಧಿಗಳನ್ನು ಹೇಳಿದೆ: ಉದಾಹರಣೆಗೆ, ಗೋಹತ್ಯೆ, ಅವಕೀರ್ಣಿ ಎಂಬ ಉಪಪಾತಕ, ಅಪಾತ್ರೀಕರಣ, ವೈಶ್ಯ–ಶೂದ್ರ ಹತ್ಯೆ, ಬೇರೆ ಪ್ರಾಣಿ–ಪಕ್ಷಿಗಳ ಹತ್ಯೆ, ಸಸ್ಯನಾಶ, ಕಳ್ಳತನ, ದುರ್ಜನರಿಂದ ದಾನ ಪಡೆಯುವುದು, ಇತ್ಯಾದಿ. ಸಾಮಾಜಿಕ ನೈತಿಕತೆಗೆ ಇವೆಲ್ಲಾ ಖಂಡಿತ ಒಳ್ಳೆಯ ಪೂರಕಗಳೆಂದು ಹೇಳಬಹುದು. ೨೬೫ ಶ್ಲೋಕಗಳ ಈ ಅಧ್ಯಾಯವು ಮುಕ್ತಾಯವಾಗುವುದು ವೇದಪಠಣ ಎಷ್ಟು ಶ್ರೇಯಸ್ಕರವೆಂದು ಹೇಳುವುದರ ಮೂಲಕ. ಋಕ್–ಯಜುಸ್–ಸಾಮ ಸಂಹಿತೆಗಳನ್ನು ಅಂತರಾರ್ಥ ಸಹಿತವಾಗಿ ಅಧ್ಯಯನ ಮಾಡಿ ಮೂರು ಬಾರಿ ಪಠಣ ಮಾಡಿದರೆ ಎಲ್ಲ ಪಾಪಗಳಿಂದಲೂ ಮುಕ್ತಿ ಸಿಗುತ್ತದೆ (೧೧.೨೬೨). ಪಠಣದಿಂದ ಪಾಪ ಪರಿಹಾರದ ಕಲ್ಪನೆಗಳು ಎಲ್ಲ ಮತ–ಧರ್ಮಗಳಲ್ಲೂ ಸಾಂದ್ರವಾಗಿವೆಯೆಂಬುದು ಗಮನಾರ್ಹ.

ಕೊನೆಯ ಅಧ್ಯಾಯದಲ್ಲಿ (೧೨) ೧೨೬ ಶ್ಲೋಕಗಳು ಮಾತ್ರ ಇವೆ; ಮನುಷ್ಯರು ಮಾಡುವ ಕರ್ಮಗಳ ಫಲಗಳು ಅಧ್ಯಾಯದ ವಿಚಾರ. ಮೊದಲನೆಯ ಅಧ್ಯಾಯವು ಆರಂಭವಾದ್ದು ಕೆಲವು ಮುನಿಗಳು ಮನುವಿನ ಬಳಿ ಹೋಗಿ ಪ್ರಶ್ನೆ ಕೇಳುವುದರಿಂದ. ಅವನು ಏಕಾಗ್ರಚಿತ್ತನಾಗಿ ಕುಳಿತಿದ್ದ,

ಇವರು ಹೋಗಿ ಪ್ರಶ್ನೆ ಕೇಳಿದರು. ಪ್ರಶ್ನೆ "ನಾಲ್ಕು ವರ್ಣಗಳು, ಅವುಗಳ ಸಂಕರ, ಅವರೆಲ್ಲರ ಕರ್ತವ್ಯ ರೂಪದ ಧರ್ಮ"ವನ್ನು ಕುರಿತಾದದ್ದು. ಜಗತ್ತಿನ ಸೃಷ್ಟಿಯಿಂದ ಆರಂಭಿಸಿ ಮನು ಎಲ್ಲವನ್ನೂ ತಿಳಿಸಿದ; ವಿಶೇಷವಾಗಿ ನಾಲ್ಕು ವರ್ಣದವರ ಕರ್ತವ್ಯಗಳನ್ನು ತಿಳಿಸಿದ. ಐದನೆಯ ಅಧ್ಯಾಯದ ಆರಂಭದಲ್ಲಿ "ಸ್ನಾತಕನು ಆಚರಿಸಬೇಕಾದ ಧರ್ಮವನ್ನು ಭೃಗು ಮಹರ್ಷಿಯು ಹೇಳಿದ; ಮುನಿಗಳು ಮಹರ್ಷಿಯನ್ನು ಸ್ವಜಾತಿ ವಿಹಿತವಾದವರ ಆಚರಣೆಗಳನ್ನು ವಿವರಿಸಬೇಕೆಂದು ಕೇಳಿಕೊಂಡರು" ಎಂದಿದೆ. ಭೃಗು ಮನುವಿನ ಮಗನಂತೆ; ತಂದೆಯ ಕೆಲಸವನ್ನು ಮಗನಿಗೆ ವರ್ಗಾಯಿಸಲಾಗಿತ್ತು. ಮುಂದಿನ ಅಧ್ಯಾಯಗಳು ಭೃಗುವಿನ ಬಾಯಿಂದ ಬಂದುವೋ ಅಥವಾ ಉಪದೇಶ ನೀಡಲು ಮನು ಹಿಂದಿರುಗಿದನೋ ಪ್ರಸ್ತುತ ಲೇಖಕನಿಗೆ ತಿಳಿಯುತ್ತಿಲ್ಲ. ಬಹುಶಃ ಮನು ಹೇಳಿದ್ದುದನ್ನು ಭೃಗು ಹೇಳುತ್ತಿದ್ದಾನೆ. ಏಕೆಂದರೆ, ಮೊದಲ ಅಧ್ಯಾಯದ ಕೊನೆಯಲ್ಲಿ (೧.೧೧೮) "ಮನುವು ಈ ಶಾಸ್ತ್ರದಲ್ಲಿ ಹೇಳಿದ್ದುದನ್ನು ಭೃಗುವು ಇತರ ಮುನಿಗಳಿಗೆ ಹೇಳಿದ" ಎಂದಿದೆ. "ಮನುವಿಗೆ ಹಾಕಿದ ಪ್ರಶ್ನೆಗಳಿಗೆ ಅವನು ನೀಡಿದ್ದ ಉತ್ತರಗಳನ್ನು ಅರಿತುಕೊಳ್ಳಿ" (೧.೧೧೯) ಎಂದು ಅಧ್ಯಾಯವು ಕೊನೆಯಾಗಿದೆ. ಮತ್ತೆ ಕೊನೆಯ ಅಧ್ಯಾಯದಲ್ಲಿ "ಮನುವಿನ ಮಗನಾದ ಭೃಗು ಆ ಮುನಿಗಳಿಗೆ ಕರ್ಮಗಳ ಫಲಾಫಲಗಳನ್ನು ಕುರಿತು ಹೇಳಿದ" (೧೨.೨: ಸ ತಾನುವಾಚ ಧರ್ಮಾತ್ಮಾ ಮಹರ್ಷೀನ್ ಮಾನವೋ ಭೃಗುಃ), ಎಂದಿದೆ. ಅಂದರೆ ಮನುಸ್ಮೃತಿಯು ಮನುವಿನ ದಿವ್ಯಚಿಂತನೆಯನ್ನು ಭೃಗುವಿನ ಮೂಲಕ ಹೇಳಿಸಿದೆ. ಇದರಿಂದ ಗ್ರಂಥದ ವಿಷಯ ಮಂಡನೆಯು ಯಾವ ರೀತಿಯಲ್ಲೂ ಬದಲಾಗುವುದಿಲ್ಲ; ಆದರೆ ಮನುವಿನ ಪರಂಪರೆಯ ವಿಚಾರವನ್ನು ಮನುಸ್ಮೃತಿಯು ಸ್ವತಃ ಪ್ರಸ್ತಾಪಿಸಿದೆಯೆಂಬುದು ಕುತೂಹಲದ ಸಂಗತಿ.

"ಕಾಯಾ ವಾಚಾ ಮನಸಾ" ಎಂಬ ಪ್ರಯೋಗ ನಮ್ಮಲ್ಲಿದೆ. ಮನುಸ್ಮೃತಿಯು ಅದನ್ನು 'ಮನಸ್ಸು-ಮಾತು-ಶರೀರ' ಎಂಬ ಕ್ರಮದಲ್ಲಿ ಉಚ್ಚರಿಸಿದೆ. ಇವುಗಳ ಕರ್ಮದಿಂದಾಗಿ ಶುಭಾಶುಭ ಫಲಗಳು ಉಂಟಾಗುತ್ತವೆ. ಜನ್ಮಾಂತರದ ಸ್ಥಿತಿಗತಿಗಳು ಇವುಗಳಿಂದ ನಿರ್ಧಾರವಾಗುತ್ತವೆ (೧೨.೩: ಶುಭಾಶುಭ ಫಲಂ ಕರ್ಮ ಮನೋವಾಗ್ದೇಹ ಸಂಭವಂ। ಕರ್ಮಜಾ ಗತಯೋ ನೃಣಾಮುತ್ತಮಾಧಮ ಮಧ್ಯಮಾಃ॥). ಅಂದರೆ ಮಾನಸ ದುಷ್ಕರ್ಮ, ವಾಚಿಕ ಪಾಪ ಮತ್ತು ಶಾರೀರಕ ದುಷ್ಕರ್ಮಗಳ ಜಿಜ್ಞಾಸೆಯು ಮನುಸ್ಮೃತಿಯ ಕಡೆಯ ಅಧ್ಯಾಯದ ವಸ್ತು. ಮಾನಸ ದುಷ್ಕರ್ಮಕ್ಕೆ ಉದಾಹರಣೆಗಳು ಇತರರ ಸಂಪತ್ತನ್ನು ಪಡೆಯಲು ಆಶಿಸುವುದು, ಇತ್ಯಾದಿ (೧೨.೫). ಕರ್ಕಶ ಮತ್ತು ಮಲಿನ ಮಾತು, ಅಸಂಗತ ಪ್ರಲಾಪ, ಇತ್ಯಾದಿಗಳು ವಾಚಿಕ ಪಾಪ (೧೨.೬). ಹಿಂಸೆ, ಪರಸ್ತ್ರೀ ಸಂಸರ್ಗ, ಇತ್ಯಾದಿಗಳು ಶಾರೀರಿಕ ದುಷ್ಕರ್ಮ. ಇಂತಹ ಪ್ರತಿಯೊಂದು ಪಾಪ ಕರ್ಮಕ್ಕೂ ಕೆಟ್ಟ ಪರಿಣಾಮಗಳಿವೆ: ಉದಾಹರಣೆಗೆ, ಮಾನಸಿಕ ದುಷ್ಕರ್ಮದಿಂದ ಅಂತ್ಯಜನಾಗಿ ಜನ್ಮ ತಾಳಬೇಕಾಗುತ್ತದೆ (೧೨.೯). ಅಂತ್ಯಜರೇ ಮಾನಸಿಕ ಕುಕರ್ಮ ಮಾಡಿದರೆ ಏನು ಪರಿಣಾಮ? ಮನು ಆ ಪ್ರಶ್ನೆಯನ್ನು ಹಾಕಿಕೊಳ್ಳುವುದಿಲ್ಲ. ಅವರಿಗೆ ಮನಸ್ಸೇ ಇಲ್ಲ ಎಂದುಬಿಡುತ್ತಾನೇನೊ! ಮನಸ್ಸು, ಮಾತು ಮತ್ತು ಶರೀರ, ಮೂರನ್ನೂ ನಿಗ್ರಹಿಸಿ ಸ್ವಾಧೀನಪಡಿಸಿಕೊಂಡವನು 'ತ್ರಿದಂಡಿ'; ಅವನದು ಸದಾ ಸದ್ಬುದ್ಧಿಯೇ (೧೨.೧೦). ಇಲ್ಲಿಂದ ಮುಂದಕ್ಕೆ ಭೂತಾತ್ಮ, ಕ್ಷೇತ್ರಜ್ಞ, ಜೀವಾತ್ಮ, ಮುಂತಾದ ಪರಿಕಲ್ಪನೆಗಳ ಪ್ರಸ್ತಾಪವಿದೆ. ಭಗವದ್ಗೀತೆಯು ಇದರಿಂದ ಪ್ರೇರಣೆ ಪಡೆದಿದ್ದರೆ ಆಶ್ಚರ್ಯವಿಲ್ಲ. ಸಾಂಖ್ಯ ದರ್ಶನದ ಪಂಚತನ್ಮಾತ್ರಗಳು (ಪರಮಾಣುರೂಪದ ಸೂಕ್ಷ್ಮದ್ರವ್ಯ) ಸಹ ಕಾಣಿಸಿಕೊಳ್ಳುತ್ತವೆ. "ಮನುಷ್ಯ ಶರೀರವನ್ನು ಧರಿಸುವಾಗ ಜೀವಾತ್ಮನು ಹೆಚ್ಚು ಧರ್ಮ ಮತ್ತು ಕಡಿಮೆ ಅಧರ್ಮ ಮಾಡಿದ್ದರೆ ಅವನು ದಿವ್ಯಶರೀರ ಹೊಂದಿ ಸ್ವರ್ಗಸುಖ ಅನುಭವಿಸುತ್ತಾನೆ" (೧೨.೨೦). ಇಹಲೋಕದಲ್ಲಿ ಸುಖ-ದುಃಖ ಅನುಭವಿಸಲು ಪಂಚಭೂತಾತ್ಮಕ ಶರೀರ ಇದೆ. (ಇದು ಸಾಂಖ್ಯ, ನ್ಯಾಯ-ವೈಶೇಷಿಕ ಮುಂತಾದ ತತ್ತ್ವಶಾಸ್ತ್ರೀಯ ಶಾಖೆಗಳ ನಿಲುವು); ಪರಲೋಕದಲ್ಲಿ ಪಂಚತನ್ಮಾತ್ರಗಳು ಬೇರೆಯೇ ಇರುತ್ತವಂತೆ (ಇದು ಮನುಕಲ್ಪನೆ ಮಾತ್ರ)."

ಸತ್ತ್ವ, ರಜಸ್ ಮತ್ತು ತಮಸ್ ಎಂಬ ಮೂರು ಗುಣಗಳು ಆತ್ಮನ ಗುಣಗಳು; ಆತ್ಮನಲ್ಲದೆ ಮಹಾನಾತ್ಮವೂ ಇದೆ. ಅದು ತ್ರಿಗುಣಾತ್ಮಕ ಪ್ರಕೃತಿಯನ್ನು ವ್ಯಾಪಿಸಿ ಸರ್ವತ್ರ ಗತಿಶೀಲವಾಗಿರುತ್ತದೆ (೧೨.೨೪). ಇದು ಸಾಂಖ್ಯವೂ ಅಲ್ಲದ, ಗೀತೆಯ ದೃಷ್ಟಿಯೂ ಅಲ್ಲದ ಮನು ತತ್ತ್ವಶಾಸ್ತ್ರ!! ಆದಾಗ್ಯೂ ಬಹುಮಟ್ಟಿಗೆ ಗೀತೆಯ ಪ್ರತಿಪಾದನೆಯು ಮನುವಿನಲ್ಲೂ ಇದೆ. ಯಾವ ಗುಣಪ್ರಾಧಾನ್ಯವು ವ್ಯಕ್ತಿಯನ್ನು ಹೇಗೆ ರೂಪಿಸುತ್ತದೆಂಬುದು ಒಂದು ಕಡೆಯಾದರೆ, ಯಾವ ಯಾವ ಕರ್ಮಗಳು ಎಂತೆಂತಹ ಜನ್ಮ ನೀಡುತ್ತವೆಂಬುದು ಇನ್ನೊಂದು ಕಡೆ. ಇದನ್ನು ದೀರ್ಘವಾಗಿ ವಿವರಿಸಲಾಗಿದೆ. ಒಂದು ಉದಾಹರಣೆ: ಸುರಾಪಾನ ಮಾಡಿದ ಬ್ರಾಹ್ಮಣನು ಕ್ರಿಮಿ, ಕೀಟ, ಚಿಟ್ಟೆ, ಮಲ ತಿನ್ನುವ ಹಕ್ಕಿ, ಹಿಂಸ್ರಸ್ವಭಾವದ ಹುಲಿ, ಇತ್ಯಾದಿ ಜನ್ಮಗಳನ್ನು ತಾಳುತ್ತಾನೆ (೧೨.೫೬). ಕಳ್ಳತನ ಮಾಡಿದ ಬ್ರಾಹ್ಮಣನು ಜೇಡರಹುಳು, ಹಾವು, ಓತಿ, ಮೀನು, ಪಿಶಾಚಿ, ಇತ್ಯಾದಿಯಾಗಿ ಹುಟ್ಟುತ್ತಾನೆ (೧೨.೫೭). ಇದಕ್ಕೆಲ್ಲಾ ತರ್ಕವನ್ನು ನೀಡಿ ಸಮರ್ಥಿಸುವ ಅಗತ್ಯವು ಮನುವಿಗಿಲ್ಲ. ಆದ್ದರಿಂದ ಕೆಡುಕನ್ನು ಭೀಕರವೆಂದು ಸೂಚಿಸಲು ವಿವಿಧ ಜನ್ಮಗಳನ್ನು ವಿಧಿಸಬಹುದು. ಉದಾಹರಣೆಗೆ, ಪಾಪಿಗಳ ಸ್ನೇಹ ಮಾಡಿರುವವನು, ಪರಸ್ತ್ರೀ ಸಂಸರ್ಗ ಉಳ್ಳವನು, ಬ್ರಾಹ್ಮಣನ ಸಂಪತ್ತು ಅಪಹರಿಸಿದವನು ಬ್ರಹ್ಮರಾಕ್ಷಸನಾಗುತ್ತಾನೆ (೧೨.೬೦). ಆ ಬ್ರಹ್ಮರಾಕ್ಷಸ ಹೇಗಿರುತ್ತಾನೋ ಯಾರಿಗೂ ತಿಳಿಯದು! ಪರಸ್ತ್ರೀ ಸಂಗ ಮಾಡಿದವನಿಗೆ ಏನೆಲ್ಲಾ ಆಗಬಹುದೆಂಬುದನ್ನು ಹನ್ನೆರಡೂ ಅಧ್ಯಾಯಗಳಿಂದ ಸಂಗ್ರಹಿಸಿದರೆ ಕನಿಷ್ಠ ಇಪ್ಪತ್ತು ಸಾಧ್ಯತೆಗಳಾದರೂ ಇದ್ದಾವು. ಧಾನ್ಯ ಕದ್ದರೆ ಇಲಿಯಾಗುತ್ತಾನೆ, ಕಂಚು ಕದ್ದರೆ ಹಂಸಪಕ್ಷಿಯಾಗುತ್ತಾನೆ (ಅದೇನು ಸಂಬಂಧವೋ ತಿಳಿಯುವುದಿಲ್ಲ), ಹಾಲು ಕದ್ದರೆ ಕಾಗೆಯಾಗುತ್ತಾನೆ, ಬೆಲ್ಲ ಇತ್ಯಾದಿ ಸಿಹಿ ಪದಾರ್ಥ ಕದ್ದರೆ ನಾಯಿಯಾಗುತ್ತಾನೆ (೧೨.೬೨). ಇನ್ನೊಂದೆರಡು ಪದ್ಯಗಳನ್ನು ನೋಡಿ: ಆಯಾ ವರ್ಣದವರು ಯಾವ ಕಾರಣಕ್ಕೂ ತಮ್ಮ ನಿಗದಿತ ಸ್ಥಾನ ಮತ್ತು ಕರ್ತವ್ಯಗಳಿಗೆ ಚ್ಯುತಿ ಬಾರದಂತೆ ನಡೆದುಕೊಳ್ಳುವುದೇ ಅವರ 'ಧರ್ಮ' ಎಂಬುದನ್ನು ಬೀಭತ್ಸವಾಗಿ ಚಿತ್ರಿಸುವ ಪದ್ಯಗಳವು. ಭಗವದ್ಗೀತೆಯು ಅದನ್ನೇ ಸ್ವಾದಿಷ್ಟವೆಂಬಂತೆ 'ಸ್ವ-ಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ' ಎಂದು ನಿರೂಪಿಸಿತು. "ತನ್ನ ವರ್ಣದ ಆಚರಣೆಗಳನ್ನು ನಿಗದಿತವಾಗಿ ಮಾಡದ ಬ್ರಾಹ್ಮಣನು ಮುಂದೆ ಉಲ್ಕಾಮುಖವೆಂಬ ಪ್ರೇತವಾಗಿ ಜನ್ಮ ತಾಳುತ್ತಾನೆ; ಆ ಪ್ರೇತವು ತನ್ನ ವಾಂತಿಯನ್ನೇ ತಿನ್ನುವಂಥದು. ಅಂತೆಯೇ, ತನ್ನ ಧರ್ಮದ ಚೌಕಟ್ಟಿನಲ್ಲಿ ಉಳಿದು ಧರ್ಮಾಚರಣೆ ಮಾಡದ ಕ್ಷತ್ರಿಯನು ಮುಂದೆ ಕಟಪೂತನೆಂಬ ಪ್ರೇತವಾಗುತ್ತಾನೆ; ಅದು ಹೊಲಸನ್ನು ಮತ್ತು ಹೆಣವನ್ನು

# ಗಜ಼ಲ್

ಹೃದಯ ಗಾಯವ ಉಪ್ಪು ನೀರಲಿ ತೊಳೆಯಬಾರದು ಸಾಕಿ
ಇನ್ನೆರಡು ಬಟ್ಟಲು ಮದಿರೆ ಕುಡಿಯದೆ ನಶೆ ಏರದು ಸಾಕಿ

ಇಳೆಯಂಗಳ ಹರಿಗಿ ಬೀಜ ಬಿತ್ತಿದರೂ ಜೀವಜಲ ಬೇಕು
ಒಲವು ಮೊಳಕೆ ಒಡೆಯದೆ ಜೀವ ಸಂತಸದಲಿ ಅರಳದು ಸಾಕಿ

ಪ್ರೀತಿಸಬೇಕು ಲಜ್ಜೆ ಪರದೆ ಹರಿದು ತುಂಡಾಗುವವರೆಗೆ
ತನು ಮನಗಳು ಹಗುರಾಗದೆ ಬದುಕಿಗೆ ನೆಮ್ಮದಿ ಸಿಗದು ಸಾಕಿ

ಕಾಡಿನ ಕಂಟಿಯ ಒಣಗಿದ ಕೋಲಲಿ ಸ್ವರ ನುಡಿಸಲಾಗದು
ಕೊಳಲಿಗೆ ಒಲವಿಂದ ಉಸಿರು ತುಂಬದೆ ನಾದ ಹೊರಡದು ಸಾಕಿ

ಪ್ರೇಮ ನದಿ ಮೌನದಲಿ ಹರಿಯದಿರೆ ಇಳೆಯು ಬರಡಾಗುವದು
ಶಶಿಗೆ ರವಿಯ 'ಪ್ರಭೆ' ಬೀಳದೆ ಬೆಳದಿಂಗಳು ಹರಡದು ಸಾಕಿ.

**ಪ್ರಭಾವತಿ ಎಸ್. ದೇಸಾಯಿ**
ವಿವೇಕ ನಗರ (ಪಶ್ಚಿಮ), ಬಸವನ ಬಾಗೇವಾಡಿ ರಸ್ತೆ, ವಿಜಯಪುರ - ೫೮೬ ೧೦೯

ತಿನ್ನುವಂಥದು" (೧೨.೭೧). ಇನ್ನು ವೈಶ್ಯ-ಶೂದ್ರರ ಗತಿ ಏನು? "ವೈಶ್ಯನು ಧರ್ಮಭ್ರಷ್ಟನಾದರೆ ಕೀವು ತಿನ್ನುತ್ತಾ ಮೈತ್ರಾಕ್ಷ ಜ್ಯೋತಿಕವೆಂಬ ಪ್ರೇತನಾಗುತ್ತಾನೆ. ಶೂದ್ರನು ಧರ್ಮ ಮೀರಿ ನಡೆದರೆ ಚೈಲಾಶಕನೆಂಬ ಪ್ರೇತನಾಗುತ್ತಾನೆ" (೧೨.೭೨). ಎಲ್ಲಿವೆಯೋ ಈ ಪ್ರೇತಗಳು ಮತ್ತು ಮನು ಅವುಗಳೊಡನೆ ಎಲ್ಲಿ ಮುಖಾಮುಖಿಯಾದನೋ! ಬೆದರಿಕೆ ಒಡ್ಡುವುದೆಂದರೆ ಇದೇ ಅಲ್ಲವೆ? ಲೋಕಾಯತರು ಉಚ್ಚ ವರ್ಣದವರ ಢೋಂಗೀ ಮಾತುಗಳನ್ನು ಅಲಕ್ಷಿಸಲು "ನಿಮ್ಮ ಜರ್ಫರಿ-ತುರ್ಫರಿಗಳೆಲ್ಲಾ ತಿಳಿದಿದೆ, ಅದರಿಂದ ನಿಮಗೆ ಶರಣಾಗುವುದು ಮೂರ್ಖತನ" ಎಂಬರ್ಥದ ಮಾತನ್ನಾಡಿದ್ದಾರೆ; ಲೋಕಾಯತರನ್ನು ಮನು ಹೇಗೆ ಶಪಿಸಿದ್ದಾನೆಂಬುದನ್ನು ಈಗಾಗಲೆ ನೋಡಿದ್ದೇವೆ. ನೈತಿಕತೆಯ ಪಾಠ ಹೇಳಲು ಇಂತಹ ಪೊಳ್ಳು ಬೆದರಿಕೆಗಳೇ ಮನುವಿನ ಬತ್ತಳಿಕೆಯಲ್ಲಿರುವುದು; ಇದನ್ನು ಸಂಪೂರ್ಣವಾಗಿ ಅನುಕರಿಸಿದ್ದು ಕುಖ್ಯಾತ ಗರುಡ ಪುರಾಣವೇ ಇರಬೇಕೆನಿಸುತ್ತದೆ!




ಮುಂದುವರಿದು ಮನು ನಿಃಶ್ರೇಯಸಕ್ಕೆ, ಅಂದರೆ ಮೋಕ್ಷ ಪಡೆಯಲು, ಯಾವ ಕರ್ಮಗಳನ್ನು ಬ್ರಾಹ್ಮಣ ಕೈಗೊಳ್ಳಬೇಕೆಂಬುದನ್ನು ಸೂಚಿಸುತ್ತಾನೆ : ತಪಸ್ಸು, ವೇದಾಧ್ಯಯನ, ಇಂದ್ರಿಯ ನಿಗ್ರಹ, ಅಹಿಂಸೆ, ಗುರುಸೇವೆ, ಜ್ಞಾನ, ಇವೆಲ್ಲಾ ಅವನಿಗೆ ಸಾಧನಗಳು (೧೨.೮೩); ಅವುಗಳಲ್ಲಿ ಆತ್ಮಜ್ಞಾನವು ಅತಿಶ್ರೇಷ್ಠ ಸಾಧನೆ (೮೫). "ಎಲ್ಲದರಲ್ಲೂ ಆತ್ಮನನ್ನು ಕಾಣುವುದು ಮತ್ತು ತನ್ನಲ್ಲಿ ಎಲ್ಲ ಭೂತವಸ್ತುಗಳನ್ನೂ ಕಾಣುವುದು ಆತ್ಮಸಿದ್ಧಿಗೆ ಹಾದಿ" (೧೨.೯೧ : ಸರ್ವಭೂತೇಷು ಚಾತ್ಮಾನಂ ಸರ್ವಭೂತಾನಿ ಚಾತ್ಮನಿ। ಸಮಂ ಪಶ್ಯನ್ನಾತ್ಮಯಾಜೀ ಸ್ವಾರಾಜ್ಯಮಧಿಗಚ್ಛತಿ ॥) ಎಂಬ ಮನುವಿನ ಮಾತನ್ನು ಭಗವದ್ಗೀತೆಯು ಹೆಚ್ಚುಕಡಿಮೆ ಯಥಾವತ್ತಾಗಿ ಎತ್ತಿಕೊಂಡಿದೆ (೬.೨೯ ಮತ್ತು ೧೮.೨೦). ಹೀಗೆ ಆತ್ಮಜ್ಞಾನವು ಶ್ರೇಯಸ್ಕರವೆಂದು ಪ್ರಸ್ತಾಪಿಸುವಾಗ 'ಅನಾತ್ಮವಾದಿ'ಗಳಾದ ಲೋಕಾಯತರು ಮತ್ತು ಬೌದ್ಧರನ್ನು ಸ್ಮರಿಸದಿರಲು ಸಾಧ್ಯವೆ? ಬೇರೆ ಸಂದರ್ಭಗಳಲ್ಲಿ ಅವರನ್ನು ಮನು ಖಂಡಿಸಿದ್ದನ್ನು ನಾವೀಗಾಗಲೆ ನೋಡಿದ್ದೇವೆ. ಇಲ್ಲಿ ಅದನ್ನು ಇನ್ನೂ ಹೆಚ್ಚು ಸ್ಪಷ್ಟವಾಗಿ ಹೇಳಲಾಗಿದೆಯಾದರೂ ಮನು ಯಥಾಪ್ರಕಾರ ಅದಕ್ಕೆ ಯಾವ ತರ್ಕದ ಕೋಟೆಯನ್ನೂ ಕಟ್ಟಲು ಹೋಗಿಲ್ಲ. "ವೇದಕ್ಕೆ ಹೊರತಾದ ಸ್ಮೃತಿಗಳು ಅನೇಕ ಹೀನ ವಿಚಾರಗಳನ್ನು ಹೊಂದಿವೆ; ಅವು ನಿಷ್ಫಲವಾದ ವಿಕೃತ ಸ್ಮೃತಿಗಳು. ಅವು ಪರಲೋಕದಲ್ಲಿ ದುರ್ಗತಿಯನ್ನು ಉಂಟುಮಾಡುತ್ತವೆ" (೧೨.೯೫ : ಯಾ ವೇದಬಾಹ್ಯಾಃ ಸ್ಮೃತಯೋ ಯಾಶ್ಚ ಕಾಶ್ಚ ಕುದೃಷ್ಟಯಃ। ಸರ್ವಾಸ್ತಾ ನಿಷ್ಫಲಾಃ ಪ್ರೇತ್ಯ ತಪೋನಿಷ್ಠಾ ಹಿ ತಾಃ ಸ್ಮೃತಾಃ ॥). ಲೋಕಾಯತರು ಯಾವ ಸ್ಮೃತಿ ಗ್ರಂಥವನ್ನೂ ರಚಿಸಲಿಲ್ಲ ಮತ್ತು ಬೌದ್ಧರ "ವಿನಯ ಪಿಟಕ"ವು ಯಾವ ದೃಷ್ಟಿಯಿಂದಲೂ ಹೀನವೆನಿಸಿಕೊಳ್ಳಲಾರದು. ಮನುವಿನ ಪ್ರಕಾರ 'ವೇದಬಾಹ್ಯ' ಸ್ಮೃತಿಗಳು "ಇತ್ತೀಚಿನ" ರಚನೆಗಳಾದ್ದರಿಂದ ಅವು ಅವಾಸ್ತವಿಕ ಮತ್ತು ನಿರರ್ಥಕ (೯೬ : ...ತಾನಿ ಅರ್ವಾಕ್ ಕಾಲಿಕತಯಾ ನಿಷ್ಫಲಾನಿ ಅನೃತಾನಿ ಚ). "ನಾಲ್ಕು ವರ್ಣಗಳು, ಮೂರು ಲೋಕಗಳು, ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳು ಎಲ್ಲಾ ವೇದದಿಂದ ಉಗಮಗೊಂಡಿವೆ; ಅಷ್ಟೇ ಏಕೆ, ಭೂತ-ವರ್ತಮಾನ-ಭವಿಷ್ಯಗಳೆಲ್ಲವೂ, ಎಲ್ಲ ವ್ಯವಸ್ಥೆಗಳೂ, ವೇದದಿಂದಲೇ ಜನ್ಯವಾಗಿವೆ" (೧೨.೯೭ : ಚಾತುರ್ವರ್ಣ್ಯಂ ತ್ರಯೋ ಲೋಕಾಃ ಚತ್ವಾರಶ್ಚ ಆಶ್ರಮಾಃ ಪೃಥಕ್। ಭೂತಂ ಭವ್ಯಂ ಭವಿಷ್ಯಂ ಚ ಸರ್ವಂ ವೇದಾತ್ ಪ್ರಸಿಧ್ಯತಿ ॥). ಮುಂದೆ ಜ್ಞಾನಸಾಧನಗಳಾದ ಪ್ರತ್ಯಕ್ಷ, ಅನುಮಾನ ಮತ್ತು ಆಗಮಗಳನ್ನು ಮನು ಪ್ರಸ್ತಾಪಿಸುತ್ತಾನೆ (೧೦೫). ಎಲ್ಲಾ ವೇದದಿಂದ ಉಗಮಗೊಂಡಿತೆಂಬುದು ಪ್ರತ್ಯಕ್ಷ ಮತ್ತು ಅನುಮಾನ ಪ್ರಮಾಣಗಳಿಂದ ಸಿದ್ಧಿಸುವುದಿಲ್ಲ ಮತ್ತು ಆಗಮ ಅಥವಾ ವೇದವು ಜಗತ್ತು ಅಸ್ತಿತ್ವಕ್ಕೆ ಬಂದುದನ್ನು ಕುರಿತು ಅಚ್ಚರಿ ವ್ಯಕ್ತಪಡಿಸುತ್ತದೆಯೇ (ಸೂಕ್ತ ೧೦.೧೨೯) ವಿನಾ ತನ್ನಿಂದಲೇ ಎಲ್ಲಾ ಉಗಮಗೊಂಡಿತೆಂದು ಹೇಳುವುದಿಲ್ಲ. ನಂತರದ ಶತಮಾನಗಳಲ್ಲಿ ವೇದದಲ್ಲಿರುವುದನ್ನು ನಗಣ್ಯವಾಗಿಸಿ ಅದಕ್ಕೆ ಎಲ್ಲಿಲ್ಲದ ಪ್ರಾಶಸ್ತ್ಯವನ್ನು ಹೇರಲಾಯಿತು. ಯಜ್ಞಾದಿ ಆಚರಣೆಗಳನ್ನು 'ಬ್ರಾಹ್ಮಣಗಳು' ಎಂಬ ಗ್ರಂಥಗಳಲ್ಲಿ ವಿಶದೀಕರಿಸಲಾಗಿದೆ. ನಾಲ್ಕು ವರ್ಣಗಳೆಂಬ ವಿಭಜನೆಯನ್ನು ಋಗ್ವೇದದ ಕೊನೆಯ ಘಟ್ಟದಲ್ಲಿ ಒಮ್ಮೆ ಮಾತ್ರ ಹೇಳಲಾಗಿದೆ (೧೦.೯೦.೧೨), ಆದರೆ ಬ್ರಾಹ್ಮಣಗಳು ಅದಕ್ಕೆ ಭದ್ರಕೋಟೆ ರಚಿಸಿದವು. ಸಾಮಾಜಿಕ ವಿಕಾಸಕ್ಕೆ ಕೇವಲ ಗ್ರಂಥಗಳು ಮತ್ತು ಅಭಿಪ್ರಾಯಗಳು ಅಡಿಪಾಯವಾಗಲಾರವು. ಉತ್ಪಾದನಾ ಚಟುವಟಿಕೆ, ವಿಧಾನ, ಸಾಮಗ್ರಿ ಮತ್ತು ಸಂಬಂಧಗಳು ಅದಕ್ಕೆ ನಿರ್ಣಾಯಕವೆಂಬುದು ಮಾನವ ಸಮಾಜದ ಇತಿಹಾಸದಿಂದ ಸಾಬೀತಾಗಿದೆ. ಮನುವಿನ ಕಾಲದ ಸಾಮಾಜಿಕ ವ್ಯವಸ್ಥೆಯು ಸ್ಥಿರವಾಗಿ ನಿಲ್ಲಲಿಲ್ಲ, ನಿಲ್ಲಲಾಗುತ್ತಿರಲಿಲ್ಲ; ಏಕೆಂದರೆ ಉತ್ಪಾದನಾ ಸಂಬಂಧಗಳು ಮತ್ತು ವಿಧಾನ ಬದಲಾಗುತ್ತಾ ಹೋದವು. "ಮನುವಿನ ಆದೇಶಗಳನ್ನು ಪಾಲಿಸಬೇಕು, ಮನುವಿನ ಕಾಲದ ಧರ್ಮವನ್ನು ಸ್ಥಾಪಿಸಬೇಕು" ಎಂದೆಲ್ಲಾ ಹಲುಬುತ್ತಿರುವವರು ಜೀವಿಸುತ್ತಿರುವುದು ಬೇರೊಂದು ಉತ್ಪಾದನಾ ವ್ಯವಸ್ಥೆಯಲ್ಲಿ; ಆದ್ದರಿಂದ ಅಂದಿನ ವ್ಯವಸ್ಥೆಯನ್ನು ಯಥಾವತ್ತಾಗಿ ಸ್ಥಾಪಿಸಿಕೊಳ್ಳಲು ಸಾಧ್ಯವಾಗುವುದೂ ಇಲ್ಲ. ಅಂದಿನ ಮನು-ನೈತಿಕತೆ ಇಂದು ಕ್ರೂರ ಅನೈತಿಕತೆಯೆಂದು ಭಾಸವಾಗುತ್ತದೆ; ಏಕೆಂದರೆ ಅವನ ನೈತಿಕತೆಯು ನಾಲ್ಕು ವರ್ಣಗಳ ಸೌಧದ ನೈತಿಕತೆ. ಆ ಸೌಧದಲ್ಲಿ ಮೇಲು-ಕೀಳೆಂಬುದು ಅಂಗೀಕೃತ ಧರ್ಮ. "ಹಾಗಿತ್ತು, ಆದ್ದರಿಂದ ಹಾಗೇ ಇರುತ್ತದೆ ಅಥವಾ ಇರಬೇಕು" ಎಂಬುದು ಅತಿಸೌಲಭ್ಯಗಳನ್ನು ಸವಿದವರ ಮತ್ತು ಸವಿಯುತ್ತಿರುವವರ ಆಶಯವಾದೀತೇ ವಿನಾ ಇಡೀ ಸಮಾಜದ ಆಶಯವಾಗುವುದಿಲ್ಲ. ಧರ್ಮಶಾಸ್ತ್ರ ಗ್ರಂಥಗಳ ಅಧ್ಯಯನ ಮಾಡುವಾಗ ಇರಬೇಕಾದ ಕನಿಷ್ಠ ಬೌದ್ಧಿಕ ಶಿಸ್ತು ಮತ್ತು ಸಾಮಾಜಿಕ ಪ್ರಜ್ಞೆ ಇದು. ಮನುಸ್ಮೃತಿಯ ಮಾತೊಂದು ಮನನೀಯವಾಗಿದೆ : "ಏನೂ ತಿಳಿಯದವನಿಗಿಂತಲೂ ಸ್ವಲ್ಪ ತಿಳಿದವನು ಉತ್ತಮ; ಓದಿಕೊಂಡದ್ದನ್ನು ಅರ್ಥ ಮಾಡಿಕೊಳ್ಳುವವನು ಇನ್ನೂ ಮೇಲ್ಮಟ್ಟದವನು. ಅರ್ಥವೇ ಬೇರೆ ಅರಿವೇ ಬೇರೆ. ತಿಳಿವಳಿಕೆಯು ಅಂತರ್ಗತವಾದಾಗ ಅದು 'ಅರಿವು' ಎನಿಸಿಕೊಳ್ಳುತ್ತದೆ; ಆದ್ದರಿಂದ ಅರ್ಥಕ್ಕಿಂತ ಅರಿವು ಮೇಲು. ಎಲ್ಲಕ್ಕಿಂತಲೂ ಹಿರಿದಾದ್ದು ತಿಳಿದುದರ ಅನುಷ್ಠಾನ (೧೨.೧೦೩ : ಅಜ್ಞೇಭ್ಯೋ ಗ್ರಂಥಿನಃ ಶ್ರೇಷ್ಠಾ ಗ್ರಂಥಿಭ್ಯೋ ಧಾರಿಣೋ ವರಾಃ। ಧಾರಿಭ್ಯೋ ಜ್ಞಾನಿನಃ ಶ್ರೇಷ್ಠಾ ಜ್ಞಾನಿಭ್ಯೋ ವ್ಯವಸಾಯಿನಃ ॥). ಮನುಸ್ಮೃತಿಯು ಉಪನಿಷದ್ವಾಕ್ಯವೊಂದರ ಪ್ರೇರಣೆಯಿಂದ ಹೇಳುತ್ತದೆ, "ತಪಸ್ಸು ಮತ್ತು ವಿದ್ಯೆ (ಬ್ರಾಹ್ಮಣನಿಗೆ) ಆತ್ಮಸಿದ್ಧಿಗೆ ಸಾಧನಗಳು; ತಪಸ್ಸಿನಿಂದ ಪಾಪವು ಇಲ್ಲವಾಗುತ್ತದೆ ಮತ್ತು ವಿದ್ಯೆಯು ಅಮೃತತ್ವವನ್ನು ನೀಡುತ್ತದೆ" (೧೨.೧೦೪ : ...ತಪಸಾ ಕಿಲ್ಬಿಷಂ ಹಂತಿ ವಿದ್ಯಯಾಽಮೃತಮಶ್ನುತೇ). ಹೀಗೆ ಹೇಳುವ ಮನು ತಪಸ್ಸು ಮತ್ತು ವಿದ್ಯೆಯೆಂಬ ಎರಡು ಸಾಧನಗಳನ್ನೂ ನಾಲ್ಕನೆಯ ವರ್ಣದವರಿಗೆ ಕೊಡಮಾಡಕೂಡದೆಂದು ಆಗ್ರಹಿಸುವುದು ಅಕ್ಷಮ್ಯ ವಿಪರ್ಯಾಸ.

ಕಡೆಯ ಭಾಗದಲ್ಲಿ ಮನುಸ್ಮೃತಿಯು ತನ್ನ ರಹಸ್ಯವನ್ನು ದಾಖಲಿಸುತ್ತದೆ. ಇದೊಂದು ರೀತಿ ಅಧಿಕಾರದ ವಿಕೇಂದ್ರೀಕರಣ : ತಾನಿಲ್ಲದಾಗ ಯಾರ ಮಾರ್ಗದರ್ಶನ ಪಡೆಯಬೇಕು ಎಂಬುದರ ತಿಳಿವಳಿಕೆ. ಸಾಮಾನ್ಯವಾಗಿ ಧರ್ಮಶಾಸ್ತ್ರ ಗ್ರಂಥಗಳು ಧರ್ಮದ ಆಕರವೆಂದು ಎರಡನ್ನು ಹೆಸರಿಸುತ್ತವೆ : ವೇದ ಮತ್ತು ತಿಳಿದವರ ನಡತೆ. ಆಪಸ್ತಂಬ ಧರ್ಮಸೂತ್ರವು "ಧರ್ಮಜ್ಞ ಸಮಯಃ ಪ್ರಮಾಣಂ" ಎನ್ನುತ್ತದೆ. ಈಗಲೂ ಕಾನೂನಿನಲ್ಲಿ ಅನುಕ್ತವಾಗಿರುವುದಕ್ಕೆ ಸಂಪ್ರದಾಯ ಅಥವಾ ಆಚರಣೆ ಹಾದಿ ತೋರುತ್ತದೆಯೆಂಬ ಪದ್ಧತಿ ಜಾರಿಯಲ್ಲಿದೆ. ಆದರೆ ಆಚರಣೆಯು ಶಿಷ್ಟರದ್ದಾಗಿರಬೇಕು, ಅಷ್ಟೆ. ಜೊತೆಗೆ, ಯಾವುದಾದರೂ ಧಾರ್ಮಿಕ ಜಿಜ್ಞಾಸೆಯಲ್ಲಿ ಸಂಶಯ ತಲೆದೋರಿದರೆ ಅದಕ್ಕೆ ಪರಿಹಾರವು "ಸದಾಚಾರ ಸಂಪನ್ನರು ಮತ್ತು ಶಿಷ್ಟ ಬ್ರಾಹ್ಮಣರಿಂದ" ದೊರೆಯುತ್ತದೆಂದು ಮನುಸ್ಮೃತಿ ಹೇಳುತ್ತದೆ (೧೨.೧೦೮ : ...ಯಂ ಶಿಷ್ಟಾ

ಕಾವ್ಯಲೋಕ

# ಅಲೆಮಾರಿ ಫಕೀರ



**ನಾ**ನೇನು ಕೊಡಲಿ ಗೆಳತಿ
ನಾ ಒಬ್ಬ ಬಡ ಕವಿಯಾಗಿ
ಎದೆಯ ಭಾವನೆಗಳ ಹೊರತು
ಧನ ಕನಕಗಳಿಲ್ಲ ನನ್ನ ಬಳಿ.

ಹಲವು ಸುಂದರ ಕನಸುಗಳಿಗೆ
ಜೀವ ಕೊಡ ಬಲ್ಲೆ ಭಾವನೆಗಳ
ಹಂಚಬಲ್ಲೆ ಉಸಿರಿರುವ ತನಕ
ಭಾವನೆಗಳು ಹೃದಯಲಿರುವ ತನಕ.

ನನಗೆ ಮಹಲು, ಬಂಗಲೆಗಳ ಹಂಗಿಲ್ಲ
ಆಕಾಶ, ನೆಲ, ಜಲಗಳ ಸಂಗವೆ ಎಲ್ಲಾ
ಕನಸನ್ನೊತ್ತು ತಿರುಗುವೆ, ಭಾವನೆಗಳ ಬೆನ್ನತ್ತಿ
ಭಾವದಲೆಯಲಿ ತೇಲುವೆ.

ಗುಡಿ, ಗುಂಡಾರ, ದೇವರು ದಿಂಡರು
ಸಿರಿವಂತ, ಧನವಂತ, ಒಡೆಯನ ಹಂಗಿಗೆ
ಬಗ್ಗದ ಜಗ್ಗದ ನಾನು
ಅಲೆಮಾರಿ ಭಾವ ಫಕೀರನಂತೆ.

**ಮರುಳಸಿದ್ದಪ್ಪ ದೊಡ್ಡಮನಿ**
ಹುಲಕೋಟಿ ತಾಲ್ಲೂಕು, ಗದಗ ಜಿಲ್ಲೆ

ಬ್ರಾಹ್ಮಣಾ ಭೂಯಃ ಸ ಧರ್ಮಃ ಸ್ಯಾದಶಂಕಿತಃ). ಆದರೆ ಸಂಘರ್ಷ ಉಂಟಾಗುವುದು ಆ 'ಶಿಷ್ಟನು' ತನ್ನ ಮೂಗಿನ ನೇರಕ್ಕೆ, ತನ್ನ ಅನುಕೂಲಕ್ಕೆ ತಕ್ಕಂತೆ, ನಿಷ್ಕರ್ಷೆಯನ್ನು ಘೋಷಿಸುವುದರಿಂದ. ನಾಲ್ಕೂ ವರ್ಣಗಳ ಪ್ರತಿನಿಧಿಗಳ ನ್ಯಾಯಾಧಿಕರಣವನ್ನು ಮನುಸ್ಮೃತಿಯ ಕಾಲದಲ್ಲಿ ನಿರೀಕ್ಷಿಸುವಂತಿರಲಿಲ್ಲ, ಆದರೆ ಈಗ ಅದು ಸಾಧ್ಯವಾಗಿದೆ. ಹೋಗಲಿ, ಶಿಷ್ಟರು ಯಾರು? "ಯಾವ ಬ್ರಾಹ್ಮಣರು ವೇದ–ವೇದಾಂಗ ಪಾರಂಗತರೋ ಅವರು; ಅವರೇ ಧರ್ಮದ ನಿಷ್ಕರ್ಷೆ ಮಾಡಲು ಅರ್ಹರು" (೧೨.೧೦೯). ಅವರು ಮತ್ತೆ ಮನುವಿನ ನಾಲ್ಕು ಅಸಮಾನ ವರ್ಣಗಳ ಏಣಿಯ ಎತ್ತರದ ಮೆಟ್ಟಿಲಲ್ಲಿ ನಿಂತು ತೀರ್ಮಾನ ನೀಡುವಾಗ ವರ್ಣನಿಷ್ಠರೂ ವ್ಯಕ್ತಿನಿಷ್ಠರೂ ಆಗಿರುತ್ತಾರೆ. ಊಳಿಗಮಾನ್ಯ ಪ್ರಭುತ್ವದಲ್ಲಿ ಊಳಿಗನಿಗೆಂದೂ ಸಾಮಾಜಿಕ ನ್ಯಾಯ ದೊರೆಯುವ ಸಾಧ್ಯತೆ ಇಲ್ಲ ಮತ್ತು ಮನು ಆ ಊಳಿಗಮಾನ್ಯ ವ್ಯವಸ್ಥೆಯ ಚೌಕಟ್ಟಿನಿಂದಾಚೆಗೆ ಬರುವುದು ಶಕ್ಯವಿಲ್ಲ. ಈಗಲೂ "ಮನುವೇ ಸರ್ವಶ್ರೇಷ್ಠ" ಎನ್ನುವವರು ಅಂತರಾಳದಲ್ಲಿ ಊಳಿಗಮಾನ್ಯ ಪ್ರಭುತ್ವದ ಆರಾಧಕರೇ ಆಗಿರುತ್ತಾರೆ; ಅಂತಹ ಪ್ರಭುತ್ವವು ನಶಿಸಿಹೋಗಿದ್ದರೆ ಅದರ ಪುನರುತ್ಥಾನಕ್ಕೆ ಹಪಹಪಿಸುತ್ತಾರೆ. ಕಾಲವು ಅವರ ಕಡೆಗಿಲ್ಲವೆಂಬುದೊಂದೇ ಸಮಾಧಾನ.

ಮನು ಸಹ ನ್ಯಾಯಾಧಿಕರಣ ತತ್ತ್ವವನ್ನು ಶಿಫಾರಸು ಮಾಡುತ್ತಾನೆ; ಅದರದೇ ಅಂತಿಮ ನಿರ್ಣಯ (೧೨.೧೧೦). ಆದರೆ ಅದರ ಸದಸ್ಯರು ಹತ್ತೋ ಮೂರೋ ಏನೇ ಇರಲಿ, ಅವರು ಮತ್ತೆ 'ವೇದ – ವೇದಾಂಗ ಪರಿಣತರೇ!' ಅವರ ನಿರ್ಣಯವನ್ನು ಅಂಗೀಕರಿಸಬೇಕೇ ವಿನಾ ಧರ್ಮವನ್ನು ಬದಲಾಯಿಸುವಂತಿಲ್ಲ! ವಾಸ್ತವದಲ್ಲಿ ಅದು ಬದಲಾಗಿಯೇ ಇದೆಯಲ್ಲವೆ? ಬದಲಾಗಕೂಡದೆಂಬ ಮನು ಇತಿಹಾಸದಲ್ಲಿ ಹೂತುಹೋಗುತ್ತಾನೆ, ಸಜೀವ ಸಮಾಜವು ಬದಲಾದ ಸಂದರ್ಭಕ್ಕೆ ಮೌಲ್ಯಯುತ ನಿಯಮಗಳನ್ನು ರಚಿಸಿಕೊಳ್ಳುತ್ತದೆ. ಇದು ವಾಸ್ತವ ಇತಿಹಾಸ. ಅದರ ವಿರುದ್ಧ ಈಜಹೋಗಬಾರದೆಂದು ನಿಷೇಧ ಹೇರಲಾಗದು; ಆದರೆ ಈಜುವವರ ಭುಜಗಳು ಒಮ್ಮೆ ನಿರ್ಣಯಿಸುತ್ತವೆ, ಇತಿಹಾಸದ ವಿರುದ್ಧ ಈಜಹೋಗುವುದು ನಿರರ್ಥಕ, ಎಂದು. ಆದ್ದರಿಂದ ಪುನರುತ್ಥಾನವಾದಿಗಳು ಇತಿಹಾಸದ ತರ್ಕವನ್ನು ಮಾನ್ಯ ಮಾಡಬೇಕು, ಅದಕ್ಕೆ ಬಾಗಬೇಕು. ನ್ಯಾಯಾಧಿಕರಣದಲ್ಲಿ ವೇದ, ನ್ಯಾಯಶಾಸ್ತ್ರ, ತರ್ಕಶಾಸ್ತ್ರ, ನಿರುಕ್ತ, ಧರ್ಮಶಾಸ್ತ್ರ ನಿಷ್ಣಾತರನ್ನಲ್ಲದೆ ಒಬ್ಬೊಬ್ಬ ಬ್ರಹ್ಮಚಾರಿ, ಗೃಹಸ್ಥ ಮತ್ತು ಸಂನ್ಯಾಸಿಗೂ ಅವಕಾಶ ಕಲ್ಪಿಸಿದ್ದಾನೆ. (೧೨.೧೧೧–೧೧೨). ಆದರೆ ಅವರದ್ದೆಲ್ಲಾ ಒಂದೇ ಮನೋಭೂಮಿಕೆ: ಇತಿಹಾಸವು ಸ್ತಬ್ಧವಾಗಿದೆ ಮತ್ತು ಅದು ಹಾಗೆಯೇ ಮುಂದುವರಿಯಬೇಕು, ಎಂಬುದು.

ಇಷ್ಟೆಲ್ಲಾ ಹೇಳಿದ ಮನು ಹನ್ನೆರಡನೆಯ ಅಧ್ಯಾಯದ ಕೊನೆಯಲ್ಲಿ ಹೇಳುತ್ತಾನೆ: "ಮನು ಮತ್ತು ಭೃಗು ಉಪದೇಶಿಸಿದ ಈ ಧರ್ಮಶಾಸ್ತ್ರವನ್ನು ಪಠಿಸುವ ದ್ವಿಜನು ಶೀಲವಂತನಾಗಿ ಬಾಳಿ ಅಮೃತತ್ವವನ್ನು ಪಡೆಯುತ್ತಾನೆ" ಎಂದು (೧೨.೧೨೬: ಇತ್ಯೇತನ್ಮಾನವಂ ಶಾಸ್ತ್ರಂ ಭೃಗುಪ್ರೋಕ್ತಂ ಪಠನ್ ದ್ವಿಜಃ। ಭವತ್ಯಾಚಾರವಾನ್ ನಿತ್ಯಂ ಯಥೇಷ್ಟಾ ಪ್ರಾಪ್ನುಯಾದ್ಗತಿಂ॥). ಪಠಿಸಿದರೆ ಸಾಕೆ? ಅನುಷ್ಠಾನವು ಅಗತ್ಯವಲ್ಲವೆ? ಭಾರತದ ಸಂವಿಧಾನವು ಮನುಸ್ಮೃತಿ ಮತ್ತು ಗೀತೆಯಂತಲ್ಲ. ಅದನ್ನು ಓದಿದರೆ ಸಾಲದು; ಅದರ ಆಶಯಗಳು ಕಾರ್ಯರೂಪಕ್ಕೆ ಬರಲು ಪ್ರಜ್ಞಾಪೂರ್ವಕ ಸಾಮುದಾಯಿಕ ಮಧ್ಯಪ್ರವೇಶವು ಅನಿವಾರ್ಯ. ಮನು ಪರಂಪರೆಯು ಶತಮಾನಗಳ ಕಾಲ ನಮ್ಮ ದೇಶದ ಮನಸ್ಸುಗಳನ್ನು ಆಕ್ರಮಿಸಿದೆ. ಎಷ್ಟು ಆರೋಗ್ಯಕರವೋ ಅಷ್ಟನ್ನುಳಿಸಿಕೊಂಡು ಅದಕ್ಕೆ ಜೀವ ತುಂಬೋಣ ಮತ್ತು ಮಿಕ್ಕಿದ್ದನ್ನು ಪಠಣ ಮಾಡುತ್ತಾ ಇತಿಹಾಸ ತಿಳಿಯೋಣ.

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

# ಸಂಸದೀಯ ಪ್ರಜಾಪ್ರಭುತ್ವ ಮತ್ತು ಸಂವಿಧಾನ – ಒಂದು ಚರ್ಚೆ

ಡಾ॥ ಬಿ. ಆರ್. ಚಂದ್ರಶೇಖರ

**ಪ್ರಸ್ತಾವನೆ**

**ಭಾರತದ ಸಂವಿಧಾನ**

ಭಾರತದ ಪ್ರಜೆಗಳಾದ ನಾವು, ಭಾರತವನ್ನು ಒಂದು ಸಾರ್ವಭೌಮ ಸಮಾಜವಾದಿ, ಜಾತ್ಯತೀತ, ಪ್ರಜಾಸತ್ತಾತ್ಮಕ ಗಣತಂತ್ರವನ್ನಾಗಿ ವಿಧಿಯುಕ್ತವಾಗಿ ಸ್ಥಾಪಿಸಿ, ಅದರ ಎಲ್ಲಾ ಪ್ರಜೆಗಳಿಗೆ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯವನ್ನು, ವಿಚಾರ ಅಭಿವ್ಯಕ್ತಿ, ನಂಬಿಕೆ, ಭಕ್ತಿ ಮತ್ತು ಆರಾಧನೆಗಳಲ್ಲಿ ಸ್ವಾತಂತ್ರ್ಯವನ್ನು, ಸ್ಥಾನಮಾನ ಮತ್ತು ಅವಕಾಶಗಳಲ್ಲಿ ಸಮಾನತೆಯನ್ನು ದೊರಕಿಸಿ, ವ್ಯೆಯಕ್ತಿಕ ಘನತೆ, ದೇಶದ ಒಗ್ಗಟ್ಟು ಮತ್ತು ಏಕತೆಗಾಗಿ ಎಲ್ಲರಲ್ಲೂ ಭ್ರಾತೃತ್ವವನ್ನು ಪ್ರೋತ್ಸಾಹಿಸಲು ನಿರ್ಧರಿಸಿ, ನಮ್ಮ ಸಂವಿಧಾನ ರಚನಾಸಭೆಯಲ್ಲಿ ೧೯೪೯ ನವೆಂಬರ್ ಮಾಹೆಯ ೨೬ನೇ ದಿನದಂದು, ಈ ಸಂವಿಧಾನವನ್ನು ಸ್ವೀಕರಿಸಿ, ಶಾಸನವನ್ನಾಗಿ ನಮಗೆ ನಾವೇ ಸಮರ್ಪಿಸಿಕೊಂಡಿದ್ದೇವೆ.

ಆರಂಭದಲ್ಲಿ ಉಲ್ಲೇಖಿಸಿರುವ ಸಂವಿಧಾನದ ಪೀಠಿಕೆಯೇನಿದೆ (ಪ್ರಿಯಾಂಬಲ್) ಇದು ನಮ್ಮ ಸಮಾಜದ ಮೂಲ ಸಂಹಿತೆ – ಮೂಲ ಪ್ರಣಾಳಿಕೆ. ಇದು ನಮ್ಮ ಬದುಕನ್ನು ನಿರ್ವಹಿಸುವ ನಿಯಮಗಳ ಕೋಶ. ಎಲ್ಲಿಯವರೆಗೆ ನಾವು ನಮ್ಮ ಸಂವಿಧಾನದ ಪೀಠಿಕೆಯಲ್ಲಿರುವ ಮೌಲ್ಯಗಳನ್ನು ಕಾಯ್ದುಕೊಂಡು ಬರುತ್ತೇವೆಯೋ, ನ್ಯಾಯ, ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವ ಎಂಬ ಮೌಲ್ಯಗಳನ್ನು ರಕ್ಷಿಸಿಕೊಂಡು ಬರುತ್ತೇವೆಯೋ, ಅಲ್ಲಿಯವರೆಗೆ ನಮ್ಮ ಸಂಸದೀಯ ಪ್ರಜಾಪ್ರಭುತ್ವಕ್ಕೆ ಅಪಾಯವಿರುವುದಿಲ್ಲ. ಸಂವಿಧಾನ ಮತ್ತು ಸಂಸದೀಯ ಪ್ರಜಾಪ್ರಭುತ್ವ – ಇವೆರಡೂ ಪರಸ್ಪರ ಪೂರಕವಾದ ಸಂಸ್ಥೆಗಳು. ಪ್ರಜಾಪ್ರಭುತ್ವಕ್ಕೆ ಸಂವಿಧಾನ ಜೀವ ನೀಡಿದರೆ ಸಂವಿಧಾನಕ್ಕೆ ಪ್ರಜಾಪ್ರಭುತ್ವವು ರಕ್ಷಣೆ–ಭದ್ರತೆ ನೀಡುತ್ತದೆ. ಸಂವಿಧಾನವು ಸಂಸದೀಯ ಪ್ರಜಾಪ್ರಭುತ್ವದ ಮೂಲ ಆಕರವಾಗಿದೆ. ಸಂವಿಧಾನವನ್ನು ರಕ್ಷಿಸುವ, ಅದಕ್ಕೆ ಭದ್ರತೆ ನೀಡುವ ಜವಾಬ್ದಾರಿ ಸಂಸತ್ತಿನದಾಗಿದೆ. ಸಂವಿಧಾನ ಮತ್ತು ಸಂಸತ್ತು ಜೀವಂತವಾಗಿದ್ದರೆ, ಗತಿಶೀಲವಾಗಿದ್ದರೆ ಅಲ್ಲಿ ಪ್ರಜಾಪ್ರಭುತ್ವವು ಗಟ್ಟಿಯಾಗಿ, ಭದ್ರವಾಗಿ, ಬಲವಾಗಿ ನೆಲೆಯೂರಲು ಸಾಧ್ಯ. ಶತಶತಮಾನಗಳಿಂದ ಸಮಾಜದ ಉನ್ನತ ವರ್ಗಗಳ – ವರ್ಣಗಳ ವರ್ಣಾಶ್ರಮ ವ್ಯವಸ್ಥೆಯ ಶೋಷಣೆಗೆ, ತುಳಿತಕ್ಕೆ, ಯಜಮಾನಿಕೆಗೆ, ದಬ್ಬಾಳಿಕೆಗೆ ತುತ್ತಾಗಿದ್ದ ಹಿಂದುಳಿದ ಜನವರ್ಗಕ್ಕೆ, ದಲಿತರಿಗೆ, ಬುಡಕಟ್ಟು ಸಮುದಾಯಗಳಿಗೆ, ಮಹಿಳೆಯರಿಗೆ, ಕೂಲಿಕಾರರಿಗೆ ನಮ್ಮ ಸಂವಿಧಾನವು ರಕ್ಷಣೆಯನ್ನು, ಭದ್ರತೆಯನ್ನು ಮತ್ತು ಸಾಮಾಜಿಕ ನ್ಯಾಯವನ್ನು ನೀಡಿದೆ. ಎಲ್ಲಕ್ಕಿಂತ ಮುಖ್ಯವಾಗಿ ದಲಿತರಿಗೆ, ಹಿಂದುಳಿದ ವರ್ಗಕ್ಕೆ, ಮಹಿಳೆಯರಿಗೆ ಘನತೆಯಿಂದ ಬದುಕುವ ಅವಕಾಶ ನೀಡಿದೆ. ವ್ಯಕ್ತಿಗಳ ಘನತೆಯನ್ನು ಎತ್ತಿಹಿಡಿಯಲಾಗಿದೆ. ಇದು ಸಂವಿಧಾನದ ಪೀಠಿಕೆಯಲ್ಲೇ ಇದೆ. ಇದನ್ನು ಅರ್ಥ ಮಾಡಿಕೊಂಡರೆ ನಮ್ಮ ಸಮಾಜದಲ್ಲಿ ಚಾತುರ್ವರ್ಣ್ಯ ಪದ್ಧತಿಯ ಪ್ರತಿಪಾದಕರು, ಮನುಸ್ಮೃತಿಯ ಪೋಷಕರು ನಮ್ಮ ಸಂವಿಧಾನವನ್ನು ಏಕೆ ವಿರೋಧಿಸುತ್ತಿದ್ದಾರೆ ಎಂಬುದನ್ನು ತಿಳಿದುಕೊಳ್ಳಬಹುದು. ಶೂದ್ರರ ಮೇಲೆ, ಅತಿಶೂದ್ರರ ಮೇಲೆ ಮತ್ತು ಮಹಿಳೆಯರ ಮೇಲಿನ ಅವರ ಯಜಮಾನಿಕೆಯು ತಪ್ಪಿಹೋಗಿರುವುದು ಈ ವಿರೋಧಕ್ಕೆ ಮುಖ್ಯ ಕಾರಣವಾಗಿದೆ. ಇದನ್ನು ನಾವು ಚೆನ್ನಾಗಿ ಮನದಟ್ಟು ಮಾಡಿಕೊಳ್ಳಬೇಕು. ಚಾತುರ್ವರ್ಣ್ಯದ, ವರ್ಣಾಶ್ರಮ ಧರ್ಮದ, ಮನುಸ್ಮೃತಿಯ ನಿಯಮಗಳನ್ನು, ಸಂಹಿತೆಗಳನ್ನು, ಮೌಲ್ಯಗಳನ್ನು ಡಾ॥ ಬಿ. ಆರ್. ಅಂಬೇಡ್ಕರ್ ಪ್ರಣೀತ ಸಂವಿಧಾನವು ತಿರಸ್ಕರಿಸಿತು. ಆದರೆ ಇಂದು





ಅದನ್ನು ಬಲವಂತವಾಗಿ ಜನತೆಯ ಮೇಲೆ ಹೇರುವ ಕೆಲಸ – ಒಂದು ಬಗೆಯ ಹುನ್ನಾರ – ನಡೆಯುತ್ತಿದೆ. ಸಂವಿಧಾನೋಕ್ತವಾದ ಸಮಾನತೆ, ಸಾಮಾಜಿಕ ನ್ಯಾಯ, ಸ್ವಾತಂತ್ರ್ಯ, ಸಹಿಷ್ಣುತೆ, ಬಹುತ್ವ – ಇವೆಲ್ಲ ಇಂದು ತುಚ್ಛೀಕರಣಕ್ಕೆ ಒಳಗಾಗಿವೆ.

ಇಂದು ಭಾರತದಲ್ಲಿ ಸಂಸದೀಯ ಪ್ರಜಾಪ್ರಭುತ್ವ ಮತ್ತು ನಮ್ಮ ಸಂವಿಧಾನ ಅಪಾಯಕ್ಕೆ ಸಿಲುಕಿವೆ. ಅವುಗಳ ಮೇಲೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಅಲ್ಲದೆ ಪ್ರಜ್ಞಾಪೂರ್ವಕವಾಗಿ ಹಾಗೂ ಗುರಿಯಿಟ್ಟು ಕೊಂಡು ಆಕ್ರಮಣ ನಡೆದಿದೆ. ನಮ್ಮ ಸಂವಿಧಾನದ ಬಗ್ಗೆ ಅನೇಕ ಗಂಭೀರ ಆದರೆ ಆಧಾರರಹಿತ, ಪೂರ್ವಗ್ರಹಪೀಡಿತ ಆರೋಪಗಳನ್ನು ಮಾಡಲಾಗುತ್ತಿದೆ.

ಸರ್ವೋಚ್ಚ ನ್ಯಾಯಾಲಯದ ನಾಲ್ವರು ಹಿರಿಯ ನ್ಯಾಯಾಧೀಶರು ಜನವರಿ ೧೨, ೨೦೧೮ರಂದು ಪತ್ರಿಕಾ ಗೋಷ್ಠಿ ನಡೆಸಿ ನ್ಯಾಯಾಂಗ ವ್ಯವಸ್ಥೆ ಅಪಾಯಕ್ಕೆ ಸಿಲುಕಿದೆ, ಪ್ರಜಾಪ್ರಭುತ್ವ ಅವನತಿ ಕಡೆಗೆ ಸಾಗುತ್ತಿದೆ ಎಂದು ಸಾರ್ವಜನಿಕವಾಗಿ ಹೇಳುವ ಸ್ಥಿತಿ ಬಂದಿದೆ ಎಂದರೆ ನಮ್ಮ ಪ್ರಜಾಪ್ರಭುತ್ವ ಎತ್ತ ಕಡೆ ಸಾಗುತ್ತಿದೆ ಮತ್ತು ಸಂವಿಧಾನ ಯಾವ ಬಗೆಯ ಆಕ್ರಮಣವನ್ನು ಮತ್ತು ಅಪಾಯವನ್ನು ಎದುರಿಸುತ್ತಿದೆ ಎಂಬುದನ್ನು ಊಹಿಸಿಕೊಳ್ಳಬಹುದು. ನ್ಯಾಯಾಂಗ ವ್ಯವಸ್ಥೆಯು ಭ್ರಷ್ಟಗೊಂಡರೆ ಅದು ಪ್ರಜಾಪ್ರಭುತ್ವಕ್ಕೆ ಅಪಾಯ ಎಂದು ನ್ಯಾಯಾಧೀಶರು ಎಚ್ಚರಿಸಿದ್ದಾರೆ.

ನಮ್ಮ ಸಂವಿಧಾನವನ್ನು ಅನೇಕರು ಪೂಜ್ಯ–ಪವಿತ್ರ ಎನ್ನುತ್ತಾರೆ. ನಮ್ಮ ಪ್ರಧಾನಮಂತ್ರಿಯವರು ಸಂಸತ್ ಭವನವನ್ನು ಮೊದಲಬಾರಿ ಪ್ರವೇಶಿಸ ಬೇಕಾದರೆ ಅದಕ್ಕೆ ಶಿರಸಾಷ್ಟಾಂಗ ನಮಸ್ಕಾರ ಮಾಡುತ್ತಾರೆ. ಆದರೆ ವಾಸ್ತವವಾಗಿ ಅವುಗಳು ವಿನಾಶದ ಅಂಚಿಗೆ ಸಾಗುತ್ತಿವೆ. ಇಂತಹ ಅಡ್ಡ ಬೀಳುವುದು, ಪೂಜ್ಯ ಎನ್ನುವುದು, ಪವಿತ್ರ ಎನ್ನುವುದು, ಮಂಗಳಾರತಿ ಮಾಡುವುದು, ಹೂವೇರಿಸುವುದು ಇವೆಲ್ಲ ಅನೇಕ ಸಂದರ್ಭಗಳಲ್ಲಿ ನಾಟಕದಂತೆ, ಕೃತಕ ನಟನೆಯಂತೆ, ಆಷಾಢಭೂತಿ ಚಟುವಟಿಕೆಯಂತೆ ಕಾಣುತ್ತವೆ. ಸಂಸತ್ತನ್ನು, ಸಂವಿಧಾನವನ್ನು, ಸರ್ವೋಚ್ಚ ನ್ಯಾಯಾಲಯವನ್ನು ಪೂಜೆ ಮಾಡುವ ಅಗತ್ಯವಿಲ್ಲ. ಪೂಜೆ ಮಾಡುವುದು, ಅಡ್ಡಬೀಳುವುದು, ಮಂಗಳಾರತಿ ಎತ್ತುವುದು, ದಾನ, ದಕ್ಷಿಣೆ ನೀಡುವುದು, ಉಂಬಳಿ ಕೊಡುವುದು, ಪಾದ ಪೂಜೆ ಮಾಡುವುದು – ಮುಂತಾದವು ಮೌಢ್ಯದ ಆಚರಣೆಗಳು. ಏಕೆಂದರೆ ಇಂತಹ ಪುರೋಹಿತಶಾಹಿ ಸಂಸ್ಕೃತಿಯು ಅನಾದಿ ಕಾಲದಿಂದ ನಮ್ಮ ಸಮಾಜಕ್ಕೆ ಉಂಟುಮಾಡಿಕೊಂಡು ಬಂದಿರುವ ಅಪಾಯವನ್ನು–ವಿನಾಶವನ್ನು ಇಂದಿಗೂ ನಮಗೆ ನಿವಾರಿಸಿಕೊಳ್ಳುವುದು ಸಾಧ್ಯವಾಗಿಲ್ಲ. ಇಂದು ಕೂಡ ಈ ಪುರೋಹಿತಶಾಹಿಯ ಅಟ್ಟಹಾಸ ದೇಶದಲ್ಲಿ ಮೆರೆಯುತ್ತಿದೆ. (ಶಬರಿಮಲೆಯಲ್ಲಿ ಪುರೋಹಿತಶಾಹಿಗಳು ನಡೆಸುತ್ತಿರುವ ಪ್ರತಿಭಟನೆಯಲ್ಲಿ ಇದನ್ನು ಕಾಣಬಹುದು). ಈ ಮೆರೆದಾಟದ – ಅಟ್ಟಹಾಸದ ಹಿನ್ನೆಲೆಯಲ್ಲಿ ನಾವು ನಮ್ಮ ಸಂಸದೀಯ ಪ್ರಜಾಪ್ರಭುತ್ವವನ್ನು ಮತ್ತು ಭಾರತರತ್ನ ಡಾ॥ ಬಿ. ಆರ್. ಅಂಬೇಡ್ಕರ್ ಪ್ರಣೀತ ಸಂವಿಧಾನದ ಮಹತ್ವವನ್ನು, ಅವುಗಳ ನಡುವಿನ ಸಂಬಂಧವನ್ನು, ಅವುಗಳ ಪಾತ್ರವನ್ನು ಅರ್ಥಮಾಡಿಕೊಳ್ಳಬೇಕಾಗಿದೆ. ಈ ಎರಡು ಸಂಸ್ಥೆಗಳು ಭಾರತದ ಸಾಮಾಜಿಕ–ರಾಜಕೀಯ–ಆರ್ಥಿಕ–ಸಾಂಸ್ಕೃತಿಕ ವ್ಯವಸ್ಥೆಯ ಅಡಿಪಾಯಗಳಾಗಿವೆ. ಒಂದೇ ಮಾತಿನಲ್ಲಿ ಹೇಳುವು ದಾದರೆ ಅವು ನಮ್ಮ ಬದುಕಿನ ಅವಿಭಾಜ್ಯ ಅಂಗ ಗಳಾಗಿವೆ. ನಮ್ಮ ಸಮಾಜದ ಆಧಾರ ಸ್ತಂಭಗಳು. ಅವುಗಳಿಗೆ ಅಪಾಯ ಬಂದರೆ ನಮ್ಮ ಸಾಮಾಜಿಕ ವ್ಯವಸ್ಥೆಗೆ ಅಪಾಯ. ನಮ್ಮ ಸಾಮಾಜಿಕ ವ್ಯವಸ್ಥೆಗೆ ಅಪಾಯವೆಂದರೆ ಅಲ್ಲಿನ ಬಹುಸಂಖ್ಯಾತ ದುಡಿಯುವ ವರ್ಗಕ್ಕೆ, ಮಹಿಳೆಯರಿಗೆ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಕ್ಕೆ, ಹಿಂದುಳಿದ ವರ್ಗಗಳಿಗೆ ಹೆಚ್ಚಿನ ಅಪಾಯ ತಟ್ಟುತ್ತದೆ. ಇದು ಬಹಳ ಮುಖ್ಯ. ನಮ್ಮ ಸಂವಿಧಾನವಿದ್ದರೆ ಮಾತ್ರ ದೇಶದ ಹಿಂದುಳಿದ ವರ್ಗಕ್ಕೆ, ಮಹಿಳೆಯರಿಗೆ, ದಲಿತರಿಗೆ, ಬುಡಕಟ್ಟು ಸಮುದಾಯ ಗಳಿಗೆ ಭದ್ರತೆ, ರಕ್ಷಣೆ, ಸಮಾನತೆ, ಸಾಮಾಜಿಕ ನ್ಯಾಯ ಸಾಧ್ಯ ಅಥವಾ ಅವರು ಬದುಕುವುದು ಸಾಧ್ಯ.

**ಸಾಂವಿಧಾನಿಕ ಸಂಸ್ಥೆಗಳ ಮೇಲೆ ಆಕ್ರಮಣ**

ನಮ್ಮ ದೇಶದ ಸಾಂವಿಧಾನಿಕ ಸಂಸ್ಥೆಗಳ ಸ್ವಾಯತ್ತತೆಯನ್ನು ನಾಶ ಮಾಡಲಾಗುತ್ತಿದೆ. ಅದು ರಿಸರ್ವ್ ಬ್ಯಾಂಕಾಗಿರಬಹುದು, ಚುನಾವಣಾ ಆಯೋಗವಾಗಿರಬಹುದು, ಸರ್ವೋಚ್ಚ ನ್ಯಾಯಾಲಯ ಇರಬಹುದು, ಸಿಬಿಐ ಆಗಿರಬಹುದು, ಸಾಂಖ್ಯಿಕ ಆಯೋಗಗಳಿರಬಹುದು, ವಿಶ್ವವಿದ್ಯಾಲಯಗಳಿರ ಬಹುದು, ವೈಜ್ಞಾನಿಕ–ರಕ್ಷಣಾ ವಲಯದ ಸಂಸ್ಥೆಗಳು



**ಶೋ**ಷಣೆಗೆ ಮಿತಿ ಇಲ್ಲವೇ ಇಲ್ಲಿ
ಭೀಷಣವಾಗಿದೆ ನಿತ್ಯ ಕರ್ಮಗಳಿಲ್ಲಿ
ಭೂಷಣವಾಗಿಹ ಮಂದಿಗಳ ನಡುವೆ

ಮನೆಯಲ್ಲಿ ದೊಡ್ಡವರು ಬಿಡರು
ಮಠದಲ್ಲಿ ಮಾನ್ಯರೆನುವವರು
ಮನೆ ಮನಕೆ ಲಗ್ಗೆ ಇಡುತಿಹರು
ಮೇಲ್ನೋಟ ಭರ್ಜರಿಯ ಕಂಡು
ಇಂಚಿಂಚು ಬಿಡದೆ ಕರುಬುವರು
ಸಂಚಿತಾ ನಿಧಿ ಕೂಡ ಸಾಲ ಮೂಟೆ
ತಿಳಿ ತಿಳಿದು ತುಳಿಯುತಿಹರು.......

ಬದುಕು ಬೇಕೇ ಬದುಕ ಬೇಕೇ
ದುಃಖ ಬವಣೆಲಿ ಇವರು
ಬಡತನದಲಿಹರು ಬದುಕುವರು ಹೇಗೋ
ಸುಖದ ಸುಪ್ಪತ್ತಿಗೆಲಿ ಅವರು
ಒಡೆತನದಲಿಹರು, ಹೆದರುವರು ಜನರು
ತಗೋ ನಿನಗಿದೋ ಶಾಪ, ಪಾಪ ಮಾಡಿರುವಿ
ಏಳೇಳು ಜನುಮಕ್ಕು

## ಸಾಂಪ್ರದಾಯಿಕ ಎನ್ಕೌಂಟರ್




ನಿನಗಿಲ್ಲ ದೈವಗುರುಬಲ ತಿಳಿದುಕೋ ಬಡವ!
ಹಿಡಿ ಬಹಿಷ್ಕಾರ.... ಓಡೋಡಿ ಬದುಕು
ಸಾಧ್ಯವಾದರೆ.........
ಇದು ಸಾಂಪ್ರದಾಯಿಕ ಎನ್ಕೌಂಟರ್
ಅಲ್ಲದೆ ಇನ್ನೇನು....?

**ವಿ. ಸುಬ್ರಹ್ಮಣ್ಯ ಭಟ್**
ಉಪನ್ಯಾಸಕರು, ತುಂಬೆ ಪ. ಪೂ. ಕಾಲೇಜು,
ತುಂಬೆ – ೫೭೪೧೪೩, ಬಂಟ್ವಾಳ ದ. ಕ.
೯೪೪೮೫೦೩೩೦೬

ಇರಬಹುದು, ರಾಜ್ಯಪಾಲ ಹುದ್ದೆ ಇರಬಹುದು – ಇವೆಲ್ಲ ಇಂದು ಆಕ್ರಮಣಕ್ಕೆ ಒಳಗಾಗಿವೆ. ಸರ್ಕಾರವು ಇವುಗಳನ್ನು ತನ್ನ ಹಿಡಿತಕ್ಕೆ ತೆಗೆದುಕೊಳ್ಳಲು ಪ್ರಯತ್ನಿಸುತ್ತಿದೆ. ತಮ್ಮ ಇಚ್ಛೆಗೆ ಅನುಗುಣವಾಗಿ ಅವು ನಡೆಯಬೇಕೆಂದು ಬಯಸುತ್ತದೆ. ಇಂದು ಈ ಪುರೋಹಿತಶಾಹಿ ಶಕ್ತಿಗಳು ಸಂವಿಧಾನದ ವಿರುದ್ಧ ಪ್ರತಿಭಟನೆ ನಡೆಸಿ ಅದನ್ನು ಸಾರ್ವಜನಿಕವಾಗಿ ಸುಟ್ಟು ಹಾಕಿ ಕೇಕೆ ಹಾಕುತ್ತಿವೆ. 'ಸಂವಿಧಾನವನ್ನು ಬದಲಾವಣೆ ಮಾಡುವ ಸಲುವಾಗಿಯೇ ನಾವು ಅಧಿಕಾರಕ್ಕೆ ಬಂದಿದ್ದೇವೆ' ಎಂದು ಆಳುವ ಪಕ್ಷದ ರಾಜಕಾರಣಿಗಳು ಘೋಷಿಸುತ್ತಿದ್ದಾರೆ. ಸಂವಿಧಾನಕ್ಕೆ ತಿದ್ದುಪಡಿ ತರುವುದು ಬೇರೆ, ಅದನ್ನು ಬದಲಾಯಿಸುವುದು ಬೇರೆ. ತಿದ್ದುಪಡಿ ಮಾಡಿದರೆ ಮೂಲಕ್ಕೆ ಧಕ್ಕೆಯಾಗುವುದಿಲ್ಲ. ಬದಲಾವಣೆ ಎಂದರೆ ಮೂಲಕ್ಕೆ ಧಕ್ಕೆ ಉಂಟಾಗುತ್ತದೆ. ಈ ಸಂಸ್ಥೆಗಳನ್ನು ರಕ್ಷಿಸುವುದು ಹೇಗೆ, ಅವುಗಳ ವಿನಾಶವನ್ನು ತಡೆಯುವುದು ಹೇಗೆ, ಪ್ರತಿಗಾಮಿ ಶಕ್ತಿಗಳನ್ನು ಮತ್ತು ಅವುಗಳ ದಬ್ಬಾಳಿಕೆಯನ್ನು ನಿಯಂತ್ರಿಸುವುದು ಹೇಗೆ – ಇವೇ ಮುಂತಾದವು ನಮ್ಮ ಮುಂದಿರುವ ಪ್ರಶ್ನೆಗಳು ಮತ್ತು ನಾವು ಎದುರಿಸಬೇಕಾಗಿರುವ ಸವಾಲುಗಳು.

**ಭಾರತದಲ್ಲಿ ಬಹುತ್ವದ ಮಹತ್ವ**

ನಮ್ಮ ಸಂವಿಧಾನ ಎಂದರೆ ಅದು ಸಮಾನತೆ, ಮೌಲ್ಯದ ಒಂದು ಸಿದ್ಧಾಂತ (ಪರಿಚ್ಛೇದ ೧೪, ೧೫, ೧೬, ೧೭, ೧೮, ೧೯, ೨೦, ೨೧ ಮುಂತಾದವು). ಅದು ಸಾಮಾಜಿಕ ನ್ಯಾಯದ ಒಂದು ಪ್ರಣಾಳಿಕೆ. ಸಹಮತ ಮತ್ತು ಬಹುಮತಗಳನ್ನು ಸಮತೋಲನದಲ್ಲಿ ನಿರ್ವಹಿಸುತ್ತಿರುವ ಒಂದು ಸಂಹಿತೆ. ಬಹುತ್ವ ಎನ್ನುವುದು ಅನೇಕರು ಭಾವಿಸಿರುವಂತೆ ಕೇವಲ ನಮ್ಮ ಸಂವಿಧಾನ ಅಥವಾ ಜಾತ್ಯತೀತವಾದಿಗಳು ಕಟ್ಟಿರುವ ಒಂದು ಸಂಗತಿಯಲ್ಲ. ಇದು ನಮ್ಮ ಪರಂಪರೆಯಿಂದ ಅನೂಚಾನವಾಗಿ ಹರಿದುಕೊಂಡು ಬರುತ್ತಿರುವ ಒಂದು ಸಾರ್ವತ್ರಿಕ ನಂಬಿಕೆ. ನಮ್ಮ ಇತಿಹಾಸ ಬಹುತ್ವದ ಇತಿಹಾಸ. ಇಲ್ಲಿನ ಮೌಲ್ಯವು ಭಿನ್ನಮತವನ್ನು ಸಹಿಸಿಕೊಳ್ಳುತ್ತದೆ ಮಾತ್ರವಲ್ಲ ಅದನ್ನು ಗೌರವಿಸುತ್ತದೆ. ಭಿನ್ನಮತವನ್ನು ಒಪ್ಪಿಕೊಳ್ಳುವುದು ಬಿಡುವುದು ಬೇರೆ ಪ್ರಶ್ನೆ. ಆದರೆ ಅದನ್ನು ಗೌರವಿಸುವುದು, ಭಿನ್ನಮತದ ಹಕ್ಕನ್ನು ಪ್ರಜೆಗಳಿಗೆ ನೀಡುವುದು ಪ್ರಜಾಪ್ರಭುತ್ವ ಕ್ರಮ.

ಬಹುತ್ವ ಎನ್ನುವುದು ಕೇವಲ ವೈವಿಧ್ಯತೆಯಲ್ಲ ಅಥವಾ ಅನೇಕ ಸಮುದಾಯಗಳು ಒಟ್ಟಿಗೆ ಬದುಕುವುದು ಮಾತ್ರವಲ್ಲ. ಅದು ವಿವಿಧ ಸಮುದಾಯಗಳ ನಡುವೆ, ವಿವಿಧ ಸಂಪ್ರದಾಯಗಳ ನಡುವೆ, ವಿವಿಧ ಪ್ರಣಾಳಿಕೆಗಳ ನಡುವೆ ನಡೆಸುವ ಅನುಸಂಧಾನ, ವಾದ–ಸಂವಾದ. ಬಹುತ್ವ ಎನ್ನುವುದು ಸಾಧಿಸಿಕೊಳ್ಳಬೇಕಾದ ಒಂದು ಗುರಿ. ತನ್ನಷ್ಟಕ್ಕೆ ಅದು ಪ್ರಾಪ್ತವಾಗುವುದಿಲ್ಲ. ಅನೇಕ ಸಮುದಾಯಗಳ ನಡುವೆ ಅನುಸಂಧಾನವಿಲ್ಲದಿದ್ದರೆ ಅಪನಂಬಿಕೆಗಳು ಬೆಳೆಯುತ್ತವೆ. ಬಹುತ್ವವೆಂದರೆ ಸಹಿಷ್ಣುತೆ ಮಾತ್ರವಲ್ಲ, ವಿವಿಧ ಜನಸಮುದಾಯಗಳ ನಡುವಿನ ಭಿನ್ನತೆಗಳನ್ನು ಅರ್ಥ ಮಾಡಿಕೊಳ್ಳುವುದು




ಮತ್ತು ಅವುಗಳ ಜೊತೆ ಸಂವಾದ ನಡೆಸುವುದು. ಈ ಸಂವಾದ, ಅನುಸಂಧಾನವಿಲ್ಲದಿದ್ದರೆ ಅಲ್ಲಿ ಕಂದಕಗಳು ಉಂಟಾಗುತ್ತವೆ. ಇದು ಸಹಬಾಳ್ವೆಗೆ ಕಂಟಕವಾಗುತ್ತದೆ. ಬಹುತ್ವವೆಂದರೆ ಎಲ್ಲ ಭಿನ್ನತೆಗಳನ್ನು ಕೂಡಿಸಿ ಒಂದು ಮಾಡುವುದಲ್ಲ. ಪ್ರತಿಯೊಂದು ಗುಂಪು ತನ್ನ ಅನನ್ಯತೆಯನ್ನು, ವಿಶಿಷ್ಟತೆಯನ್ನು ಕಾಯ್ದುಕೊಂಡು ಬದುಕುವ ಒಂದು ವಿಧಾನ. ಅನುಸಂಧಾನವು ಬಹುತ್ವದ ಪರಿಭಾಷೆ.

ನಮ್ಮದು ಮೂಲತಃ ಬಹುಸಂಸ್ಕೃತಿಗಳ, ಬಹುಭಾಷೆಗಳ, ಬಹುಪರಂಪರೆಯ, ಬಹುನಂಬಿಕೆಗಳ ಸಮಾಜ. ಇಲ್ಲಿ ಯಾವತ್ತೂ ಏಕಘನಾಕಾರದ ಸಂಸ್ಕೃತಿ ಬದುಕಿರಲಿಲ್ಲ ಮತ್ತು ಅದನ್ನು ಸಾಧಿಸಿಕೊಳ್ಳುವುದು ಸಾಧ್ಯವಿಲ್ಲ. ಏಕೆಂದರೆ ಬಹುತ್ವ ಎನ್ನುವುದು ನಮ್ಮ ಸಮಾಜದ ಉಸಿರು. ಈ ಬಹುತ್ವವು ನಮ್ಮ ಆರ್ಥಿಕತೆಯ ಅಭಿವೃದ್ಧಿಗೆ ಅಡ್ಡಿ ಬಂದಿಲ್ಲ. ನಮ್ಮ ಧಾರ್ಮಿಕತೆಗೆ ಧಕ್ಕೆಯುಂಟುಮಾಡಿಲ್ಲ. ಬಹುತ್ವ ಎನ್ನುವುದು 'ಎಲ್ಲರನ್ನು ಒಳಗೊಳ್ಳುವ' ಒಂದು ಸಂಸ್ಕೃತಿಯಾಗಿದೆ. ಬಹುತ್ವ ಎನ್ನುವುದು ನಮ್ಮ ಸಮಾಜದ ಒಂದು ಲಕ್ಷಣ ಮಾತ್ರವಲ್ಲ, ಇದು ನಮ್ಮ ಪರಂಪರೆ. ಇದಕ್ಕೆ ಸಾವಿರಾರು ವರ್ಷಗಳ ಇತಿಹಾಸ ಇದೆ. ಅದೊಂದು ಸುಂದರ ಬದುಕಿನ ವಿನ್ಯಾಸ. ಶಾತವಾಹನ ಶತಕದ ಪೂರ್ವದಲ್ಲಿದ್ದ ಅಶೋಕನ ಆಡಳಿತದಲ್ಲಿ ಬೌದ್ಧಧರ್ಮವಿತ್ತು, ಜೈನಧರ್ಮವಿತ್ತು, ವೈದಿಕವೂ ಇತ್ತು, ಶೈವವೂ ಇದ್ದಿರಬೇಕು, ಅನೇಕ ಬುಡಕಟ್ಟುಗಳಿದ್ದವು. ಅನೇಕ ಭಾಷೆಗಳು ಅಲ್ಲಿದ್ದವು. ಅಶೋಕ ಇವೆಲ್ಲವುಗಳ ನಡುವೆ ತಾರತಮ್ಯ ಮಾಡಲಿಲ್ಲ. ಇವೆಲ್ಲವೂ ಸೌಹಾರ್ದತೆಯಿಂದ ಬದುಕುವುದು ಸಾಧ್ಯವಾಗಿತ್ತು. ಇದು ಬಹುತ್ವ. ಭಾರತದಲ್ಲಿ ಬಹುತ್ವ ಎನ್ನುವುದಕ್ಕೆ ಪ್ರಾಚೀನ ಚರಿತ್ರೆಯಿದೆ. ೧೯೫೦ರ ನಂತರ ಹುಟ್ಟಿಕೊಂಡ ತತ್ವ ಇದಲ್ಲ ಅಥವಾ ಬಲಪಂಥೀಯರು ವಾದ ಮಾಡುತ್ತಿರುವಂತೆ ಇದು ಪಶ್ಚಿಮದಿಂದ ಆಮದಾದ ಸಂಗತಿಯೂ ಅಲ್ಲ.

**ಭಾಗ ೧**

**ಸಂವಿಧಾನ ಅಥವಾ ಮನುಸ್ಮೃತಿ**

ನಮ್ಮ ಸಂವಿಧಾನಕ್ಕೆ ಅಪಾಯ ಎಲ್ಲಿದೆ? ಏಕೆ ಅದು ಕ್ರೈಸಿಸ್‌ನಲ್ಲಿದೆ ಎಂದು ಹೇಳುತ್ತಿದ್ದೇವೆ? ಈ ಅಪಾಯ ಎಲ್ಲಿದೆ ಎಂದರೆ ಅದನ್ನು ಬದಲಾಯಿಸುವ ಮತ್ತು ಅದರ ಬದಲಿಗೆ ಮನುಸ್ಮೃತಿ ಪ್ರಣೀತ ಸಂವಿಧಾನವನ್ನು ಹೇರಲು ನಡೆಯುತ್ತಿರುವ ಪ್ರಯತ್ನಗಳಲ್ಲಿದೆ. ಡಾ|| ಅಂಬೇಡ್ಕರ್ ಪ್ರಣೀತ ಭಾರತ ಸಂವಿಧಾನವನ್ನು 'ಶುದ್ಧೀಕರಣ' ಮಾಡುವ ಬಗ್ಗೆ ಪ್ಯೂರಿಫಿಕೇಶನ್ ಬಗ್ಗೆ ಮನುವಾದಿಗಳು ಮಾತನಾಡುತ್ತಿದ್ದಾರೆ. ಶುದ್ಧತೆ–ಅಶುದ್ಧತೆ, ಮಡಿ–ಮೈಲಿಗೆ – ಇವುಗಳ ವ್ಯಸನದಲ್ಲಿ ಪುರೋಹಿತಶಾಹಿ ಬದುಕುತ್ತಿದೆ. ಈ ಬಗ್ಗೆ ಅವರು ಕ್ರಿಯಾಶೀಲರಾಗಿದ್ದಾರೆ. ಉದಾಹರಣೆಗೆ ನಮ್ಮ ಸಂವಿಧಾನದಲ್ಲಿನ ಭಾಗ ೩ರಲ್ಲಿ ನೀಡಲಾಗಿರುವ ಮೂಲಭೂತ ಹಕ್ಕುಗಳ ಬಗ್ಗೆ ಪ್ರಸಿದ್ಧ ನ್ಯಾಯವಾದಿ ಜಸ್ಟೀಸ್ ಎಂ. ರಾಮ ಜೋಯಿಸ್ ಹೇಳುವ ಮಾತುಗಳಿವು :

ನಮ್ಮ ಸಂವಿಧಾನದ ಭಾಗ ೩ರಲ್ಲಿ ಮೂಲಭೂತ ಹಕ್ಕುಗಳಿಗೆ ಪ್ರತಿಯಾಗಿ ಮೂಲಭೂತ ಕರ್ತವ್ಯಗಳನ್ನು ನಿಯಮಿಸಬೇಕಾಗಿತ್ತು ಎಂಬುದು ಅವರ ಅಭಿಮತ. ಇದು ದೇಶವು ಇಂದು ಎದುರಿಸುತ್ತಿರುವ ಅನೇಕ ಸಮಸ್ಯೆಗಳಿಗೆ ಮೂಲ ಕಾರಣವಾಗಿದೆ ಎನ್ನುತ್ತಾರೆ ಅವರು. ನಮ್ಮ ಸಂವಿಧಾನದಲ್ಲಿ ಕರ್ತವ್ಯದ ಭಾವನೆಗೆ ಬದಲಾಗಿ ಹಕ್ಕುಗಳ ಪ್ರಜ್ಞೆಯನ್ನು ತುಂಬಲಾಗಿದೆ ಎಂಬುದು ಅವರ ಅಭಿಮತ–ನಂಬಿಕೆ (ಜಸ್ಟೀಸ್ ಎಂ. ರಾಮ ಜೋಯಿಸ್, ಹತ್ತನೆಯ ದುರ್ಗಾ ದಾಸ್ ಬಸು ಸ್ಮಾರಕ ಉಪನ್ಯಾಸ, ೧೧ನೆಯ ಫೆಬ್ರವರಿ ೨೦೧೭). ಜನರು ತಮ್ಮ ಕರ್ತವ್ಯಗಳನ್ನು ತಲೆತಗ್ಗಿಸಿಕೊಂಡು ನಿರ್ವಹಿಸಬೇಕೇ ವಿನಾ ಹಕ್ಕುಗಳನ್ನು, ಅಧಿಕಾರಗಳನ್ನು ಒತ್ತಾಯಿಸಬಾರದು, ಕೇಳಬಾರದು. ಇದು ಮನುಸ್ಮೃತಿ ಪ್ರಣೀತ ಸಂವಿಧಾನ.

ನಮ್ಮ ಸಂವಿಧಾನದ ಆತ್ಮ ಎಂದರೆ ಅದರ ಭಾಗ ೩. ನಮ್ಮ ಸಂವಿಧಾನದ ಹೃದಯ ಎಂದರೆ ಭಾಗ ೪. ಭಾಗ ೩ ಮೂಲಭೂತ ಹಕ್ಕುಗಳ ಪರಿಚ್ಛೇದಗಳನ್ನು ಒಳಗೊಂಡಿದ್ದರೆ ಭಾಗ ೪ ರಾಜ್ಯ ನಿರ್ದೇಶಿತ ತತ್ವಗಳನ್ನು ಒಳಗೊಂಡಿದೆ. ಅವುಗಳ ವಿರುದ್ಧ ಟೀಕೆ ಮಾಡಲಾಗುತ್ತಿದೆ. ಇಂದು ಜಾಗತಿಕವಾಗಿ ಚಾಲ್ತಿಯಲ್ಲಿರುವುದು 'ಹಕ್ಕಿನ ಪರಿಭಾಷೆ'. ಅಭಿವೃದ್ಧಿ, ಶಿಕ್ಷಣ, ಆರೋಗ್ಯ, ಆಹಾರ – ಇವೆಲ್ಲವೂ ಹಕ್ಕುಗಳೇ ವಿನಾ ಹಂಗಿನ ಸಂಗತಿಗಳಲ್ಲ. ಆದರೆ ಮನುವಾದಿ ಸಂವಿಧಾನದಲ್ಲಿ ಕರ್ತವ್ಯ – ಸೇವೆ ಪ್ರಧಾನವಾಗಿ ಇವೆಲ್ಲ ಹಂಗಿನ ಸಂಗತಿಗಳಾಗಿಬಿಡುತ್ತವೆ. ನಮ್ಮ ಸಂವಿಧಾನದಲ್ಲಿ ದಾನ–ದತ್ತಿ–ಉಂಬಳಿ–ದಕ್ಷಿಣೆಗಳಿಗೆ ಅವಕಾಶವಿಲ್ಲ. ಪ್ರತಿಯೊಬ್ಬ ವ್ಯಕ್ತಿಯೂ ಭಾರತದ ನಾಗರಿಕನಾಗಿ ಹಕ್ಕುಗಳಿಗೆ ಅಧಿಕಾರಸ್ಥ. ನಾವು ಮನುಷ್ಯರು ಎನ್ನುವ ಕಾರಣಕ್ಕೆ ನಮಗೆ ಹಕ್ಕುಗಳಿವೆ. ಹಕ್ಕು ಎನ್ನುವುದು ಒಂದು ನೈತಿಕ ಸಂಗತಿ. ಇಂತಹ ಹಕ್ಕುಗಳಿಂದ ವಂಚಿಸುವ ಪ್ರಣಾಳಿಕೆ ಚಾತುರ್ವರ್ಣ್ಯ ವ್ಯವಸ್ಥೆ. ಮನುಷ್ಯನನ್ನು ಮನುಷ್ಯನಂತೆ ಕಾಣುವ ಕ್ರಮವೇ ವರ್ಣಾಶ್ರಮ ಧರ್ಮದಲ್ಲಿಲ್ಲ. ಅಸ್ಪೃಶ್ಯತೆ

ಅಂತಹ ಹೀನ ಆಚರಣೆಯನ್ನು ಚಾತುರ್ವರ್ಣ್ಯ ಪೋಷಿಸಿಕೊಂಡು ಬಂದಿದೆ. 'ಕರ್ತವ್ಯ' ಎನ್ನುವುದಕ್ಕೆ ಸೇವೆ ಎನ್ನುವ ಅರ್ಥವೂ ಇದೆ. ಮನುಸ್ಮೃತಿ ಸಂವಿಧಾನದಲ್ಲಿ ಶೂದ್ರರು ಮತ್ತು ಅತಿಶೂದ್ರರು ಮೊದಲ ಮೂರು ವರ್ಣಗಳ 'ಸೇವೆ' ಮಾಡಿಕೊಂಡಿರಬೇಕು.

ಅಂಬೇಡ್ಕರ್ ಸಂವಿಧಾನವು ಸಮಾನತೆ ಮತ್ತು ಹಕ್ಕುಗಳ ಬಗ್ಗೆ ಮಾತನಾಡಿದರೆ ಮನುವಾದಿ ಸಂವಿಧಾನ ಕರ್ತವ್ಯ ಮತ್ತು ಸೇವೆಯ ಬಗ್ಗೆ ಮಾತನಾಡುತ್ತದೆ. ಮನುವಾದಿ ಸಂವಿಧಾನ ಅಸ್ಪೃಶ್ಯತೆಯ ಬಗ್ಗೆ ಮಾತನಾಡುತ್ತದೆ. ಅಂಬೇಡ್ಕರ್ ಪ್ರಣೀತ ಸಂವಿಧಾನ ಎಲ್ಲರನ್ನು ಒಳಗೊಳ್ಳುವ ಮೌಲ್ಯದ ಬಗ್ಗೆ ಮಾತನಾಡುತ್ತದೆ. ಮನುವಾದಿ ಸಂವಿಧಾನವು ಎಕ್ಸ್‌ಕ್ಲೂಸಿವ್ ಸಂಹಿತೆಯಾಗಿದ್ದರೆ ಡಾ॥ ಬಿ. ಆರ್. ಅಂಬೇಡ್ಕರ್ ಸಂವಿಧಾನವು ಇನ್‌ಕ್ಲೂಸಿವ್ ಪ್ರಣಾಳಿಕೆಯಾಗಿದೆ. ಇಂದಿಗೂ ಅಸ್ಪೃಶ್ಯತೆಯನ್ನು ಮನುವಾದಿಗಳು ಪೋಷಿಸಿಕೊಂಡು–ಪಾಲಿಸಿಕೊಂಡು ಬರುತ್ತಿದ್ದಾರೆ. ಶಬರಿಮಲೈನಲ್ಲಿ ನಡೆದಿರುವುದು ಅಸ್ಪೃಶ್ಯತೆಯ ಸಮರ್ಥನೆ ಮತ್ತು ಅದರ ಪೋಷಣೆ. ಅದನ್ನು ಊರ್ಜಿತಗೊಳಿಸಿಕೊಂಡು ಬರುವ ಪ್ರಯತ್ನ ಅಲ್ಲಿ ನಡೆದಿದೆ. ಸರ್ವೋಚ್ಚ ನ್ಯಾಯಾಲಯದ ಸಂವಿಧಾನ ಪೀಠ ಸೆಪ್ಟೆಂಬರ್ ೨೮, ೨೦೧೮ರಲ್ಲಿ ನೀಡಿದ ತೀರ್ಪಿನಲ್ಲಿ ಮಹಿಳೆಯರಿಗೆ ದೇವಾಲಯ ಪ್ರವೇಶವನ್ನು ನಿರಾಕರಿಸುವುದು ಅಸ್ಪೃಶ್ಯತೆಯ ಆಚರಣೆಗೆ ಸಮ ಮತ್ತು ಸಂವಿಧಾನದ ಪರಿಚ್ಛೇದ ೧೭ರ ಉಲ್ಲಂಘನೆ ಎಂದು ಸ್ಪಷ್ಟವಾಗಿ ಹೇಳಿದೆ. ನಮ್ಮ ಸಂವಿಧಾನವನ್ನು ರಕ್ಷಿಸಬೇಕು ಎಂದಾದರೆ, ಸಮಾನತೆ ಮೌಲ್ಯವನ್ನು ಕಾಪಾಡಿಕೊಳ್ಳಬೇಕೆಂದರೆ, ಜಾತಿ ಸಂಬಂಧಿ ತಾರತಮ್ಯಗಳನ್ನು ನಿರ್ನಾಮ ಮಾಡಬೇಕೆಂದರೆ ಈ ಮನುವಾದಿ ಸಂವಿಧಾನವನ್ನು ನಾಶ ಮಾಡಬೇಕು. ಏಕೆಂದರೆ ಇದು ಸಮಾನತೆ ವಿರೋಧಿ ಸಂಹಿತೆಯಾಗಿದೆ. ಇದು ಸಮಾಜವನ್ನು ಒಡೆಯುವ ಸಂಹಿತೆಯಾಗಿದೆ.

**ಒಕ್ಕೂಟ ವಿರೋಧಿ ಮನುವಾದಿ ಪ್ರಣಾಳಿಕೆ**

ಇದಿಷ್ಟೇ ಅಲ್ಲ. ನಮ್ಮ ಸಂವಿಧಾನದ ಮತ್ತೊಂದು ನಿರ್ಣಾಯಕ ಲಕ್ಷಣವೆಂದರೆ ಅದು ನಮಗೆ ನೀಡಿರುವ 'ಒಕ್ಕೂಟ ರಾಜಕೀಯ ವ್ಯವಸ್ಥೆ'. ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಒಟ್ಟಿಗೆ ಸೇರಿ ಭಾರತೀಯ ರಾಜಕೀಯ ವ್ಯವಸ್ಥೆಯನ್ನು ಸಮಾನ ನೆಲೆಯಲ್ಲಿ ನಿರ್ವಹಿಸುವ ತತ್ವ ಇದಾಗಿದೆ. ಹಾಗೆ ನೋಡಿದರೆ ನಮ್ಮ ದೇಶದಲ್ಲಿ (ವಿಶೇಷವಾಗಿ ಕರ್ನಾಟಕದಲ್ಲಿ) ಹೇಳುವುದಾದರೆ ಒಕ್ಕೂಟ ಭಾವನೆಗೆ ಸಾವಿರಾರು ವರ್ಷಗಳ ಚರಿತ್ರೆಯಿದೆ. ಭಾರತೀಯ ಚರಿತ್ರೆಯೆಂದರೆ ಒಕ್ಕೂಟ ಚರಿತ್ರೆಯೇ ಆಗಿದೆ. ಕವಿರಾಜಮಾರ್ಗಕಾರ ೧೦ನೇ ಶತಮಾನದಲ್ಲಿ ರಚಿಸಿದ ಒಂದು ಪದ್ಯದಲ್ಲಿ ಇದು ಸ್ಪಷ್ಟವಾಗಿ ಒಡಮೂಡಿದೆ.

*ಕಾವೇರಿಯಿಂದ ಮಾ ಗೋದಾವರಿವರಮಿರ್ಪ*
*ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ*
*ವಸುಧಾ ವಲಯ ವಿಲೀನ ವಿಷದ ವಿಷಯ*
*ವಿಶೇಷಂ*

– ಇಲ್ಲಿ ಕವಿರಾಜಮಾರ್ಗಕಾರ ಏನನ್ನು ಹೇಳುತ್ತಿದ್ದಾನೆ? ಭಾವಿಸಿದ ಕನ್ನಡ ನಾಡು ವಸುಧೆಯಲ್ಲಿ (ಜಗತ್ತಿನಲ್ಲಿ) ವಿಲೀನವಾಗಿದ್ದರೂ ಅದು ತನ್ನ ವಿಶಿಷ್ಟತೆಯನ್ನು ಊರ್ಜಿತಗೊಳಿಸಿಕೊಂಡು ಬರುತ್ತಿದೆ. 'ವಿಲೀನ' ಎನ್ನುವುದು ಕೇಂದ್ರೀಕರಣವನ್ನು ಸೂಚಿಸಿದರೆ 'ವಿಶೇಷಂ' ಎನ್ನುವುದು ಪ್ರತ್ಯೇಕತೆಯನ್ನು – ಅನನ್ಯತೆಯನ್ನು ಒಕ್ಕೂಟವನ್ನು ಸೂಚಿಸುತ್ತದೆ. ಕವಿರಾಜಮಾರ್ಗಕಾರ ಮಾತ್ರವಲ್ಲ, ನಮ್ಮ ದೇಶದಲ್ಲಿ ಯಾವತ್ತೂ – ಅದು ಅಶೋಕನ ಕಾಲವಿರಬಹುದು, ಚಂದ್ರಗುಪ್ತ ಮೌರ್ಯನ ಸಾಮ್ರಾಜ್ಯವಿರಬಹುದು, ಅಕ್ಬರ್ ಇರಬಹುದು, ಶಿವಾಜಿ ಇರಬಹುದು – ಎಲ್ಲ ಕಾಲದಲ್ಲಿಯೂ ನಮ್ಮಲ್ಲಿದ್ದುದು ಒಕ್ಕೂಟ ವ್ಯವಸ್ಥೆಯೇ. ಚಕ್ರವರ್ತಿ ಅಂತ ಒಬ್ಬರಿದ್ದರೆ ಅವನ ಚಕ್ರಾಧಿಪತ್ಯದಲ್ಲಿ ಹತ್ತಾರು ಸಾಮಂತರಿರುತಿದ್ದರು. ಇದು ಒಕ್ಕೂಟ ವ್ಯವಸ್ಥೆ. ಕೇವಲ ಒಂದಲ್ಲ. ಅನೇಕ ಒಕ್ಕೂಟಗಳು ಒಟ್ಟೊಟ್ಟಿಗೆ ಕೂಡ ಇದ್ದವು. ಉದಾಹರಣೆಗೆ ಉತ್ತರದ ಕನೂಜ್‌ನಲ್ಲಿ ಹರ್ಷವರ್ಧನನ (ಸಾ. ಶ. ೬೦೬–೬೪೭) ಒಕ್ಕೂಟವಿದ್ದರೆ ದಕ್ಷಿಣದಲ್ಲಿ ಇಮ್ಮಡಿ ಪುಲಿಕೇಶಿಯ (ಸಾ. ಶ. ೬೧೦–೬೪೨) ಒಕ್ಕೂಟವಿತ್ತು. ಅವರಿಬ್ಬರೂ ಸಮಕಾಲೀನರು. ಒಕ್ಕೂಟ ವ್ಯವಸ್ಥೆಯು ನಮ್ಮ ಪರಂಪರೆಯ ಕೊಡುಗೆ. ಭಾರತವು ಇಂದು ಒಂದಾಗಿದ್ದರೆ ಅದರ ಮೂಲದಲ್ಲಿ ಒಕ್ಕೂಟ ಪ್ರಣಾಳಿಕೆಯ ಪಾತ್ರವಿದೆ.

ಇಂತಹ ನಮ್ಮ ಪರಂಪರೆಯಿಂದ ಹರಿದುಕೊಂಡು ಬರುತ್ತಿರುವ ಒಕ್ಕೂಟ ಮೀಮಾಂಸೆಗೆ ವಿರುದ್ಧವಾಗಿ ಮನುವಾದವು ಏಕಾತ್ಮಕ–ಏಕಘನ–ಯೂನಿಟರಿ ವ್ಯವಸ್ಥೆಯನ್ನು ಪ್ರತಿಪಾದಿಸುತ್ತಿದೆ. ಇಂದು ಇಂತಹ ಕೇಂದ್ರದ ಅಧಿಕಾರವನ್ನು ಬಲಪಡಿಸುವ, ರಾಜ್ಯಗಳ ಅಧಿಕಾರಗಳನ್ನು ಮೊಟಕುಗೊಳಿಸುವ ಪ್ರಯತ್ನ ನಡೆಯುತ್ತಿದೆ.

(೧) ಕೇರಳದಲ್ಲಿ ಕಳೆದ ವರ್ಷ ನಡೆದ ಮಹಾಪ್ರವಾಹ ಸಂದರ್ಭದಲ್ಲಿ ಹಣಕಾಸು ನೆರವಿಗೆ ಸಂಬಂಧಿಸಿದಂತೆ ಕೇಂದ್ರ ನಡೆದುಕೊಂಡ ರೀತಿಯಲ್ಲಿ ಇದನ್ನು ಕಾಣಬಹುದು. (೨) ರಾಜ್ಯಗಳ ಅನನ್ಯತೆಯನ್ನು ಸೂಚಿಸುತ್ತಿದ್ದ ಬ್ಯಾಂಕುಗಳನ್ನು (ಮೈಸೂರು ಬ್ಯಾಂಕು, ಸರ್ ಎಂ. ವಿಶ್ವೇಶ್ವರಯ್ಯನವರು ಸ್ಥಾಪಿಸಿದ್ದು) ವಿಲೀನಗೊಳಿಸಿ ದೊಡ್ಡ ಬ್ಯಾಂಕುಗಳನ್ನು (ಅಖಿಲ ಭಾರತೀಯ) ಮಾಡುತ್ತಿರುವ ಕ್ರಮದಲ್ಲಿ ಇದನ್ನು ಕಾಣಬಹುದು. (೩) ನೀಟ್ ಎಂಬ ವ್ಯವಸ್ಥೆಯ ಮೂಲಕ ಕೇಂದ್ರದ ಮಟ್ಟದಲ್ಲಿ ವೃತ್ತಿ ಶಿಕ್ಷಣ ಪ್ರವೇಶಕ್ಕೆ ಮಕ್ಕಳನ್ನು ಆಯ್ಕೆ ಮಾಡುವ ಪರೀಕ್ಷೆಯ ಕ್ರಮದಲ್ಲಿ ಇದನ್ನು ಕಾಣಬಹುದು. (೪) ಹಿಂದಿ ಭಾಷೆಯನ್ನು ದಕ್ಷಿಣದ ರಾಜ್ಯಗಳ ಮೇಲೆ ಹೇರುತ್ತಿರುವುದರಲ್ಲಿ



ಕಾಣಬಹುದು. ಹಿಂದಿಯ ಹೇರಿಕೆಯು ನಮ್ಮ ಸಂವಿಧಾನದ ನೇರ ಮತ್ತು ಸ್ಪಷ್ಟ ಉಲ್ಲಂಘನೆ. (೫) ಎಲ್ಲಕ್ಕಿಂತ ಮುಖ್ಯವಾಗಿ ಹಿಂದುಳಿದ ವರ್ಗಗಳ ಆಯೋಗವನ್ನು ಕೇಂದ್ರಮಟ್ಟದಲ್ಲಿ ರಚಿಸಿ ರಾಜ್ಯಗಳು ಯಾವುದೇ ಸಾಮಾಜಿಕ ನ್ಯಾಯ–ನೀತಿಗಳಿಗೆ ಸಂಬಂಧಿಸಿದಂತೆ ನಿಯಮಗಳನ್ನು ರೂಪಿಸಬೇಕಾದರೆ ಕೇಂದ್ರಮಟ್ಟದ ಹಿಂದುಳಿದ ವರ್ಗಗಳ ಆಯೋಗದ ಸಲಹೆ–ನಿರ್ದೇಶನ ಪಡೆಯಬೇಕು ಎಂಬ ನಿಯಮ ಮಾಡಿರುವುದು ರಾಜ್ಯಗಳ ಸ್ವಾಯತ್ತತೆಗೆ ತೀವ್ರ ಪೆಟ್ಟು ಕೊಟ್ಟಂತಾಗಿದೆ. (೬) ತೆರಿಗೆಗಳನ್ನು ವಿಧಿಸುವ, ತೆರಿಗೆ ದರಗಳನ್ನು ಬದಲಾಯಿಸುವ ರಾಜ್ಯಗಳ ಅಧಿಕಾರವನ್ನು ಜಿಎಸ್‌ಟಿ ಮೂಲಕ ಕಸಿದುಕೊಳ್ಳ ಲಾಗಿದೆ. (೭) ರಾಷ್ಟ್ರಪತಿ ಆಡಳಿತದ ಮೂಲಕ ರಾಜ್ಯಗಳ ಸ್ವಾಯತ್ತತೆಯನ್ನು ನಾಶ ಮಾಡಲಾಗುತ್ತಿದೆ.

**ಪ್ರಜ್ಞಾಪೂರ್ವಕ ಪ್ರಯತ್ನ**

ಅತ್ಯಂತ ಸೂಕ್ಷ್ಮ ರೀತಿಯಲ್ಲಿ ಆದರೆ ಪ್ರಜ್ಞಾಪೂರ್ವಕವಾಗಿ ಮತ್ತು ವ್ಯವಸ್ಥಿತವಾಗಿ ನಮ್ಮ ಸಂವಿಧಾನವನ್ನು ಶಿಥಿಲಗೊಳಿಸುವ, ನಾಶ ಮಾಡುವ ಪ್ರಯತ್ನ ಬಹಳ ಹಿಂದಿನಿಂದಲೂ ನಡೆದುಕೊಂಡು ಬಂದಿದೆ. ಇಂದು ಅದರ ಗತಿ ತೀವ್ರವಾಗಿದೆ. ಇದನ್ನು ನಾವೆಲ್ಲರೂ ಅರಿತುಕೊಳ್ಳುವ ಅಗತ್ಯವಿದೆ. ಇದರ ಜೊತೆಗೆ ಅದರ ವಿರುದ್ಧದ ಸಿದ್ಧಾಂತಗಳ ಬಗ್ಗೆ ಸೂಕ್ಷ್ಮವಾಗಿ ಜಾಗೃತರಾಗಿರಬೇಕಾದ ಅಗತ್ಯವಿದೆ. ನಮ್ಮ ಸಂವಿಧಾನದ ಬಗ್ಗೆ ಅರಿವಿಲ್ಲದ ಕಾರಣವಾಗಿ ಅಥವಾ ತಪ್ಪು ತಿಳುವಳಿಕೆ ಕಾರಣವಾಗಿ ಸಮಾಜದ ಹಿಂದುಳಿದ ವರ್ಗಗಳಲ್ಲಿ, ದಲಿತರಲ್ಲಿ, ಮಹಿಳೆಯರಲ್ಲಿ, ಬುಡಕಟ್ಟು ಸಮುದಾಯಗಳಲ್ಲಿ ಕೆಲವರು ಮನುವಾದಿಗಳ ಪ್ರಚಾರಕ್ಕೆ ಮರುಳಾಗುತ್ತಿದ್ದಾರೆ.

ಅಮರ್ತ್ಯ ಸೇನ್ ಒಂದು ಕಡೆ ಹೇಳುತ್ತಾರೆ: ಯಾರು ಶೋಷಣೆಗೆ ಒಳಗಾಗಿರುತ್ತಾರೋ, ತಾರತಮ್ಯಕ್ಕೆ ತುತ್ತಾಗಿದ್ದಾರೋ ಅವರನ್ನು ಮರುಳು ಮಾಡಿ ಶೋಷಕರು, ಮನುವಾದಿಗಳು ತಮ್ಮ ಪರ ಮಾಡಿಕೊಂಡು ಬಿಟ್ಟರೆ, ತಮ್ಮ ವಕ್ತಾರರನ್ನಾಗಿ ಮಾಡಿಕೊಂಡರೆ ಅಲ್ಲಿ ಅದರ ವಿರುದ್ಧ ಹೋರಾಡುವುದು ಬಹಳ ಕಷ್ಟಕರ. ಇಂದು ಇಂತಹ ಸನ್ನಿವೇಶದಲ್ಲಿ ನಾವಿದ್ದೇವೆ.

ಆದ್ದರಿಂದ ನಮ್ಮ ಎದುರಿಗಿರುವ ಆಯ್ಕೆ ಇದು : ಡಾ॥ ಅಂಬೇಡ್ಕರ್ ಪ್ರಣೀತ ಸಂವಿಧಾನವೋ ಅಥವಾ ಅಸಮಾನತೆಗಳ, ತಾರತಮ್ಯಗಳ, ಸಾಮಾಜಿಕ ನ್ಯಾಯ ವಿರೋಧಿ ಪ್ರಣೀತ ಮನುಸ್ಮೃತಿಯೋ ಎಂಬುದಾಗಿದೆ. ಸಮಾನತೆಗಳು ಎನ್ನುವ ಬಹುವಚನ ನುಡಿಯನ್ನು ಉದ್ದೇಶಪೂರ್ವಕವಾಗಿ ಬಳಸಿದ್ದೇನೆ. ಏಕೆಂದರೆ ನಮ್ಮ ಸಮಾಜದಲ್ಲಿರುವುದು ಬಹುಳಾಕಾರಿ ಅಸಮಾನತೆ. ಇಲ್ಲಿ ಆರ್ಥಿಕ ಅಸಮಾನತೆಯಿದೆ (ಬಡವ–ಶ್ರೀಮಂತ). ಜಾತಿ ಅಸಮಾನತೆಯಿದೆ (ಶಿಷ್ಟ–ಪರಿಶಿಷ್ಟ), ಲಿಂಗ ಅಸಮಾನತೆಯಿದೆ (ಹೆಣ್ಣು–ಗಂಡು), ಪ್ರಾದೇಶಿಕ ಅಸಮಾನತೆಯಿದೆ (ಹಿಂದುಳಿದ–ಮುಂದುವರಿದ ಪ್ರದೇಶಗಳು). ಶುದ್ಧ–ಅಶುದ್ಧತೆಗಳ ಅಸಮಾನತೆ ಇದೆ (ಗಂಗೆಯ ನೀರು – ನಮ್ಮ ಊರಿನ ಹಳ್ಳದ ನೀರು). ಗಂಗೆಯ ನೀರು ಪವಿತ್ರವೆಂದಾದರೆ ನಮ್ಮ ಊರಿನ ಹಳ್ಳದ ನೀರೂ ಪವಿತ್ರವೇ!

### ಭಾಗ ೨

**ನಮ್ಮ ಸಂಸದೀಯ ಪ್ರಜಾಪ್ರಭುತ್ವ**

ಅಮರ್ತ್ಯ ಸೇನ್ ಪ್ರಕಾರ ಪ್ರಜಾಪ್ರಭುತ್ವವೆಂದರೆ ಚರ್ಚೆ–ಸಂವಾದ–ಅನುಸಂಧಾನದ ಮೂಲಕ ಸ್ಥಾಪಿಸಿದ ಸರ್ಕಾರ. ಜನರಿಂದ, ಜನರಿಗಾಗಿ, ಜನರಿಗೋಸ್ಕರ ಎನ್ನುವ ಜನಪ್ರಿಯ ಪ್ರಜಾಪ್ರಭುತ್ವ ವ್ಯಾಖ್ಯೆ ಇದೆ. ಆದರೆ ಸೇನ್ ಪ್ರಕಾರ ಪ್ರಜಾಪ್ರಭುತ್ವ ವೆಂದರೆ ಅದು ಚರ್ಚೆಯನ್ನು ಬಯಸುವ, ಭಿನ್ನಮತವನ್ನು ಮನ್ನಿಸುವ, ಸಂವಾದಗಳಿಗೆ ಅವಕಾಶವಿರುವ ಒಂದು ವ್ಯವಸ್ಥೆ. ಅಭಿಪ್ರಾಯಗಳ ಬಹುತ್ವ ಪ್ರಜಾಪ್ರಭುತ್ವದ ಒಂದು ಆಧಾರ ಸ್ತಂಭ. ಭಿನ್ನ ಭಿನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಸ್ವಾತಂತ್ರ್ಯವಿರಬೇಕು. ಭಿನ್ನಮತವೆಂದರೇನೆ ಅದು ಅಭಿವ್ಯಕ್ತಿ ಸ್ವಾತಂತ್ರ್ಯ. ಈ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆ–ಅಪಾಯ, ನಿರ್ಬಂಧ ಉಂಟಾದರೆ ಅದು ಪ್ರಜಾಪ್ರಭುತ್ವದ ಮೇಲಿನ ನಿರ್ಬಂಧವೇ ಆಗುತ್ತದೆ (ಅಮರ್ತ್ಯ ಸೇನ್ ಅವರ ಒಂದು ಕೃತಿಯ ಹೆಸರು 'Argumentative Indian').

ಭಿನ್ನಮತ ಪ್ರಜಾಪ್ರಭುತ್ವದ ಅಡಿಪಾಯ. ಅಭಿವ್ಯಕ್ತಿ ಸ್ವಾತಂತ್ರ್ಯವು ಮಾನವ ಹಕ್ಕು. ಇದರ ಆಧಾರದ ಮೇಲೆ ಪ್ರಜಾಪ್ರಭುತ್ವವನ್ನು ಕಟ್ಟಲಾಗಿದೆ. ಆಳುವ ವರ್ಗದ ವಿರುದ್ಧ ಮಾತನಾಡುವುದು, ಬರೆಯುವುದು ದೇಶದ್ರೋಹವಾದರೆ, ಸರ್ಕಾರದ ನೀತಿಗಳನ್ನು ಟೀಕಿಸುವುದು ರಾಜದ್ರೋಹವಾದರೆ, ಮಂತ್ರಿಗಳನ್ನು ಟೀಕಿಸುವುದು ರಾಷ್ಟ್ರ ವಿರೋಧಿ ಚಟುವಟಿಕೆಯಾದರೆ ಅಲ್ಲಿ ಪ್ರಜಾಪ್ರಭುತ್ವ ಉಳಿಯುವುದು ಸಾಧ್ಯವಿಲ್ಲ. ಭಿನ್ನಮತದ ಮೇಲೆ ವಿಧಿಸುವ ಯಾವುದೇ ನಿರ್ಬಂಧ ಅಥವಾ ನಿಯಂತ್ರಣ ಅಥವಾ ನಿರ್ದೇಶನ ಪ್ರಜಾಪ್ರಭುತ್ವದ ಮೇಲಿನ ನಿರ್ಬಂಧವಾಗುತ್ತದೆ. ಪ್ರತಿಭಟನೆ, ಭಿನ್ನಮತ, ಜನವಿರೋಧಿ ಶಾಸನಗಳನ್ನು ಟೀಕಿಸುವುದು ಇವೆಲ್ಲ ನಮ್ಮ ಸಂವಿಧಾನ ನೀಡಿರುವ ಹಕ್ಕುಗಳು. ಇವೆಲ್ಲ ಪ್ರಜಾಪ್ರಭುತ್ವದ ಕಾವಲುಗಾರರಂತೆ ಕೆಲಸ ಮಾಡುತ್ತವೆ.

ಭಿನ್ನಮತವನ್ನು ಮನ್ನಿಸುವುದು, ಸಹಿಸಿಕೊಳ್ಳುವುದು, ಗೌರವಿಸುವುದು ಪ್ರಜಾಪ್ರಭುತ್ವದ ಲಕ್ಷಣ. ಸರ್ಕಾರ ವನ್ನು ಟೀಕೆ ಮಾಡುವುದು, ಪ್ರಧಾನಮಂತ್ರಿಗಳ ಮಾತನ್ನು ವಿಮರ್ಶಿಸುವುದು, ಸರ್ಕಾರದ ನೀತಿಗಳ ಮೌಲ್ಯಮಾಪನ ಮಾಡುವುದು ಇವೆಲ್ಲ ಪ್ರಜಾಪ್ರಭುತ್ವ ವನ್ನು ಬಲಪಡಿಸುವ ಸಂಗತಿಗಳು. ಆದರೆ ಇಂದು ಸರ್ಕಾರವನ್ನು ಟೀಕೆ ಮಾಡುವುದನ್ನು 'ದೇಶದ್ರೋಹ' ಎಂದು ಪರಿಗಣಿಸಲಾಗುತ್ತಿದೆ. ನಾಗರಿಕರು ಏನನ್ನು ಮಾತನಾಡಬೇಕು, ಏನನ್ನು ಓದಬೇಕು, ಏನನ್ನು ಬರೆಯಬೇಕು, ಏನನ್ನು ಉಣ್ಣಬೇಕು, ಏನನ್ನು ತೊಡ ಬೇಕೆಂಬುದನ್ನು ಸರ್ಕಾರವು ನಿರ್ಧರಿಸುವ ಕೆಲಸ ಮಾಡುತ್ತಿದೆ. ಇದನ್ನು ಪ್ರಜಾಪ್ರಭುತ್ವ ಎನ್ನಲು ಸಾಧ್ಯವಿಲ್ಲ.

ಸ್ವತಂತ್ರ ಚಿಂತನೆಯನ್ನು ಹತ್ತಿಕ್ಕುವ ಸರ್ವಾಧಿಕಾರ ಧೋರಣೆ ಬೆಳೆಯುತ್ತಿದೆ. ವಿಶ್ವವಿದ್ಯಾಲಯಗಳಲ್ಲಿನ ಸ್ವತಂತ್ರ ಚಿಂತನೆಯನ್ನು ತೋಳುಬಲ ಪ್ರಯೋಗಿಸಿ ಹತ್ತಿಕ್ಕಲಾಗುತ್ತಿದೆ. ವಿದ್ವಾಂಸರ ವಿಚಾರ ಸ್ವಾತಂತ್ರ್ಯವನ್ನು ತುಳಿಯಲಾಗುತ್ತಿದೆ. ಪಿಎಚ್.ಡಿ. ವಿದ್ಯಾರ್ಥಿಗಳು ಯಾವ ವಿಷಯದ ಮೇಲೆ ಸಂಶೋಧನೆ ಮಾಡಬೇಕು ಎಂಬುದನ್ನು ಸರ್ಕಾರವೇ ನಿರ್ಧಾರ ಮಾಡುವ ಹಂತಕ್ಕೆ ಪ್ರಜಾಪ್ರಭುತ್ವವನ್ನು ಮೊಟಕುಗೊಳಿಸಲಾಗಿದೆ. ಶಾಲೆಗಳಲ್ಲಿನ ಪಠ್ಯಪುಸ್ತಕಗಳಲ್ಲಿ ಯಾವ ಪಾಠ ಇರಬೇಕು ಯಾವುದು ಇರಬಾರದು ಎಂಬುದನ್ನು ಸರ್ಕಾರವೇ ನಿರ್ಧರಿಸುತ್ತಿದೆ. ಇಲ್ಲಿನ ಮನುವಾದಿಗಳ ಕುತಂತ್ರವನ್ನು ಅರ್ಥ ಮಾಡಿಕೊಳ್ಳಬೇಕು.

ಇತಿಹಾಸದಲ್ಲಿ ಮನುವಾದಿಗಳು ಶೂದ್ರರ ಮೇಲೆ. ಅತಿಶೂದ್ರರ ಮೇಲೆ ನಡೆಸಿದ ಶೋಷಣೆ, ದಬ್ಬಾಳಿಕೆ, ಕೊಲೆ-ಸುಲಿಗೆಗಳಿಗೆ ಸಂಬಂಧಿಸಿದ ಪಾಠಗಳನ್ನು ತೆಗೆದುಹಾಕಲಾಗುತ್ತಿದೆ. ಇದೊಂದು ವ್ಯವಸ್ಥಿತ ಪಿತೂರಿ. ಇದಕ್ಕೆ ಒಂದು ಉದಾಹರಣೆ: ಎನ್‌ಸಿಈಆರ್‌ಟಿ ಸಿದ್ಧಪಡಿಸಿರುವ ೯ನೆಯ ತರಗತಿ ಸಮಾಜ ವಿಜ್ಞಾನ ಪಠ್ಯದಿಂದ ಸುಮಾರು ೧೮-೧೯ನೆಯ ಶತಮಾನ ದಲ್ಲಿ ಆಚರಣೆಯಲ್ಲಿದ್ದ 'ಮೊಲೆ ತೆರಿಗೆ' ಪಾಠವನ್ನು ಕೈಬಿಡಲಾಗಿದೆ. ಕೇರಳದ ಟ್ರಾವಂಕೂರ್ ಸಂಸ್ಥಾನದಲ್ಲಿ ಅವರ್ಣ ಮಹಿಳೆಯರು ತಮ್ಮ ಎದೆಯ ಭಾಗವನ್ನು ಸೀರೆಯಿಂದ ಮುಚ್ಚಿಕೊಳ್ಳಲು ತೆರಿಗೆ ನೀಡಬೇಕಾಗಿತ್ತು. ತೆರಿಗೆ ಕೊಡಲಾರದ ಮಹಿಳೆಯರು ಎದೆಯನ್ನು ಬಿಟ್ಟುಕೊಂಡು ಇರಬೇಕಾಗಿತ್ತು. ಕೆಳವರ್ಗದ ಮಹಿಳೆಯರಿಗೆ ಮಾತ್ರ ಈ ತೆರಿಗೆ ವಿಧಿಸಲಾಗುತ್ತಿತ್ತು. ಇದರ ವಿರುದ್ಧ ಪ್ರತಿಭಟಿಸುವ ಉದ್ದೇಶದಿಂದ ನಂಗೇಲ್ ಎನ್ನುವ ಮಹಿಳೆಯು ತನ್ನ ಒಂದು ಮೊಲೆಯನ್ನು ಕತ್ತರಿಸಿ ತೆರಿಗೆ ನೀಡಿದಳು ಎನ್ನಲಾಗಿದೆ. ಈ ಪಾಠವನ್ನು ಕೈಬಿಡಲಾಗಿದೆ. ಏಕೆಂದರೆ ಇದು ಉನ್ನತವರ್ಗವು ಕೆಳವರ್ಗದ ಮೇಲೆ ನಡೆಸುತ್ತಿದ್ದ ಶೋಷಣೆಯನ್ನು ಅನಾವರಣಗೊಳಿಸುತ್ತದೆ. ನಮ್ಮ ದೇಶದ ಚರಿತ್ರೆ ಒಂದಲ್ಲ. ಅನೇಕ ಚರಿತ್ರೆಗಳ ಒಂದು ಬೃಹತ್ ಕೋಶ. ಆದರೆ ಇಂದು ಇದನ್ನು ಒಂದುತನಕ್ಕೆ ಬಗ್ಗಿಸುವ ಕಾರ್ಯ ನಡೆದಿದೆ.

ನಮ್ಮ ಸಂವಿಧಾನ ನಮಗೆ ನೀಡಿರುವ ಅಭಿವ್ಯಕ್ತಿ ಸ್ವಾತಂತ್ರ್ಯದಲ್ಲಿ ಭಿನ್ನಮತದ ಹಕ್ಕು ಅಡಗಿದೆ. ಭಿನ್ನಮತವೇ ವಿದ್ರೋಹವಾಗುವುದು ಸಾಧ್ಯವಿಲ್ಲ. ಭಿನ್ನಮತ ವಿದ್ರೋಹ ಎನ್ನುವುದಾದರೆ ಅಲ್ಲಿ ಪ್ರಜಾಪ್ರಭುತ್ವ ಇರಲು ಸಾಧ್ಯವಿಲ್ಲ. ಭಿನ್ನಮತ ಮತ್ತು ಪ್ರಜಾಪ್ರಭುತ್ವಗಳು ಜೊತೆಯಲ್ಲಿರುವ ಸಂಗತಿಗಳು.

ಈ ಬಗೆಯ ಚಿಂತನೆಯಿಂದ, ಆಡಳಿತ ರಂಗದ ದಬ್ಬಾಳಿಕೆಯಿಂದ, ಸರ್ಕಾರದ ಸರ್ವಾಧಿಕಾರಿ ಧೋರಣೆಯಿಂದ, ಮನುವಾದಿಗಳ, ಪುರೋಹಿತ ಶಾಹಿಗಳ ಪಿತೂರಿಯಿಂದ ಗಾಂಧೀಜಿ ಕಂಡ ಕನಸಿನ ಭಾರತ ಎನ್ನುವ ಆಶಯ ನುಚ್ಚುನೂರಾಗಿಬಿಡುತ್ತಿದೆ. ಡಾ॥ ಅಂಬೇಡ್ಕರ್ ಪ್ರಣೀತ ಸಂವಿಧಾನ ನಾಶವಾದರೆ ನಾವು ಅಂದರೆ ಶೂದ್ರರು, ಅತಿಶೂದ್ರರು ಗುಲಾಮ ರಾಗಬೇಕಾಗುತ್ತದೆ. ನಾವೆಲ್ಲ ಜಸ್ಟೀಸ್ ಎಂ. ರಾಮ ಜೋಯಿಸ್ ಹೇಳುವಂತೆ ಕರ್ತವ್ಯವನ್ನು, ಅಂದರೆ ಮೇಲುವರ್ಗದ ಸೇವೆಯನ್ನು ಮಾತ್ರ ಮಾಡಿಕೊಂಡಿರ ಬೇಕಾಗುತ್ತದೆ. ಅಲ್ಲಿ ನಾವು ಹಕ್ಕುಗಳನ್ನು ಕೇಳುವಂತಿಲ್ಲ. ಮಾನವ ಹಕ್ಕುಗಳು ತಿರಸ್ಕೃತವಾಗಿಬಿಡುತ್ತವೆ.

ಸಂವಿಧಾನದ ನಾಶ, ಪ್ರಜಾಪ್ರಭುತ್ವದ ನಾಶವೆಂದರೆ ನಾವು ಭಾವಿಸಿಕೊಂಡಿರುವ - ನಮ್ಮ ಆಶಯದ ಭಾರತ ಸತ್ತು ಹೋಗುತ್ತದೆ. ಇಲ್ಲಿ ಪ್ರಜಾಪ್ರಭುತ್ವ ಜೀವಂತ ವಾಗಿರಲು ಸಾಧ್ಯವಿಲ್ಲ. ದುರದೃಷ್ಟದ ಸಂಗತಿಯೆಂದರೆ ದೇಶಪ್ರೇಮ ಎನ್ನುವುದು, ರಾಷ್ಟ್ರೀಯತೆ ಎನ್ನುವುದು ಇಂದು ವೃತ್ತಿಯಾಗಿಬಿಟ್ಟಿದೆ - ಉದರಂಭರಣವಾಗಿ ಬಿಟ್ಟಿದೆ. ಆಳುವ ವರ್ಗದ ನೀತಿಗಳನ್ನು ಒಪ್ಪದಿದ್ದವರೆಲ್ಲ ದೇಶದ್ರೋಹಿಗಳಾಗುತ್ತಿದ್ದಾರೆ. ಇಂದು ದೇಶಪ್ರೇಮದ ಬಗ್ಗೆ ಪ್ರಮಾಣಪತ್ರ ನೀಡಬೇಕಾದ ಕಾಲ ಬಂದಿದೆ.

## ವೈಫಲ್ಯ

ಮುಂಜಾನೆಯ ತನಕ
ಗುಲಾಬಿ ದಳಗಳ ಮೇಲೆ
ತೋರುತಲಿದ್ದ ಪ್ರೇಮಕೆ
ಸೂರ್ಯನು ಅಡ್ಡಬರಲಾಗಿ
ಪ್ರೇಮ ವೈಫಲ್ಯ ಹೊಂದಿ
ಕಣ್ಮರೆಯಾಯಿತೇ ಇಬ್ಬನಿ?!

**ಶ್ರೀನಿವಾಸ ಕುಂಡಂತಾಯ**
ಬೆಂಗಳೂರು - ೫೬೦ ೦೯೪

### ಸೆಪರೇಶನ್ ಆಫ್ ಪವರ್ ತತ್ವ

ಸಂಸದೀಯ ಪ್ರಜಾಪ್ರಭುತ್ವದ ಸರ್ಕಾರದಲ್ಲಿ ಮೂರು ಅಂಗಗಳಿರುತ್ತವೆ. ಅವು : ಕಾರ್ಯಾಂಗ, ಶಾಸಕಾಂಗ ಮತ್ತು ನ್ಯಾಯಾಂಗ. ಈ ಮೂರರ ನಡುವೆ ಪ್ರಜ್ಞಾಪೂರ್ವಕ ಚಟುವಟಿಕೆಗಳ ವಿಭಜನೆಯಿರುತ್ತದೆ. ಇದನ್ನು 'ಸೆಪರೇಶನ್ ಆಫ್ ಪವರ್' ಎನ್ನುತ್ತಾರೆ. ಇದು ಪ್ರಜಾಪ್ರಭುತ್ವದ ಒಂದು ಸೂಕ್ಷ್ಮ ತತ್ವ. ಸಂಸದೀಯ ಪ್ರಜಾಪ್ರಭುತ್ವದ ಅಳಿವು-ಉಳಿವು ಅನೇಕ ಸಂದರ್ಭಗಳಲ್ಲಿ ಈ ಸೆಪರೇಶನ್ ಆಫ್ ಪವರ್ ತತ್ವದ ಮೇಲೆ ನಿಂತಿರುತ್ತದೆ. ಈ ಸೆಪರೇಶನ್ ಅಳಿಸಿಹೋದರೆ - ಅವು ಒಂದರೊಡನೊಂದು ಕಲೆತು ಬಿಟ್ಟರೆ ಅಲ್ಲಿ ಪ್ರಜಾಪ್ರಭುತ್ವ ಇಕ್ಕಟ್ಟಿಗೆ ಒಳಗಾಗುತ್ತದೆ. ಎರಡನೆಯ ಮಹಾಯುದ್ಧದ ಸಂದರ್ಭದಲ್ಲಿ ಜರ್ಮನಿಯಲ್ಲಿ ಅಡಾಲ್ಫ್ ಹಿಟ್ಲರ್ ಮಾಡಿದ್ದು ಇದನ್ನೇ! ಕಾರ್ಯಾಂಗ, ಶಾಸಕಾಂಗ ಮತ್ತು ನ್ಯಾಯಾಂಗಗಳ ಅಧಿಕಾರಗಳನ್ನೆಲ್ಲ ತನ್ನ ಕೈವಶಮಾಡಿಕೊಂಡ. ಇದನ್ನು ಸರ್ವಾಧಿಕಾರ ಎಂದು ಹೇಳಬಹುದು. ತಾನೇ ಕಾರ್ಯಾಂಗ, ತಾನೇ ಶಾಸಕಾಂಗ, ತಾನೇ ನ್ಯಾಯಾಂಗ ಎಂದು ಹಿಟ್ಲರ್ ಘೋಷಿಸಿಕೊಂಡ. ಇದರಿಂದ ೨ನೆಯ ಮಹಾಯುದ್ಧದಲ್ಲಿ ಎಂತಹ ಮಾರಣಹೋಮ ನಡೆದುಹೋಯಿತು ಎಂಬುದು ನಮಗೆಲ್ಲ ಗೊತ್ತು.

ನಮ್ಮದು ಸಂಸದೀಯ ಪ್ರಜಾಪ್ರಭುತ್ವ. ಈ ವ್ಯವಸ್ಥೆಯಲ್ಲಿ ಕಾರ್ಯಾಂಗದ ಮುಖ್ಯಸ್ಥರು ರಾಷ್ಟ್ರಪತಿ ಮತ್ತು ಶಾಸಕಾಂಗದ ಮುಖ್ಯಸ್ಥರು ಪ್ರಧಾನಮಂತ್ರಿ. ಆದರೆ ರಾಷ್ಟ್ರಪತಿ ಅವರು ನಾಮಮಾತ್ರ ಕಾರ್ಯಾಂಗದ ಮುಖ್ಯಸ್ಥರಾಗಿದ್ದಾರೆ. ನಿಜವಾದ ಕಾರ್ಯಾಂಗದ ಮುಖ್ಯಸ್ಥರು ಪ್ರಧಾನಮಂತ್ರಿ ಮತ್ತು ಸಚಿವ ಸಂಪುಟ. ಶಾಸಕಾಂಗ ಮತ್ತು ಕಾರ್ಯಾಂಗಗಳು ಅಧ್ಯಕ್ಷೀಯ ವ್ಯವಸ್ಥೆಯಲ್ಲಿ ಬೇರೆ ಬೇರೆ ಆಗಿರುತ್ತವೆ. ಅಮೆರಿಕದಲ್ಲಿ ಕಾರ್ಯಾಂಗದ ನೇತಾರ ಅಧ್ಯಕ್ಷರಾಗಿದ್ದರೆ ಶಾಸಕಾಂಗ ಅಲ್ಲಿನ ಸಂಸತ್ತು. ಸಂಸತ್ತು ಶಾಸನಗಳನ್ನು ರೂಪಿಸಿದರೆ ಅಧ್ಯಕ್ಷರು ಅವುಗಳ ಅನುಷ್ಠಾನಗೊಳಿಸಬೇಕು.

ಇಂದು ಈ ರೀತಿಯ 'ಸೆಪರೇಶನ್ ಆಫ್ ಪವರ್' ತತ್ವ ವಿಕೃತಕ್ಕೊಳಗಾಗಿದೆ. 'ಸೆಪರೇಶನ್' ಅನ್ನುವುದನ್ನು ಅಳಿಸಿಹಾಕಲಾಗುತ್ತಿದೆ. ಇದನ್ನು ನಾವು ಸೂಕ್ಷ್ಮವಾಗಿ ಅರ್ಥಮಾಡಿಕೊಳ್ಳಬೇಕಾಗಿದೆ. ನಾವು ಅಂದರೆ ಹಿಂದುಳಿದ ವರ್ಗಗಳು, ಮಹಿಳೆಯರು, ದಲಿತರು, ಬುಡಕಟ್ಟು ಸಮುದಾಯಗಳು, ಜನತಾಂತ್ರಿಕ ಮೌಲ್ಯಗಳಲ್ಲಿ ನಂಬಿಕೆಯಿರುವವರು ಎಚ್ಚರಗೊಳ್ಳ ಬೇಕಾಗಿದೆ. ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರನ್ನು ನೇಮಿಸುವುದು ಸರ್ಕಾರದ ಪಾಲಾದರೆ, ಸಿಬಿಐನ ನಿರ್ದೇಶಕರನ್ನು ನೇಮಿಸುವುದು ಸರ್ಕಾರದ ಪಾಲಾದರೆ, ಸೈನ್ಯದ ಮುಖ್ಯಸ್ಥರನ್ನು ನೇಮಿಸುವುದು ಒಬ್ಬರ ವಶಕ್ಕೆ ಬಂದರೆ, ಚುನಾವಣಾ ಆಯೋಗದ ಮುಖ್ಯಸ್ಥರನ್ನು ಸರ್ಕಾರ ನೇಮಿಸುವು ದಾದರೆ ಅಲ್ಲಿ ಪ್ರಜಾಪ್ರಭುತ್ವ ಇರಲು ಸಾಧ್ಯವಿಲ್ಲ. ಈ ಸಂಸ್ಥೆಗಳು ಸ್ವಾಯತ್ತವಾಗಿ ಕಾರ್ಯ ನಿರ್ವಹಿಸುವುದು ಸಾಧ್ಯವಿಲ್ಲ.

ಒಟ್ಟಂದದಲ್ಲಿ ನಮ್ಮ ಸಂವಿಧಾನ ಮತ್ತು ಸಂಸದೀಯ ಪ್ರಜಾಪ್ರಭುತ್ವ ಆಕ್ರಮಣಕ್ಕೆ ಒಳಗಾಗಿವೆ. ಅವುಗಳನ್ನು ರಕ್ಷಿಸುವ ಜವಾಬ್ದಾರಿ ನಮ್ಮ ಮೇಲಿದೆ. ಏಕೆಂದರೆ ನಮ್ಮ ಸಂವಿಧಾನ ನಾಶವಾದರೆ ಅದರಿಂದ ಹೆಚ್ಚು ಅಪಾಯ, ಧಕ್ಕೆ ಉಂಟಾಗುವುದು ಸಮಾಜದ ಹಿಂದುಳಿದ ವರ್ಗಕ್ಕೆ, ದಲಿತರಿಗೆ, ಬುಡಕಟ್ಟು ಸಮುದಾಯಗಳಿಗೆ, ಮಹಿಳೆಯರಿಗೆ, ದುಡಿಮೆಗಾರರಿಗೆ. ಜನರು ಜಾಗೃತರಾಗದಿದ್ದರೆ ಅಲ್ಲಿ ಪ್ರಜಾಪ್ರಭುತ್ವ ಉಳಿಯುವುದು ಅಸಾಧ್ಯ. ಕೇವಲ ಜಾಗೃತರಾದರೆ ಸಾಕಾಗುವುದಿಲ್ಲ. ಅದು ವಿಮರ್ಶಾತ್ಮಕ ಜಾಗೃತಿ ಯಾಗಬೇಕು. ಯಾವುದನ್ನು ಕಾನ್ಸೆಂಟೈಸೇಶನ್ ಎನ್ನುತ್ತೇವೆಯೋ ಅಂತಹ ಜಾಗೃತಿಯ ಅಗತ್ಯವಿದೆ. ಶೋಷಣೆಗೆ, ದಬ್ಬಾಳಿಕೆಗೆ ಒಳಗಾಗಿರುವವರು ತಮ್ಮ ಶೋಷಣೆ, ದಬ್ಬಾಳಿಕೆಯ ಬಗ್ಗೆ ಜಾಗೃತರಾಗಬೇಕು. ಅದನ್ನು ವಿಮರ್ಶಾತ್ಮಕವಾಗಿ ಪರಾಮರ್ಶಿಸಬೇಕು. ಆಗ ಶೋಷಕರಾರು, ದಬ್ಬಾಳಿಕೆ ಮಾಡುತ್ತಿರುವವರು ಯಾರು ಮತ್ತು ಶೋಷಣೆಗೆ ಒಳಗಾಗಿರುವವರು ಯಾರು ಎಂಬುದರ ಸ್ಪಷ್ಟ ಚಿತ್ರ ಮೂಡುತ್ತದೆ. ಶೋಷಣೆ ಮಾಡುತ್ತಿರುವವರ ಜೊತೆ ಶೋಷಣೆಗೆ ಒಳಗಾಗಿರುವವರು ಶಾಮೀಲಾದರೆ ಅಲ್ಲಿ ಬದಲಾವಣೆ, ವಿಮೋಚನೆ, ಬಿಡುಗಡೆ ಅಸಾಧ್ಯ. ಅಂದರೆ ನಮ್ಮ ಸಂವಿಧಾನ ಯಾರ ಪರವಿದೆ ಮತ್ತು ಅದಕ್ಕೆ ಅಪಾಯ ವನ್ನು ತಂದೊಡ್ಡುತ್ತಿರುವವರು ಯಾರು ಎಂಬುದರ ತಿಳುವಳಿಕೆ ನಮಗೆ ಬೇಕು. ಈ ದಿನದ ವಿಚಾರ ಸಂಕಿರಣ ಇಲ್ಲಿ ಭಾಗವಹಿಸಿರುವವರಲ್ಲಿ ಅಂತಹ ಕಾನ್ಸೆಂಟೈಸೇಶನ್ - ಕ್ರಿಟಿಕಲ್ ಕಾನ್ಶಯಸ್‌ನೆಸ್ ಉಂಟುಮಾಡುತ್ತದೆ - ಮೂಡಿಸುತ್ತದೆ ಎಂದು ನಾನು ಭಾವಿಸಿದ್ದೇನೆ.

*(ತುಮಕೂರಿನಲ್ಲಿ ದಿನಾಂಕ ೩೧.೦೩.೨೦೧೯ ರಂದು ಬಂಡಾಯ ಸಾಹಿತ್ಯ ಸಂಘಟನೆ - ಕರ್ನಾಟಕ ಆಯೋಜಿಸಿದ್ದ ರಾಜ್ಯಮಟ್ಟದ 'ಸೈದ್ಧಾಂತಿಕ ಸಂವಿಧಾನ ಸಮಾವೇಶ'ದಲ್ಲಿ ಮಂಡಿಸಿದ್ದ ಪ್ರಬಂಧ)*

**ಡಾ॥ ಟಿ. ಆರ್. ಚಂದ್ರಶೇಖರ**
ವಿಶ್ರಾಂತ ಪ್ರಾಧ್ಯಾಪಕ, ಕನ್ನಡ ವಿಶ್ವವಿದ್ಯಾಲಯ
೨ನೇ ಮುಖ್ಯರಸ್ತೆ, ೪ನೇ ಅಡ್ಡರಸ್ತೆ, ಬೇಗೂರು ಮುಖ್ಯರಸ್ತೆ
ಹೊಂಗಸಂದ್ರ, ಬೆಂಗಳೂರು - ೫೬೦ ೦೬೮

# ಗುರುಕುಲ ಪದ್ಧತಿ ಮತ್ತು ಆಧುನಿಕ ಸಂಗೀತ ಶಿಕ್ಷಣ – ಸವಾಲುಗಳು



**ಭಾ**ರತೀಯ ಸಂಗೀತ ಪರಂಪರೆ ಇಂದು ಹೆಮ್ಮರವಾಗಿ ಬೆಳೆದು ನಿಂತಿದೆ. ಭಾರತೀಯ ಸಂಗೀತವೆಂದರೆ; ಕೇವಲ ಶಾಸ್ತ್ರೀಯ ಸಂಗೀತವೆಂದು ಯಾರೂ ಭಾವಿಸಬೇಕಿಲ್ಲ... ಕರ್ನಾಟಕ – ಹಿಂದೂಸ್ಥಾನಿ ಶಾಸ್ತ್ರೀಯ ಸಂಗೀತದ ಹೊರತಾಗಿಯೂ ಭಾರತೀಯ ಸಂಗೀತ ವಿವಿಧ ಶಾಖೆಗಳಲ್ಲಿ ಕವಲೊಡೆದು ತನ್ನ ಕಂಪನ್ನು ಪಸರಿಸಿದೆ. ಜಾನಪದ ಸಂಗೀತ, ರಂಗ ಸಂಗೀತ, ಸುಗಮ ಸಂಗೀತ, ರವೀಂದ್ರ ಸಂಗೀತ, ವಚನ ಸಂಗೀತ, ಸೂಫಿ–ಗಜಲ್ ಸಂಗೀತ, ಸಿನೇಮಾ ಸಂಗೀತ – ಹೀಗೆ ವಿವಿಧ ನೆಲೆಗಳಲ್ಲಿ ಭಾರತೀಯ ಸಂಗೀತ ವ್ಯಾಪಕವಾಗಿ ಆವರಿಸಿದೆ. ಇತ್ತೀಚಿನ ದಿನಗಳಲ್ಲಿ ಪೂರ್ವ–ಪಶ್ಚಿಮವನ್ನು ಸಂಕರಗೊಳಿಸಿದ ಫ್ಯೂಷನ್ ಸಂಗೀತ ಜನಪ್ರಿಯ ಗೊಳ್ಳುತ್ತಿದೆ. ಅಸ್ತಿತ್ವದಲ್ಲಿರುವ ಎಲ್ಲ ಸಂಗೀತ ಪ್ರಕಾರಗಳು 'ಶಾಸ್ತ್ರ' ಮೂಲದಿಂದಲೇ ಬೆಳೆದಿವೆ. ಕಾಲಧರ್ಮಕ್ಕನುಗುಣವಾಗಿ ಕೆಲ ಪ್ರಕಾರಗಳು ಹೆಚ್ಚಿನ ತಾರಾಮೌಲ್ಯ ಪಡೆದಿವೆ. ಒಂದಷ್ಟು ಸಂಗೀತ ಪ್ರಕಾರಗಳನ್ನು ಪೂಜ್ಯ ಭಾವನೆಯಿಂದ ಕಾಣಲಾಗುತ್ತಿದೆ. ಇನ್ನೂ ಕೆಲ ಪ್ರಕಾರಗಳನ್ನು ಪಳೆಯುಳಿಕೆಯಂತೆ ಉಳಿಸಿ ಬೆಳೆಸಲಾಗುತ್ತಿದೆ. ಒಂದಾನೊಂದು ಕಾಲದಲ್ಲಿ ದ್ರುಪದ, ಧಮಾರ, ಟಪ್ಪಾ ಗಾಯನ ಪ್ರಕಾರಗಳು ಹೆಚ್ಚು ಜನಪ್ರಿಯವಾಗಿದ್ದು ವ್ಯಾಪಕವಾಗಿ ಬಳಕೆಯಲ್ಲಿದ್ದವು – ಕಳೆದ ಒಂದು ಶತಮಾನದಿಂದ ಈಚೆಗೆ ಖಯಾಲ್–ಖ್ಯಾಲ್ ಗಾಯನ ಪ್ರಕಾರ ಹೆಚ್ಚು ಮುಂಚೂಣಿಗೆ ಬಂತು. ಆಧುನಿಕ ಸಂದರ್ಭದಲ್ಲಿ ಸಿನೇಮಾ ಸಂಗೀತ ಹೆಚ್ಚು ಅಬ್ಬರಿಸುವಂತಾಯಿತು. ಹಾಗಂತ ಶಾಸ್ತ್ರೀಯ ಸಂಗೀತ ಕಳೆದುಹೋಗಲಿಲ್ಲ. ಜನಪ್ರಿಯತೆಯ ಮಾನದಂಡ ಇಟ್ಟುಕೊಂಡು ಸಂಗೀತ ಪ್ರಕಾರಗಳನ್ನು ಶ್ರೇಷ್ಠ ಕನಿಷ್ಠದ ತರತಮದ ವರ್ಗೀಕರಣ ಸರಿಯಾದುದಲ್ಲ.

ಹಾಗೆಯೇ ಗುರುಕುಲ ಪದ್ಧತಿ ಸಂಗೀತ ಶಿಕ್ಷಣ ಶ್ರೇಷ್ಠವೋ? ಆಧುನಿಕ ಸಂಗೀತ ಶಿಕ್ಷಣ ಶ್ರೇಷ್ಠವೋ...? ಎಂಬಂತಹ ಬಾಲಿಶ ಪ್ರಶ್ನೆಗಳೇ ಅಕಾಡೆಮಿಕ್ ವಲಯದಲ್ಲಿ ಅನಗತ್ಯ ಗೊಂದಲ ಸೃಷ್ಟಿಸುತ್ತವೆ. ಶ್ರೇಷ್ಠ ಕನಿಷ್ಠದ ಮಾತುಗಳು ಸಾಪೇಕ್ಷವಾದವು. ಹಾಗೆ ನೋಡಿದರೆ, ಯಾವ ಪದ್ಧತಿಯೂ ಆತ್ಯಂತಿಕ ಎನ್ನುವಷ್ಟು ಶ್ರೇಷ್ಠವೂ, ಕನಿಷ್ಠವೂ ಆಗಿರುವುದಿಲ್ಲ. ಪ್ರತಿಯೊಂದು ಸಂಗೀತ ಶಿಕ್ಷಣ ಪದ್ಧತಿ ತನ್ನ ಕಾಲದ ಅಗತ್ಯಗಳನ್ನು ಪೂರೈಸಲು ರೂಪುಗೊಂಡಿರುತ್ತದೆ. ಸಮಕಾಲೀನ ಸಂದರ್ಭದ ಅಗತ್ಯಗಳನ್ನು ಪೂರೈಸಲು ಪರಂಪರೆಯ ಅಂತಸ್ಸತ್ವ ಹೀರಿಕೊಂಡ ಜೀವಂತ ಸಂಗೀತ ಶಿಕ್ಷಣ ಪದ್ಧತಿಯನ್ನು ಮರು ರೂಪಿಸಬೇಕಾಗುತ್ತದೆ. ಅದು ಬಿಟ್ಟು ಗುರುಕುಲ ಪದ್ಧತಿಯ ಸಂಗೀತ ಶಿಕ್ಷಣವೇ ಆತ್ಯಂತಿಕವಾಗಿ ಶ್ರೇಷ್ಠವಾದುದು ಎಂದು ವಾದಿಸುವುದು ಅಪಾಯಕಾರಿ ಎನಿಸುತ್ತದೆ. ಹಾಗೆಯೇ ಆಧುನಿಕ ಸಂಗೀತ ಶಿಕ್ಷಣ ಮಾತ್ರ ಸಾಧನೆಯ ಹಾದಿಯಲ್ಲಿ ಹೆಚ್ಚು ಪ್ರಯೋಜನಕ್ಕೆ ಬರುತ್ತದೆ ಎಂಬ ಮೊಂಡುವಾದವೂ ಅರ್ಧ ಸತ್ಯದಿಂದ ಕೂಡಿದೆ.

ಹಿರಿಯ ಶ್ರೇಷ್ಠ ಗುರುಗಳ ಬಳಿ ಸಂಗೀತಾಭ್ಯಾಸ ಮಾಡಿ ಮಹಾನ್ ಕಲಾವಿದರಾಗಿ ರೂಪುಗೊಂಡು ಖ್ಯಾತನಾಮರಾದ ಹಲವರು ಒಂದು ಮಾತನ್ನು ಪದೇ ಪದೇ ಹೇಳುತ್ತಿರುತ್ತಾರೆ : "ಯಾವ ವಿಶ್ವವಿದ್ಯಾಲಯ, ಕಾಲೇಜುಗಳೂ ಶ್ರೇಷ್ಠ ಸಂಗೀತಗಾರರನ್ನು ಸೃಷ್ಟಿ ಮಾಡಿಲ್ಲ, ಮಾಡುತ್ತಿಲ್ಲ" ಎಂದು... ಹೀಗೆ ಹೇಳುವ ಮೂಲಕ ಅವರೆಲ್ಲ ಪರೋಕ್ಷವಾಗಿ ಗುರುಕುಲ ಪದ್ಧತಿಯ ಸಂಗೀತ ಶಿಕ್ಷಣದ ಸಮರ್ಥಕರಾಗುತ್ತಾರೆ. ಗುರುಕುಲ ಪದ್ಧತಿಯ ಸಂಗೀತ ಶಿಕ್ಷಣ ಮತ್ತು ಘರಾಣೆಗಳು ಒಂದು

**ಡಾ॥ ಜಯದೇವಿ ಜಂಗಮಶೆಟ್ಟಿ**

ಕಾಲದ ಶ್ರೇಷ್ಠ ಮಾದರಿ ಎನಿಸಿದ್ದವು. ಆ ಬಗ್ಗೆ ಎರಡು ಮಾತಿಲ್ಲ. ಕಾಲಾನಂತರ ಗುರುಕುಲ ಪದ್ಧತಿಯ ಸಂಗೀತ ಶಿಕ್ಷಣ ಸಮಕಾಲೀನ ಬದುಕಿನ ಜನತಂತ್ರದ ಆಶಯಗಳಿಗೆ ಪೂರಕವಾಗಿ ಸ್ಪಂದಿಸದೇ ಇರುವುದಕ್ಕೆ ಸಾವಿರ ನಿದರ್ಶನ ನೀಡಬಹುದು.

ಗುರುಕುಲ ಪದ್ಧತಿಯಲ್ಲಿ 'ಶ್ರೇಷ್ಠ ಗುರು' ತನ್ನನ್ನು ಆಶ್ರಯಿಸಿದ ಶಿಷ್ಯರಿಗೆ ಎಲ್ಲವನ್ನೂ ಧಾರೆಯೆರೆಯುತ್ತಿದ್ದರು. ಕಠಿಣ ತಾಲೀಮು, ಗುಣಮಟ್ಟದ ಶಿಕ್ಷಣ, ಕಟ್ಟುನಿಟ್ಟಿನ ಶಿಸ್ತು... ಶಿಷ್ಯರನ್ನು ಸುಂದರಮೂರ್ತಿಯನ್ನಾಗಿಸುತ್ತಿದ್ದವು. ನಮ್ಮ ಕಾಲದ ಕಲಿಕೆಗೂ ಆದರ್ಶಪ್ರಾಯವಾದ ಕಲಿಕಾ ಪದ್ಧತಿಯನ್ನು ಅವರು ಅಳವಡಿಸಿಕೊಂಡಿದ್ದರು. ಭಾರತರತ್ನ ಪಂ. ಭೀಮಸೇನ್ ಜೋಶಿ ಮತ್ತು ವಿದುಷಿ ಡಾ॥ ಗಂಗೂಬಾಯಿ ಹಾನಗಲ್ ಅವರನ್ನು ಅವರ ಗುರುಗಳಾದ ಪಂ. ಸವಾಯಿ ಗಂಧರ್ವರು ಅಕ್ಷರಶಃ ಗುರುಕುಲ ಪದ್ಧತಿಯಲ್ಲೇ ಸಂಗೀತ ಶಿಕ್ಷಣ ನೀಡಿ ಶ್ರೇಷ್ಠ ಮಾದರಿ ರೂಪಿಸಿದರು. ಪಂ. ಸವಾಯಿ ಗಂಧರ್ವರಲ್ಲಿ ಕಲಿಯುವ ಆಸೆ ಇಟ್ಟುಕೊಂಡಿದ್ದ ಅಸಂಖ್ಯಾತ ಏಕಲವ್ಯರಿಗೆ ಆ ಭಾಗ್ಯ ದೊರೆಯಲೇ ಇಲ್ಲ. ಡಾ॥ ಮಲ್ಲಿಕಾರ್ಜುನ್ ಮನ್ಸೂರ್, ಪಂ. ಭೀಮಸೇನ ಜೋಶಿ ಮತ್ತು ಡಾ॥ ಗಂಗೂಬಾಯಿ ಹಾನಗಲ್ ಅವರಂತಹ ಮಹಾನ್ ಸಂಗೀತಗಾರರ ಬಳಿ ಕಲಿಯುವ ಅವಕಾಶ ಅವರ ಮಕ್ಕಳು, ಮೊಮ್ಮಕ್ಕಳು, ಬೆರಳೆಣಿಕೆಯ ಕೆಲವರನ್ನು ಹೊರತುಪಡಿಸಿದರೆ ಬೇರೆ ಸಂಗೀತಾಸಕ್ತ ಏಕಲವ್ಯರಿಗೆ ಸಿಗಲೇ ಇಲ್ಲ. ನೂರಾರು ವರ್ಷಗಳ ಹಿಂದೆ ಏಕಲವ್ಯರು ಇರಲಿಕ್ಕಿಲ್ಲ. ಹಾಗಾಗಿ ಸವಾಲು ಎದುರಾಗಿರಲಿಕ್ಕಿಲ್ಲ. ಆದರೆ ಸಮಕಾಲೀನ ಸಂದರ್ಭದಲ್ಲಿ ಘರಾಣಾ ಪದ್ಧತಿ ಮತ್ತು ಕುರುಕುಲ ಪದ್ಧತಿಯ ಶ್ರೇಷ್ಠತೆಯ ಜೊತೆಗೆ 'ಮಿತಿ'ಗಳ ಬಗ್ಗೆ ಮಾತನಾಡುವುದು ಇಂದಿನ ಅಗತ್ಯವಾಗಿದೆ. ಇಲ್ಲದಿದ್ದರೆ ಘರಾಣೆಗಳು ಸಮರ್ಥ ಸಂಗೀತಗಾರರ ವಾರಸುದಾರಿಕೆ ಇಲ್ಲದೆ ಅಳಿವಿನಂಚಿಗೆ ಬಂದು ನಿಲ್ಲುವಂತಾಗುತ್ತದೆ. ಶ್ರೇಷ್ಠ ಗುರುಗಳ ಅಲಭ್ಯತೆಯಿಂದ ಪ್ರತಿಭಾವಂತ ಶಿಷ್ಯರು ಅನಿವಾರ್ಯವಾಗಿ ಬೇರೆ ಘರಾಣೆಗಳ ಗುರುಗಳನ್ನು ಹುಡುಕಿಕೊಂಡು ಹೋದ ಅನೇಕ ನಿದರ್ಶನಗಳು ಸಂಗೀತ ಚರಿತ್ರೆಯಲ್ಲಿವೆ. ಒಂದೆರಡನ್ನು ಮಾತ್ರ ಇಲ್ಲಿ ಉಲ್ಲೇಖಿಸುತ್ತೇನೆ. ಪಂ. ಪಂಚಾಕ್ಷರಿ ಗವಾಯಿಗಳು ಮತ್ತು ಪಂ. ಮಲ್ಲಿಕಾರ್ಜುನ ಮನಸೂರ ಅವರು ಆರಂಭದಲ್ಲಿ ಗ್ವಾಲಿಯರ್ ಘರಾಣೆಯ ಪಂ. ನೀಲಕಂಠ ಬುವಾ ಮೀರಜಕರ್ ಅವರಲ್ಲಿ ಸಂಗೀತಾಭ್ಯಾಸ ಮಾಡುತ್ತಿರುತ್ತಾರೆ. ಗ್ವಾಲಿಯರ್ ಘರಾಣೆಯ ಎಲ್ಲ ಮಹತ್ವದ ರಾಗಗಳನ್ನು ಕಂಠಗತ ಮಾಡಿಕೊಂಡಿರುತ್ತಾರೆ. ಅದೇ ಘರಾಣೆಯ ಶ್ರೇಷ್ಠ ಗಾಯಕರ ಸಾಲಿನಲ್ಲಿ ನಿಲ್ಲಲು ತಾಲೀಮು ನಡೆಸುತ್ತಿರುವಾಗಲೇ ಗುರುಗಳಾದ ಪಂ. ನೀಲಕಂಠ ಬುವಾ ಮೀರಜಕರ ಅವರು ಅಕಾಲಿಕ ಮರಣಕ್ಕೀಡಾಗುತ್ತಾರೆ.

ಗ್ವಾಲಿಯರ್ ಘರಾಣೆಯ ಗಾಯಕರಾಗಿಯೇ ಮುಂದುವರಿಯಬೇಕೆಂಬ ಅದಮ್ಯ ಬಯಕೆ ಹೊಂದಿದ್ದ ಪಂ. ಮಲ್ಲಿಕಾರ್ಜುನ ಮನಸೂರ ಅವರು ಅದೇ ಘರಾಣೆಯ ಶ್ರೇಷ್ಠ ಸಂಗೀತಗಾರ ಪಂ. ಬಾಲಕೃಷ್ಣ ಬುವಾ ವಝೆಯವರಲ್ಲಿ ಸಂಗೀತ ಕಲಿಯುವ ಅಪೇಕ್ಷೆ ವ್ಯಕ್ತಪಡಿಸುತ್ತಾರೆ. ಮಾತ್ರವಲ್ಲ ಮನವಿ ಕೂಡ ಮಾಡುತ್ತಾರೆ. ಆದರೆ ಪಂ. ಬಾಲಕೃಷ್ಣ ಬುವಾ ವಝೆಯವರು ಪಂ. ಮಲ್ಲಿಕಾರ್ಜುನ ಮನಸೂರ ಅವರಿಗೆ ಸಂಗೀತ ಶಿಕ್ಷಣ ನೀಡಲು ಒಪ್ಪುವುದಿಲ್ಲ. ಅನಿವಾರ್ಯವಾಗಿ ಮನಸೂರ ಅವರು ಘರಾಣಾ (ಮನೆತನ) ಬದಲಾವಣೆ ಮಾಡಬೇಕಾಗುತ್ತದೆ. ಕೊಲ್ಲಾಪುರದಲ್ಲಿ ನೆಲೆಸಿದ್ದ ಜೈಪುರ ಅತ್ರೌಲಿ ಘರಾಣೆಯ ಸ್ಥಾಪಕ ಉಸ್ತಾದ ಅಲ್ಲಾಧಿಯಾಖಾನ ಸಾಹೇಬರಲ್ಲಿ ಹೋಗಿ ಸಂಗೀತ ಕಲಿಯುವ ಅಪೇಕ್ಷೆ ವ್ಯಕ್ತಪಡಿಸುತ್ತಾರೆ. ಮನಸೂರ ಅವರ ಗಾನತಟ್ಟೆ ಆಲಿಸಿದ ಉಸ್ತಾದ ಅಲ್ಲಾಧಿಯಾಖಾನ ಸಾಹೇಬರು ಮಗ ಮಂಜೀಖಾನ ಅವರನ್ನು ಉದ್ದೇಶಿಸಿ "ಮಂಜೀ ಯೇ ದೌಡತಾ ಹುವಾ ಘೋಡಾ ಹೈ ಲಗಾಮ್ ಲಗಾವ್" ಎಂದು ಹೇಳುವ ಮೂಲಕ ಸಂಗೀತ ಕಲಿಸಲು ಸೂಚಿಸುತ್ತಾರೆ. ಗ್ವಾಲಿಯರ್ ಘರಾಣೆಯ ಪಂ. ಮಲ್ಲಿಕಾರ್ಜುನ ಮನಸೂರ ಅವರು ಜೈಪುರ ಅತ್ರೌಲಿ ಘರಾಣೆಯ ಉಸ್ತಾದ ಮಂಜೀಖಾನರಲ್ಲಿ ಸಂಗೀತಾಭ್ಯಾಸ ಮಾಡಿ ಸಾಕಷ್ಟು ಕಲಿಯುತ್ತಾರೆ. ಉಸ್ತಾದ ಮಂಜೀಖಾನ್‌ರು ಅಕಾಲಿಕ ನಿಧನ ಹೊಂದಿದ್ದರಿಂದ ಮತ್ತೆ ಗುರುವನ್ನು



# ಕುಸುಮಳ ಸತ್ಯಾಗ್ರಹ



**ಇಂದು** ಅವಳ ಶೋಕದ ಹದಿನಾಲ್ಕನೆಯ ದಿನ
ಅವಳು ಅನ್ನ ಮುಟ್ಟುವುದಿಲ್ಲವಂತೆ
ಇನ್ನೂ ಏಳು ದಿನ
ಮುಡಿ ಕಟ್ಟುವುದಿಲ್ಲವಂತೆ
ಪ್ರೀತಿ ಮಾಡುವುದಿಲ್ಲವಂತೆ
ದಯೆ ಸಹ
ದಾನ ಮಾಡುವುದಿಲ್ಲವಂತೆ ಯಾರಿಗೂ
ಸ್ವಂತಿಕೆಯನ್ನು ಮಣ್ಣಾಗಿಸಿಬಿಡುತ್ತಾಳಂತೆ
ಈಗ ಅವಳಿಗೆ ಯಾವುದೂ ಲೆಕ್ಕಕ್ಕಿಲ್ಲ
ನಿಜ, ಅವಳು ಮರಣಾಸನ್ನಳಾಗಿದ್ದಾಳೆ
ಶೋಕದ ಈ ಕಠಿಣ ದಿನಗಳಲ್ಲಿ
ಹೇಳ್ತಾಳೆ ಕುಸುಮ!
ಅವಳಿಗೆ ಎಂದೂ ಹೊಟ್ಟೆ ತುಂಬ ಊಟ
ಸಿಗಲಿಲ್ಲವಂತೆ
ಸಿಕ್ಕಿದ್ದೆಲ್ಲಾ ಬರೀ ಹಳಸಿದ್ದೆ
ಸಭ್ಯ-ಪುರುಷರೆಲ್ಲಾ ಅವಳನ್ನ ನೋಡಿದ್ರು
ಕಾಮದಾಸೆಯಿಂದಲೇ
ಅವಳನ್ನು ಪರವಶ, ವಿವಶಗೊಳಿಸಿದರು
ಅವಳ ಮೇಲೆ ಯಾರೂ ದಯೆ ತೋರಲಿಲ್ಲ
ಅವಳಿಗೆ ಎಂದೂ ಪ್ರೀತಿ ಸಿಗಲೇ ಇಲ್ಲ
ಬರೀ ಒಬ್ಬ ಹೆಣ್ಣೆಂದು ಭಾವಿಸಿದರಷ್ಟೆ
ಬಡಪಾಯಿ, ದುರ್ಬಲ
ಮುಡಿ ಬಿಚ್ಚಿ,
ಮತ್ತೆಂದೂ ಕಟ್ಟದ ಸಂಕಲ್ಪದಲ್ಲಿ
ಆತ್ಮಶೋಕದ ಆ
ಕೊನೆಯ ಕ್ಷಣಗಳಲ್ಲಿ ಅಳುತ್ತ
ವಿಶ್ರಮಿಸುತ್ತಿದ್ದಾಳೆ ಕುಸುಮ
ಸತ್ಯಾಗ್ರಹದ ಆಗ್ರಹದಲ್ಲಿ...



ಮೂಲ : **ಡಾ॥ ಸವಿತ ಸಿಂಗ್**
ಕನ್ನಡಕ್ಕೆ : **ಡಾ॥ ಷಾಕಿರಾ ಖಾನಂ**
೧೮೭/೨೭, ೧೧ನೇ 'ಬಿ' ಮುಖ್ಯರಸ್ತೆ, ಜಯನಗರ ೧ನೇ ಬ್ಲಾಕ್
ರಾಣಿ ಸರಳಾದೇವಿ ಸಾಯಿ ಕುಂಜ್ ಸ್ಕೂಲ್ ಹಿಂಭಾಗ
ಬೆಂಗಳೂರು-೧೧

ಹುಡುಕುವ ಇಕ್ಕಟ್ಟಿಗೆ ಸಿಲುಕುತ್ತಾರೆ. ಪುಣ್ಯವಶಾತ್ ಉಸ್ತಾದ ಮಂಜೀಖಾನರ ಸಹೋದರ ಉಸ್ತಾದ ಬುರ್ಜಿಖಾನರು ಸಂಗೀತ ಕಲಿಸಲು ಒಪ್ಪುವುದರಿಂದ 'ಜೈಪುರ ಅತ್ರೌಲಿ' ಘರಾಣೆಯ ಕೀರ್ತಿ ಪತಾಕೆಯನ್ನು ರಾಷ್ಟ್ರೀಯ-ಅಂತಾರಾಷ್ಟ್ರೀಯ ಮಟ್ಟದಲ್ಲಿ ಹಾರಿಸುವ ಹಂತ ತಲುಪುತ್ತಾರೆ.

ಹಲವಾರು ಶಿಷ್ಯರನ್ನು ಬೆಳೆಸಿದ, ಬದುಕನ್ನು ಸಂಗೀತಕ್ಕಾಗಿಯೇ ಮುಡುಪಿಟ್ಟ ಪಂ. ಪಂಚಾಕ್ಷರಿ ಗವಾಯಿಗಳೂ ಮನಸೂರರ ಹಾಗೆ ಮನೆತನವನ್ನು ಬದಲಾಯಿಸುವ ಅನಿವಾರ್ಯತೆಗೆ ಸಿಲುಕುತ್ತಾರೆ. ಹಾನಗಲ್ ಕುಮಾರಸ್ವಾಮಿಗಳ ಒತ್ತಾಸೆಯಿಂದ ಸಂಗೀತದತ್ತ ವಾಲುವ ಪಂ. ಪಂಚಾಕ್ಷರಿ ಗವಾಯಿಗಳು ಆರಂಭದ ದಿನಗಳಲ್ಲಿ ಕಿರಾಣಾ ಘರಾಣೆಯ ದಿಗ್ಗಜ ಉಸ್ತಾದ ವಾಹೀದಖಾನ್‌ರಲ್ಲಿ ಹಿಂದುಸ್ತಾನಿ ಗಾಯನದ ಸಂಗೀತಾಭ್ಯಾಸ ಮಾಡುತ್ತಾರೆ. ನಂತರ ಗ್ವಾಲಿಯರ್ ಘರಾಣೆಯ ಪಂ. ನೀಲಕಂಠ ಬುವಾ ಮೀರಜಕರ್ ಅವರಲ್ಲಿ ಸಂಗೀತಾಭ್ಯಾಸ ಮುಂದುವರಿಸಿ ದಡ ತಲುಪುತ್ತಾರೆ. ಹಾನಗಲ್ ಕುಮಾರಸ್ವಾಮಿಗಳ ಕನಸು ಸಾಕಾರಗೊಳಿಸುತ್ತಾರೆ.

ಗುರುಕುಲ ಪದ್ಧತಿಯ ಸಂಗೀತ ಶಿಕ್ಷಣದ ಮಿತಿಗಳನ್ನು ಚೆನ್ನಾಗಿ ಬಲ್ಲವರಾಗಿದ್ದ ಪಂ. ಪಂಚಾಕ್ಷರಿ ಗವಾಯಿಗಳು ಸಂಗೀತ ಶಿಕ್ಷಣವನ್ನು ಸಾರ್ವತ್ರಿಕಗೊಳಿಸಿದ ಮೊದಲಿಗರು. ಅಷ್ಟೆಯಲ್ಲ, ಅನೇಕ ಖ್ಯಾತನಾಮರಿಗೆ ಸಂಗೀತ ದೀಕ್ಷೆ ನೀಡಿದ ಶ್ರೇಯಸ್ಸೂ ಪಂ. ಪಂಚಾಕ್ಷರಿ ಗವಾಯಿಗಳಿಗೇ ಸಲ್ಲುತ್ತದೆ. ಗ್ವಾಲಿಯರ್ - ಕಿರಾಣಾ ಘರಾಣೆಯ ಗಾಯನ ಶೈಲಿಯನ್ನು ಕೈವಶ ಮಾಡಿಕೊಂಡಿದ್ದ ಗವಾಯಿಗಳು ಅಪಾರ ಸಂಖ್ಯೆಯ ಶಿಷ್ಯರಿಗೆ ಕಲಿಸಿಕೊಟ್ಟಿದ್ದು ಎಲ್ಲ ಘರಾಣೆಗಳ ಅತ್ಯುತ್ತಮವಾದುದನ್ನು. ಪಂ. ಪಂಚಾಕ್ಷರಿ ಗವಾಯಿಗಳು ಎಲ್ಲ ಸಮುದಾಯದ, ಎಲ್ಲ ಪ್ರದೇಶದ ಪ್ರತಿಭಾವಂತರಿಗೆ ಅಕ್ಕರೆಯಿಂದ ಸಂಗೀತ ಕಲಿಸಿದವರು. ಪಂ. ಪುಟ್ಟರಾಜ ಗವಾಯಿಗಳು, ಪಂ. ಬಸವರಾಜ ರಾಜಗುರು, ಪಂ. ಸಿದ್ಧರಾಮ ಜಂಬಲದಿನ್ನಿ, ಪಂ. ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿ, ಪಂ. ಅರ್ಜುನ ಸಾ. ನಾಕೋಡ, ಪಂ. ಶೇಷಾದ್ರಿ ಗವಾಯಿ, ಪಂ. ಚಿತ್ತರಗಿ ಗಂಗಾಧರ್ ಶಾಸ್ತ್ರೀ ಸೇರಿದಂತೆ ಹಲವರಿಗೆ ಸಂಗೀತ ಕಲಿಸಿದ ಪಂ. ಪಂಚಾಕ್ಷರಿ ಗವಾಯಿಗಳು ಗದುಗಿನ ವೀರೇಶ್ವರ ಪುಣ್ಯಾಶ್ರಮವನ್ನು ಮೊದಲ ಸಾರ್ವತ್ರಿಕ ಸಂಗೀತ ಶಿಕ್ಷಣದ ಕೇಂದ್ರವನ್ನಾಗಿಸಿದರು. ಪಂ. ಸಿದ್ಧರಾಮ ಜಂಬಲದಿನ್ನಿ, ಪಂ. ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿಯವರು ಗ್ವಾಲಿಯರ್ - ಕಿರಾಣಾ ಘರಾಣೆಯಿಂದ ನಿಷ್ಠೆ ಬದಲಿಸಿ ಪಂ. ಮಲ್ಲಿಕಾರ್ಜುನ ಮನಸೂರರ ಶಿಷ್ಯತ್ವ ಪಡೆದು ಜೈಪುರ ಅತ್ರೌಲಿ ಘರಾಣೆಯ ಮಾರ್ಗದಲ್ಲಿ ಸಾಗಿದರು. ಹೀಗಿದ್ದೂ ಅವರ ಗಾಯನ ಶೈಲಿಯ ಮೇಲೆ ಪಂ. ಪಂಚಾಕ್ಷರಿ ಗವಾಯಿಗಳ ಪ್ರಭಾವ ಅಚ್ಚಳಿಯದಂತಿತ್ತು. ಬೆಳಗಾವಿ ಮೂಲದ ಪಂ. ಕುಮಾರ ಗಂಧರ್ವರು ಗ್ವಾಲಿಯರ್ ಘರಾಣೆಯ ಪಂ. ಬಿ. ಆರ್. ದೇವಧರ್ ಅವರಲ್ಲಿ ಸಂಗೀತಾಭ್ಯಾಸ ಮಾಡಿದವರು. ನಂತರದ ವರ್ಷಗಳಲ್ಲಿ ಎಲ್ಲ ಘರಾಣೆಯ ಅಂತಸ್ಸತ್ವ ಹೀರಿಕೊಂಡು ಬೆಳೆದು ನಿಂತವರು. ಪ್ರಯೋಗಶೀಲತೆಗೆ ಹೆಸರಾದ ಪಂ. ಕುಮಾರ ಗಂಧರ್ವರು ಲೋಕ ಸಂಗೀತದ ಗಾಢ ಪ್ರಭಾವದಲ್ಲಿ ನಿರ್ಗುಣಿ ಭಜನ್ ಪ್ರಕಾರವನ್ನು ಜನಪ್ರಿಯಗೊಳಿಸಿದವರು.




ಒಂದೆಡೆ ಘರಾಣೆ ನಿಷ್ಠೆ ಮತ್ತು ಸಂಗೀತ ಕಲಿಕೆಯ ತೀವ್ರ ಹಂಬಲದ ನಡುವೆ ಹೊಯ್ದಾಟ ನಡೆಸಿ ಸಿದ್ಧಿಶಿಖರ ತಲುಪಿದವರಲ್ಲಿ ಪಂ. ಬಸವರಾಜ ರಾಜಗುರು ಅವರು ಪ್ರಮುಖರು. ಗ್ವಾಲಿಯರ್ - ಕಿರಾಣಾ ಘರಾಣೆಯ ಗುರು ಪಂ. ಪಂಚಾಕ್ಷರಿ ಗವಾಯಿಗಳಲ್ಲಿ ಸಂಗೀತ ಕಲಿಯಲು ಶುರು ಮಾಡುವ ಪಂ. ಬಸವರಾಜ ರಾಜಗುರು ಅವರು ನಂತರದ ದಿನಗಳಲ್ಲಿ ಮುಂಬಯಿಗೆ ಹೋಗುತ್ತಾರೆ. ಅಲ್ಲಿ ಕಿರಾಣಾ ಘರಾಣೆಯ ಸುರೇಶ ಬಾಬು ಮಾನೆ ಮತ್ತು ವಾಹೀದ ಖಾನರಲ್ಲಿ ಶಿಷ್ಯತ್ವ ಪಡೆಯುತ್ತಾರೆ. ಒಂದು ಹಂತದಲ್ಲಿ ಪಂ. ರಾಜಗುರುಗಳಿಗೆ ಈ ಘರಾಣೆಗಳ ಗೊಡವೆಯೇ ಬೇಡ ಎನಿಸಿ ಎಲ್ಲ ಘರಾಣೆಗಳ ಅತ್ಯುತ್ತಮ ಅಂಶಗಳನ್ನು ಹೀರಿಕೊಂಡು ರಾಜಮಾರ್ಗದಲ್ಲಿ ಸಾಗುತ್ತಾರೆ. ಪಂ. ಬಸವರಾಜ ರಾಜಗುರು ಅವರ ಸಂಗೀತ ಘರಾಣೆಗಳ ಎಲ್ಲೆ ಕಟ್ಟುಗಳನ್ನು ಮೀರಿ ಅತ್ಯುತ್ಕೃಷ್ಟ ನೆಲೆಗೆ ತಲುಪಿದೆ. ಗುರುಕುಲ ಪದ್ಧತಿ ಮತ್ತು ಘರಾಣಾ ಗಾಯನದ ಶಕ್ತಿ ಹಾಗೂ ಮಿತಿಗಳನ್ನು ಅರಿತಿದ್ದ ಪಂ. ಬಸವರಾಜ ರಾಜಗುರುಗಳು ಅತಿ ಹೆಚ್ಚು ಶಿಷ್ಯರಿಗೆ ಸಂಗೀತ ಕಲಿಸಿದ ಕೀರ್ತಿಗೆ ಪಾತ್ರರಾಗಿದ್ದಾರೆ. ಜನತಂತ್ರದ ಆಶಯಕ್ಕನುಗುಣವಾಗಿ ಎಲ್ಲ ಸಮುದಾಯದ ಪ್ರತಿಭಾವಂತರನ್ನು ಗುರುತಿಸಿ ಸಂಗೀತ ಕಲಿಸಿದ ಕೀರ್ತಿಯೂ ಅವರಿಗೇ ಸಲ್ಲುತ್ತದೆ. ಪಂ. ಗಣಪತಿಭಟ್ ಹಾಸಣಗಿ, ಪಂ. ಹನುಮಂತಸಿಂಗ್ ಹಾಲಗಲ್, ಪಂ. ಪರಮೇಶ್ವರ ಹೆಗಡೆ, ಪಂ. ಹನುಮಣ್ಣ ನಾಯಕ ದೊರೆ, ಪಂ. ಎಸ್. ಎಫ್. ಗೋಜನೂರು, ಪಂ. ಸೋಮನಾಥ ಮರಡೂರು, ಮುಂತಾದವರು ಪಂ. ಬಸವರಾಜ ರಾಜಗುರು ಅವರ ಗಾಯನ ಪರಂಪರೆಯನ್ನು ಬೆಳಗಿಸುತ್ತಿದ್ದಾರೆ.

ಗುರುಕುಲ ಪದ್ಧತಿಯ ಕಲಿಕಾ ಕ್ರಮ ಉತ್ಕೃಷ್ಟವಾಗಿತ್ತು. ಆದರೆ ಆ ಪದ್ಧತಿ ಜನತಂತ್ರದ ಆಶಯಕ್ಕನುಗುಣವಾಗಿ ನಡೆಯುತ್ತಿರಲಿಲ್ಲ... ಎಲ್ಲ ಸಮುದಾಯದ ಪ್ರತಿಭಾವಂತರಿಗೆ ಮುಕ್ತ ಅವಕಾಶ ಇರಲಿಲ್ಲ... ಗುರು ಎಷ್ಟೇ ಶ್ರೇಷ್ಠ ಮತ್ತು ಅಂತಃಕರಣವುಳ್ಳವರಾಗಿದ್ದರೂ ಕುಟುಂಬ ಮತ್ತು ಸಮುದಾಯದ ಪಾತ್ರವೇ ನಿರ್ಣಾಯಕವಾಗಿತ್ತು. ಫ್ಯೂಡಲ್ ಮನೋಧರ್ಮ ಗುರುಕುಲ ಪದ್ಧತಿಯನ್ನು ನಿಯಂತ್ರಿಸುತ್ತಿತ್ತು. ಹಾಗೆ ನೋಡಿದರೆ, ಗುರು ದ್ರೋಣಾಚಾರ್ಯರು ಒಳ್ಳೆಯವರೇ... ಶ್ರೇಷ್ಠ ಗುರುಗಳು. ಏಕಲವ್ಯನಿಗೆ ಶಿಕ್ಷಣ ನೀಡಲಾರರು... ಹೇಗೋ ವಿದ್ಯೆ ಕಲಿತರೂ ಗುರುದಕ್ಷಿಣೆಯಾಗಿ ಹೆಬ್ಬೆರಳು ಪಡೆದು ಊಳಿಗಮಾನ್ಯ ವ್ಯವಸ್ಥೆಯ ಹಿತ ಕಾಪಾಡಬಲ್ಲರು. ಆಧುನಿಕ ಗುರುಕುಲ ಪದ್ಧತಿಯಲ್ಲೂ ಅಷ್ಟೆ. ಅಸಂಖ್ಯಾತ ಗುರು ದ್ರೋಣರು ಶ್ರೇಷ್ಠ ಸಂಗೀತ ಸಾಧಕರೆಂಬುದರಲ್ಲಿ ಎರಡು ಮಾತಿಲ್ಲ. ವ್ಯಕ್ತಿಗತವಾಗಿಯೂ ಒಳ್ಳೆಯವರೆ; ಮಕ್ಕಳು - ಮೊಮ್ಮಕ್ಕಳಿಗೆ ಮೊದಲ ಆದ್ಯತೆ, ಬೇರೆಯವರಿಗೆ ಕಲಿಸಿದರೂ ನೂರಾರು ನಿರ್ಬಂಧಗಳು... ಮಹತ್ವದ ರಾಗಗಳು, ಬಂದೀಶಗಳು, ಸಂಕೀರ್ಣ ರಾಗಗಳ ಸೂಕ್ಷ್ಮತೆಯನ್ನು ಹೇಳಿಕೊಡಲಾರರು. ಒಂದು ವೇಳೆ ಹೇಳಿಕೊಟ್ಟರೂ ಅವರು (ಹತ್ತು ವರ್ಷಗಳವರೆಗೆ) ಹೇರಿದ ನಿರ್ಬಂಧ ಮೀರಿ ಸಾರ್ವಜನಿಕ ಪ್ರದರ್ಶನ ನೀಡುವಂತಿಲ್ಲ. ಏಕಲವ್ಯನ ಹೆಬ್ಬೆರಳು ಕಿತ್ತುಕೊಂಡಿದ್ದಕ್ಕಿಂತಲೂ ಘೋರವಾದುದು ಈ ನಿರ್ಬಂಧ. ಗುರು ದ್ರೋಣಾಚಾರ್ಯರು ಅಸಂಖ್ಯಾತ 'ಏಕಲವ್ಯ' ಶಿಷ್ಯಂದಿರಿಗೆ ಮುಕ್ತವಾಗಿ ವಿದ್ಯೆ ನೀಡಿದ ದಿನವೇ ಗುರುಕುಲ ಪದ್ಧತಿ ಸಾರ್ಥಕ ಎನಿಸಿಕೊಳ್ಳುತ್ತದೆ. (ಗುರು ದಕ್ಷಿಣೆಯ ಹಂಗಿಲ್ಲದೆ)

ಅಂತಹದೊಂದು ಸಾರ್ಥಕವಾದ, ಅಪರೂಪದ, ಗುರುಕುಲ ಪದ್ಧತಿ ಹುಟ್ಟುಹಾಕಿ ಅಸಂಖ್ಯಾತ ಏಕಲವ್ಯರಿಗೆ ಮುಕ್ತ ಸಂಗೀತ ಶಿಕ್ಷಣ ನೀಡಿದವರು ನಮ್ಮ ಕಾಲದ ಮಹಾನ್ ಗುರು ಪಂ. ಪಂಚಾಕ್ಷರಿ ಗವಾಯಿಗಳು. ಅಂತಹ ಗುರುಕುಲ ಪದ್ಧತಿಗೆ ಸಾರ್ವತ್ರಿಕ ಶಿಕ್ಷಣದ ಸ್ವರೂಪ ದಕ್ಕಿಸಿಕೊಟ್ಟವರು ಪಂ. ಪುಟ್ಟರಾಜ ಗವಾಯಿಗಳು. ಹುಟ್ಟು ಕುರುಡರಾದ ಪಂ. ಪಂಚಾಕ್ಷರಿ ಗವಾಯಿಗಳು, ಪಂ. ಪುಟ್ಟರಾಜ ಗವಾಯಿಗಳು ಜೋಳಿಗೆ ಹಿಡಿದು ಜಗತ್ತಿಗೆ ಸಂಗೀತದ ಬೆಳಕ ನೀಡಿದವರು. ಪಂ. ಪಂಚಾಕ್ಷರಿ ಗವಾಯಿಗಳು ಸ್ವತಃ ಮಹಾನ್ ಸಂಗೀತಗಾರರು, ಅಷ್ಟಕ್ಕೆ ತೃಪ್ತಿ ಪಡದ ಅವರು ಪಂ. ಪುಟ್ಟರಾಜ ಗವಾಯಿಗಳು ಸೇರಿದಂತೆ ಅಸಂಖ್ಯಾತ ಶಿಷ್ಯರನ್ನು ನಾಡಿಗೆ ನೀಡಿದರು. ಸಂಗೀತ ಶಿಕ್ಷಣವನ್ನು ಅನ್ನದಾಸೋಹದ ಜೊತೆಗೆ ಸಾರ್ವತ್ರಿಕಗೊಳಿಸಿದರು. ಎಲ್ಲ ಸಮುದಾಯ, ಪ್ರಾಂತಗಳ ಏಕಲವ್ಯರಿಗೆ ಸಂಗೀತ ಶಿಕ್ಷಣ ಮುಕ್ತಗೊಳಿಸಿದರು. ಗದುಗಿನ ವೀರೇಶ್ವರ ಪುಣ್ಯಾಶ್ರಮ ಸಂಗೀತ ಶಿಕ್ಷಣದ ತವರೂರಾಯಿತು.

ಡಾ॥ ಪುಟ್ಟರಾಜ ಗವಾಯಿಗಳು ಉಭಯಗಾನ ವಿಶಾರದರು ಸಿತಾರ, ತಬಲಾ, ಸಾರಂಗಿ, ಹಾರ್ಮೋನಿಯಂ, ವಾಯಿಲಿನ್ ಸೇರಿದಂತೆ ಹದಿನಾಲ್ಕಕ್ಕೂ ಹೆಚ್ಚು ವಾದ್ಯಗಳನ್ನು ಪರಿಣಿತಿಯೊಂದಿಗೆ ನುಡಿಸುತ್ತಿದ್ದರು. ವ್ಯಕ್ತಿಗತ ಸಾಧನೆ

ಗೈಯುವವರಿಗೆ ಇಷ್ಟು ಸಾಕು. ಆದರೆ ಪಂ. ಪುಟ್ಟರಾಜ ಗವಾಯಿಗಳಿಗೆ ಕರ್ನಾಟಕದ ತುಂಬ ಸಂಗೀತ ಪಸರಿಸಬೇಕಿತ್ತು. ಭಿಕ್ಷೆ ಬೇಡಿ ಬದುಕುವ ಕುರುಡರು, ಕುಂಟರು, ಎಲ್ಲ ಜಾತಿ-ಧರ್ಮದ ಬಡವರು ಮತ್ತು ಶಿಕ್ಷಣ ದಕ್ಕದೇ ಕೈಚೆಲ್ಲಿ ಕೂತವರ ಕೈಗೆ 'ತಂಬೂರಿ' ನೀಡಿ ಸ್ವಾಭಿಮಾನದಿಂದ ಸ್ವಾವಲಂಬಿಯಾಗಿ ಬದುಕುವುದನ್ನು ಕಲಿಸಿಕೊಟ್ಟವರು ಪಂ. ಪುಟ್ಟರಾಜ ಗವಾಯಿಗಳು. ಅನ್ನ ದಾಸೋಹ, ಅಕ್ಷರ ದಾಸೋಹ ಮತ್ತು ಸಂಗೀತ ದಾಸೋಹವನ್ನು ಸಾರ್ವತ್ರಿಕಗೊಳಿಸಿದ ಅವರು ಗದುಗಿನಲ್ಲಿ ಪೂಜ್ಯ ಪಂಚಾಕ್ಷರಿ ಗವಾಯಿಗಳ ಸಂಗೀತ ಮಹಾವಿದ್ಯಾಲಯ ಸ್ಥಾಪಿಸಿ ಪದವಿ, ಸ್ನಾತಕೋತ್ತರ ಪದವಿಗೆ ಅವಕಾಶ ಕಲ್ಪಿಸಿದ್ದಾರೆ. ಗುರುಕುಲ ಪದ್ಧತಿಯ ಸಂಗೀತ ಶಿಕ್ಷಣದ ವ್ಯಾಖ್ಯಾನವನ್ನೇ ಬದಲಿಸಿದ ಗವಾಯಿಗಳು ಆಧುನಿಕ ಸಂಗೀತ ಶಿಕ್ಷಣದ ಮುಂದಿರುವ ಸವಾಲುಗಳಿಗೆ ಸಮರ್ಪಕ ಉತ್ತರವೆನ್ನುವಂತೆ ಶ್ರೇಷ್ಠ ಮಾದರಿಗಳನ್ನು ರೂಪಿಸಿದ್ದಾರೆ.

ಆಧುನಿಕ ಶಿಕ್ಷಣದ ಲೋಪಗಳ ಪಟ್ಟಿ ಮಾಡುವಾಗ "ಶಾಲೆ-ಕಾಲೇಜು ಮತ್ತು ವಿಶ್ವವಿದ್ಯಾಲಯಗಳು ನಿರುದ್ಯೋಗಿಗಳನ್ನು ಸೃಷ್ಟಿ ಮಾಡುವ ಕಾರ್ಖಾನೆಗಳಾಗಿವೆ" ಎಂದು ವ್ಯಂಗ್ಯವಾಡುತ್ತಾರೆ. ವೀರೇಶ್ವರ ಪುಣ್ಯಾಶ್ರಮದಲ್ಲಿ ಸಂಗೀತ ಶಿಕ್ಷಣ ಪಡೆದು ಹೊರಬಂದ ಯಾರೊಬ್ಬರೂ ನಿರುದ್ಯೋಗಿಯಾಗಿ ಉಳಿಯುವುದಿಲ್ಲ. ಅಲ್ಲಿ ಕಲಿಯುವ ಎಲ್ಲರಿಗೂ ಅಂಕಪತ್ರಗಳ ಜೊತೆಗೆ ಅತ್ಯುತ್ತಮ ಸಂಗೀತ ಶಿಕ್ಷಣ ದೊರೆಯುತ್ತದೆ. ಅಂಧರು ಸೇರಿ ಎಲ್ಲ ಬಗೆಯ ದಿವ್ಯಾಂಗರು ಅಲ್ಲಿ ಸಂಗೀತ ಶಿಕ್ಷಣ ಪಡೆದು ಸಂಗೀತ ಪಾಠ ಹೇಳಿಕೊಡುವುದರಿಂದ ಹಿಡಿದು ಸರಕಾರಿ ನೌಕರಿ ಪಡೆಯುವವರೆಗೆ, ಸಂಗೀತ ಕಾರ್ಯಕ್ರಮ ನೀಡಿ ಹಣ ಸಂಪಾದನೆ ಮಾಡುವುದರಿಂದ ಹಿಡಿದು ಕಂಪನಿ ನಾಟಕಗಳಿಗೆ ಸಂಗೀತ ನೀಡುವವರೆಗೆ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ವೀರೇಶ್ವರ ಪುಣ್ಯಾಶ್ರಮದಲ್ಲಿ ಸಂಗೀತ ಕಲಿತ ಪಂ. ಎಂ. ವೆಂಕಟೇಶಕುಮಾರ, ಪಂ. ಡಿ. ಕುಮಾರದಾಸ್, ಪಂ. ಗುರುಸ್ವಾಮಿ ಕಲಕೇರಿ, ಸಿದ್ದರಾಮ ಕೋರವಾರ, ಪಂ. ಶೇಖ್ ಅಬ್ದುಲಾ ಖಾಜಿ ಸೇರಿದಂತೆ ನೂರಾರು ಜನ ಸಂಗೀತಗಾರರು ಉತ್ತಮ ಶಿಕ್ಷಕರಾಗಿ, ಪ್ರಾಧ್ಯಾಪಕರಾಗಿ, ಸಂಶೋಧಕರಾಗಿ, ಅತ್ಯುತ್ತಮ ಪ್ರದರ್ಶನ ನೀಡುವ ಖ್ಯಾತ ಸಂಗೀತಗಾರರಾಗಿ ಹೊರಹೊಮ್ಮಿದ್ದಾರೆ. ಪಂ. ಪುಟ್ಟರಾಜ ಗವಾಯಿಗಳ ಈ ಸಾಧನೆ ಆಧುನಿಕ ಸಂಗೀತ ಶಿಕ್ಷಣದ ಸವಾಲುಗಳಿಗೆ ಪ್ರತ್ಯುತ್ತರವೆನ್ನುವಂತೆ ಜ್ವಲಂತ ನಿದರ್ಶನವಾಗಿ ನಿಲ್ಲುತ್ತದೆ.

ಆಧುನಿಕ ಸಂಗೀತ ಶಿಕ್ಷಣಕ್ಕೆ ಶ್ರೇಷ್ಠ ಕಲಾವಿದರನ್ನು ಸೃಷ್ಟಿ ಮಾಡುವ ಶಕ್ತಿ ಇಲ್ಲ ಎಂದು ಆಪಾದಿಸಲಾಗುತ್ತಿದೆ. 'ಶ್ರೇಷ್ಠ ಕಲಾವಿದ' ಎಂಬ ಪದ ಕಾಲದೇಶ ಬದ್ಧವಾದುದು ಮತ್ತು ವಿವಿಧ ಕಲಾ ಪ್ರಕಾರಗಳಲ್ಲಿ ತರತಮ ಭಾವ ಹುಟ್ಟಿಸುವಂತಹದು. ಶ್ರೇಷ್ಠ ಸಂಗೀತ ಶಿಕ್ಷಣ ನೀಡುವ ಸಾಮರ್ಥ್ಯ ಶಾಲಾ ಕಾಲೇಜುಗಳಲ್ಲಿ ಪಾಠ ಮಾಡುವ ಶಿಕ್ಷಕರಿಗಿಲ್ಲ ಎಂದೂ ದೂರಲಾಗುತ್ತದೆ. ಅಪ್ಪಟ ಗುರುಕುಲ ಪದ್ಧತಿಯಲ್ಲಿ ಗುರುಗಳಾದವರು ಶಿಸ್ತುಬದ್ಧ ತಾಲೀಮು ಮಾಡಿಸುತ್ತಿದ್ದರು. ಶ್ರದ್ಧೆಯೊಂದು

## ಹೊಸ ಗಾದೆ

ಸತ್ಯಕೆ ಸುಖವಿಲ್ಲ
ಸುಳ್ಳಿಗೆ ಸಾವಿಲ್ಲ
ಧರ್ಮಕ್ಕೆ ನ್ಯಾಯವಿಲ್ಲ
ಅಧರ್ಮಕ್ಕೆ ಮರಣವಿಲ್ಲ

**ಶೋಭಾ ಪ್ರಮೋದ್**
ಮಾಣ್‌ಗಾವ್ – ೪೦೨ ೧೦೪, ಮಹಾರಾಷ್ಟ್ರ

ಇದ್ದರೆ ಶಾಲಾ ಕಾಲೇಜುಗಳಲ್ಲಿ ಕಲಿಯುವ ಸಂಗೀತ ವಿದ್ಯಾರ್ಥಿಗಳು ಕಟ್ಟುನಿಟ್ಟಿನ ತಾಲೀಮು ರೂಢಿಸಿಕೊಳ್ಳಬಹುದು. ಆಗ ಗುರುವಾದವರು ಕೆಲ ಅಪರೂಪದ ರಾಗ ಬಂದೀಶಗಳನ್ನು ಯಾರಿಗೂ ಹೇಳಿಕೊಡದೆ ಮುಚ್ಚಿಡುತ್ತಿದ್ದರು. ಪಂ. ವಿಷ್ಣು ದಿಗಂಬರ ಭಾತಖಂಡೆ ಮತ್ತು ಪಂ. ಡಿ. ವಿ. ಪಲುಸ್ಕರ್ ಅವರು ಅಪರೂಪದ, ಮಹತ್ವದ ಬಂದೀಶಗಳನ್ನು, ರಾಗಗಳನ್ನು ಶ್ರಮವಹಿಸಿ ಸಂಗ್ರಹಿಸಿದ್ದಾರೆ. ಮಾತ್ರವಲ್ಲ ಎಲ್ಲರಿಗೂ ದೊರೆಯಲೆಂದು ಹಲವು ಸಂಪುಟಗಳಲ್ಲಿ ಪ್ರಕಟಿಸಿದ್ದಾರೆ. ಅದೂ ಅತ್ಯಂತ ವೈಜ್ಞಾನಿಕವಾಗಿ ಪರಿಷ್ಕರಿಸಿ ನೀಡಿದ್ದಾರೆ.

ಕರ್ನಾಟಕದಲ್ಲಿ ಪಂ. ಪಂಚಾಕ್ಷರಿ ಗವಾಯಿಗಳು ಮತ್ತು ಪಂ. ಪುಟ್ಟರಾಜು ಗವಾಯಿಗಳು ಸಂಗೀತ ಶಿಕ್ಷಣವನ್ನು ಸಾರ್ವತ್ರಿಕಗೊಳಿಸಿದಂತೆ ಅಖಿಲ ಭಾರತ ಮಟ್ಟದಲ್ಲಿ ಪಂ. ವಿಷ್ಣು ದಿಗಂಬರ ಭಾತಖಂಡೆ ಮತ್ತು ಪಂ. ಡಿ. ವಿ. ಪಲುಸ್ಕರ್ ಅವರು ಸಂಗೀತ ಶಿಕ್ಷಣವನ್ನು ಎಲ್ಲರಿಗೂ ದೊರೆಯುವಂತೆ ಮಾಡಿದರು. ಮುಂಬಯಿಯಲ್ಲಿ ಅಖಿಲ ಭಾರತ ಗಂಧರ್ವ ಮಹಾವಿದ್ಯಾಲಯವನ್ನು ಸ್ಥಾಪಿಸುವ ಮೂಲಕ ಸಂಗೀತ ಶಿಕ್ಷಣವನ್ನು ವ್ಯಾಪಕಗೊಳಿಸಿ ಮಡಿವಂತಿಕೆಯ ಇಕ್ಕಟ್ಟಿನಿಂದ ಹೊರತಂದರು. ಆಧುನಿಕ ಸಂಗೀತ ಶಿಕ್ಷಣದ ಸಾಧ್ಯತೆ ಮತ್ತು ಗುರುಕುಲ ಪದ್ಧತಿಯ ಸಂಗೀತ ಶಿಕ್ಷಣದ ಮಿತಿಗಳಿಗೆ ಕನ್ನಡಿ ಹಿಡಿಯುವಂತೆ ಅಖಿಲ ಭಾರತ ಗಂಧರ್ವ ಮಹಾವಿದ್ಯಾಲಯ ಕಳೆದ ನಾಲ್ಕು ದಶಕಗಳಿಂದ ಮಾದರಿಗಳನ್ನು ಸೃಷ್ಟಿಸುತ್ತಿದೆ ಮತ್ತು ನಿರಂತರವಾಗಿ ಕ್ರಿಯಾಶೀಲತೆಯಿಂದ ತೊಡಗಿಸಿಕೊಂಡಿದೆ.

ಗುರುಕುಲ ಪದ್ಧತಿಯ ಸಂಗೀತ ಶಿಕ್ಷಣ ನಮ್ಮ ಕಾಲಕ್ಕೆ ಪ್ರಸ್ತುತವಾಗಬೇಕಾದರೆ; ಅದು ಮಡಿವಂತಿಕೆಯ ಬೇಲಿ ದಾಟಿ ಜನತಂತ್ರದ ಆಶಯಗನುಗುಣವಾಗಿ ಕಾರ್ಯ ನಿರ್ವಹಿಸಬೇಕು. ಅಪ್ಪ, ಮಗ, ಮೊಮ್ಮಕ್ಕಳಾಚೆ ಬೀದಿ ಮಕ್ಕಳಿಗೂ ಶ್ರೇಷ್ಠ ಸಂಗೀತ ದೊರೆಯುವಂತಾಗಬೇಕು, ಗುರು ದ್ರೋಣಾಚಾರ್ಯರು ಕೌರವ, ಪಾಂಡವರ ಹಂಗಿನರಮನೆ ತೊರೆದು ವಿದ್ಯೆಯ ತುಡಿತದ ಅಸಂಖ್ಯಾತ ಏಕಲವ್ಯರಿಗೆ ಶಿಕ್ಷಣ ನೀಡುವಂತಹ ಪವಾಡ ಜರುಗಬೇಕು. ಹೀಗೆ ಮಾಡದಿದ್ದರೆ "ಶ್ರೇಷ್ಠ ಗುರುವಿನ ಸಂಗೀತ" ಅಯೋಗ್ಯರಿಗೆ ರವಾನೆಯಾಗಿ ಕಾಲಾನಂತರದಲ್ಲಿ ಆ ಪರಂಪರೆಯೇ ನಾಶವಾಗುತ್ತದೆ. ಸಂಗೀತ ಸೇರಿದಂತೆ ಯಾವುದೇ ಶ್ರೇಷ್ಠ ವಿದ್ಯೆ ಕುಟುಂಬ, ಜಾತಿ ವ್ಯಾಮೋಹ ದಾಟಿ ಅರ್ಹ ವಾರಸುದಾರರಿಗೆ ವರ್ಗಾವಣೆಯಾದರೆ ಶ್ರೇಷ್ಠ ಪರಂಪರೆಯ ಸಾತತ್ಯ ಮುಂದಿನ ಜನಾಂಗಕ್ಕೂ ತಲುಪುತ್ತದೆ. ಸಂಗೀತ, ಯಂತ್ರ, ತಂತ್ರ, ಮಂತ್ರ ಹಾಗೂ ನಾಟಿ ವೈದ್ಯ ವಿದ್ಯೆ ಸೇರಿದಂತೆ ಹಲವು ಜ್ಞಾನ ಪರಂಪರೆಗಳು 'ಶ್ರೇಷ್ಠ ವ್ಯಕ್ತಿ'ಗಳೊಂದಿಗೇ ಅವಸಾನ ಹೊಂದಿವೆ. ಗುರುಕುಲ ಪದ್ಧತಿಯ ಸಂಗೀತ ಶಿಕ್ಷಣ ಹಮ್ಮು ಬಿಮ್ಮು ತೊರೆದು ಆಧುನಿಕ ಸಂಗೀತ ಶಿಕ್ಷಣದೊಂದಿಗೆ ಕೈಕುಲುಕಿದರೆ ಉಳಿಯುತ್ತದೆ ಮತ್ತು ಬೆಳೆಯುತ್ತದೆ. ಎಲ್ಲ ಕಾಲಕ್ಕೂ ಪ್ರಸ್ತುತವಾಗಬೇಕಾದರೆ, ಸಮಕಾಲೀನ ಅಗತ್ಯಗಳಿಗೆ ಸ್ಪಂದಿಸಬೇಕಾಗುತ್ತದೆ. ಕಾಲಪ್ರವಾಹ ಯಾವುದನ್ನೂ ಲೆಕ್ಕಿಸದೇ ಹರಿಯುತ್ತಲೇ ಇರುತ್ತದೆ.

ಆಧುನಿಕ ಸಂಗೀತ ಶಿಕ್ಷಣವೂ ತಾನೇ ಸೃಷ್ಟಿಸಿಕೊಂಡ ಭ್ರಮೆ ಮತ್ತು ಮಿತಿಗಳಿಂದ ಹೊರಬರಬೇಕಿದೆ. ಪರೀಕ್ಷೆ ಮತ್ತು ಅಂಕಗಳು ಆಧುನಿಕ ಸಂಗೀತ ಶಿಕ್ಷಣದ ಒಂದು ಸಣ್ಣ ಸಾಧ್ಯತೆ. ಅದೇ ಪ್ರತಿಭೆ ಅಳೆಯುವ ಆತ್ಯಂತಿಕ ಮಾನದಂಡವಾಗಬಾರದು. ಸಂಗೀತವನ್ನು ಸೃಜನಾತ್ಮಕವಾಗಿ ಬಳಸಿಕೊಳ್ಳುವ ಕಲೆಗೊತ್ತಿರುವ ವಿದ್ಯಾರ್ಥಿಗೆ ಅದು ಯಾವತ್ತೂ ಕಲ್ಪವೃಕ್ಷವೇ. ಸಂಗೀತ ಕಲಿಸುವ ಶಿಕ್ಷಕರಿಗೆ ಗುರುದ್ರೋಣರ ಶ್ರದ್ಧೆ, ಕಲಿಯುವ ವಿದ್ಯಾರ್ಥಿಗೆ 'ಏಕಲವ್ಯನ' ಹಂಬಲ, ತುಡಿತ ಇದ್ದಾಗ ಮಾತ್ರ ಆಧುನಿಕ ಸಂಗೀತ ಶಿಕ್ಷಣವೂ ಶ್ರೇಷ್ಠವಾದುದನ್ನು ರೂಪಿಸಬಲ್ಲದು. ಇಂದಿನ ಸಾಹಿತ್ಯ, ವಿಜ್ಞಾನ, ಮಾನವಿಕ ವಿಷಯದ ಅಧ್ಯಾಪಕರು ಬಹುಶಿಸ್ತೀಯ ನೆಲೆಯಲ್ಲಿ ಹೆಚ್ಚು ಸೃಜನಾತ್ಮಕವಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಆದರೆ ಸಂಗೀತ ಶಿಕ್ಷಣದಲ್ಲಿ ಕಂಪಾರ್ಟ್‌ಮೆಂಟ್‌ಗಳು ಪರಸ್ಪರ ಸಂಬಂಧವಿಲ್ಲದೆ ಕಾರ್ಯ ನಿರ್ವಹಿಸುತ್ತಿವೆ.

ಹಿಂದಿನ ಕಾಲದಲ್ಲಿ ಗುರು, ಶಿಷ್ಯನಿಗೆ ಸಂಗೀತ ಕಲಿಸುತ್ತಿದ್ದ, ಶಿಷ್ಯನಾದವ ಹಾಡುತ್ತಾ ಹೋಗುತ್ತಿದ್ದ. ಆಧುನಿಕ ಸಂಗೀತ ಶಿಕ್ಷಣದಲ್ಲಿ ಗುರು ಏಕಕಾಲಕ್ಕೆ ಮಹಾನ್ ಗಾಯಕ, ಉತ್ತಮ ಬೋಧಕ, ವಾಗ್ಮಿ, ಶ್ರೇಷ್ಠ ಲೇಖಕ-ಸಂಶೋಧಕನಾಗುವ ಅನಿವಾರ್ಯತೆ ಇದೆ. ಆಗ ಮಾತ್ರ ಸಂಗೀತದ ಬಹುದೊಡ್ಡ ಪರಂಪರೆಯನ್ನು ಸೃಜನಾತ್ಮಕಗೊಳಿಸುತ್ತಲೇ ಸಮರ್ಥವಾಗಿ ಮುಂದಿನ ತಲೆಮಾರಿಗೆ ವರ್ಗಾಯಿಸಬಹುದಾಗಿದೆ. ಗುರುಕುಲ ಪದ್ಧತಿಯ ಒಣಶ್ರೇಷ್ಠತೆಯ ವ್ಯಸನ ಮತ್ತು ಆಧುನಿಕ ಸಂಗೀತ ಶಿಕ್ಷಣದ ಟೊಳ್ಳು ಹಮ್ಮುಬಿಮ್ಮು ತಗ್ಗಿದಾಗಲೇ 'ಶ್ರೇಷ್ಠವೂ, ಸಮಕಾಲೀನವೂ' ಆದ ಹೊಸದು ಹುಟ್ಟಿಕೊಳ್ಳುತ್ತದೆ. ಶ್ರೇಷ್ಠವಾದುದನ್ನು ಸಮಕಾಲೀನಗೊಳಿಸಿ ಮತ್ತಷ್ಟು ಶ್ರೇಷ್ಠಗೊಳಿಸಿದ ಪಂ. ಪಂಚಾಕ್ಷರಿ ಗವಾಯಿ ಮತ್ತು ಪಂ. ಪುಟ್ಟರಾಜ ಗವಾಯಿಗಳು ಸದಾಕಾಲ ಸ್ತುತ್ಯರ್ಹರು.

**ಡಾ॥ ಜಯದೇವಿ ಜಂಗಮಶೆಟ್ಟಿ**
ಸಹಾಯಕ ಪ್ರಾಧ್ಯಾಪಕಿ, ಸಂಗೀತ ಮತ್ತು ನೃತ್ಯ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸುಡು ಬೇಸಿಗೆಯ ಒಂದು ಸಂಜೆ. ಬಿಸಿಗಾಳಿಯ ಬಿಸಿ ಕಡಿಮೆಯಾಗಿ ಸ್ವಲ್ಪ ತಂಪು ಹತ್ತಿದೆ. ಬಾಡಿದ ಮುಖಹೊತ್ತ ಗಿಡಗಳು ತಲೆ ಕೆಳಗೆಮಾಡಿವೆ. ಆ ಊರಿಗೆ ಒಂದು ಮೂಲೆಯಲ್ಲಿ ಬೀಸಿಹಾಕಿದಂತೆ ಮಾದಿಗರ ಕಾಲೊನಿ. ಆ ಮಾದಿಗರ ಕಾಲೊನಿಯ ಇನ್ನೊಂದು ಮೂಲೆಯ ಮೇಲೆ ಮುತ್ತಯ್ಯನ ಮನೆ. ಮನೆಯೆಂದರೆ ಗಾಜಿನ ಅರಮನೆಯೋ, ಅಂದದ ಬಂಗಲೆಯೋ ಅಲ್ಲ. ಗಾಳಿಗೆ ಗಲಗಲ ಎನ್ನುವ, ಮಳೆಗೆ ಪಟಪಟ ಎನ್ನುವ ತಾಳೆ ಜಾತಿ ಗರಿಯ ಗುಡಿಸಲು. ಆ ಗುಡಿಸಲಿಗೆ ಯಜಮಾನ ಮುತ್ತಯ್ಯ. ಮುತ್ತಯ್ಯ, ಹೆಂಡತಿ ಲಕ್ಷ್ಮಮ್ಮ ಕೂಲಿ ನಾಲಿ ಮಾಡಿ ದಿನ ಕಳೆಯುತ್ತಿದ್ದಾರೆ. ಮುತ್ತಯ್ಯ ಮಗಳಿಗೆ ನಾಲ್ಕು ವರ್ಷದ ಹಿಂದೆ ಮದುವೆ ಮಾಡಿದ್ದಾನೆ. ಈಗ ಮನೆಯಲ್ಲಿ ಮುತ್ತಯ್ಯನ ಮುದ್ದಿನ ಮಗ ಧನಂಜಯನದ್ದೇ ರಾಜ್ಯ. ಇದೇನು? ಮಾದಿಗ ಮುತ್ತಯ್ಯನ ಮಗನಿಗೆ ಈ ಹೆಸರೇನು? ಗಂಗ ಎಂತಲೋ, ಎಂಕ ಎಂತಲೋ ಇರಬೇಕಿತ್ತೇ ಎಂದು ಯಾರಿಗಾದರೂ ಅನಿಸುತ್ತದೆ. ನಿಜ, ಆ ಹೆಸರು ಮುತ್ತಯ್ಯನ ತಂದೆಗೆ ತಂದೆ ಎಂದರೆ, ಮುತ್ತಯ್ಯನ ತಾತನ ಕಾಲದ ದೊರೆಯ ಹೆಸರು. ಮುತ್ತಯ್ಯ ಮಗನು ಕೂಡ ದೊರೆಯಾಗಬೇಕೆಂದು ಈ ಹೆಸರು ಇಟ್ಟಿದ್ದಾನೆ. ಧನಂಜಯ ಬಹಳ ದೊಡ್ಡವನೇನಲ್ಲ. ಹದಿನೆಂಟಕ್ಕೆ ಹೆಚ್ಚು, ಇಪ್ಪತ್ತಕ್ಕೆ ಕಡಿಮೆ. ಅಪ್ಪ ಅಮ್ಮ ಮಾಡುತ್ತಿದ್ದ ಕೂಲಿಯ ಹಣ ಧನಂಜಯನ ಓದಿಗೆ ಸಾಕಾಗಲಿಲ್ಲ. ಅದಕ್ಕೇ ಅವನು ತಂದೆತಾಯಿಯರನ್ನವಲಂಬಿಸದೆ ಚಿಕ್ಕಂದಿನಿಂದಲೇ ಸರ್ಕಾರಿ ಹಾಸ್ಟೆಲಿನಲ್ಲಿದ್ದುಕೊಂಡೇ ಓದಿದ.

'ಧನಂಜಯ' ಈ ಹೆಸರೆಂದರೆ ಮಾದಿಗರ ಕಾಲೊನಿಯೇ ಅಲ್ಲ, ಊರೆಲ್ಲರಿಗೂ ಪರಿಚಿತವೇ! ಏಕೆಂದರೆ ಧನಂಜಯ ಎಲ್ಲದರಲ್ಲೂ ಎತ್ತಿದ ಕೈ. ಓದಿನಲ್ಲಿ ಮಾತ್ರವಲ್ಲ, ಬೇಸಾಯದ ಕೆಲಸದಿಂದ ಆರಂಭಿಸಿದರೆ ಸಾವಿನ ಸಂದರ್ಭದ ತಮಟೆ ಬಾರಿಸುವವರೆಗೂ, ಅವನು ಎಲ್ಲದರಲ್ಲೂ ಎಲ್ಲರಿಗಿಂತಲೂ ಮುಂಚೂಣಿಯಲ್ಲಿರುತ್ತಿದ್ದ. ಇದು ಸುತ್ತಲಿನ ಹತ್ತು ಊರುಗಳ ಜನಕ್ಕೂ ತಿಳಿದಿರುವ ವಿಷಯವೇ! ಅದು ಹೇಗೆ ತಿಳಿದಿರುತ್ತದೆಂದುಕೊಳ್ಳುವಿರೇನೋ! ಅವನು ಹತ್ತನೇ ತರಗತಿಯಲ್ಲಿ ಅತ್ಯುತ್ತಮ ಅಂಕ ಗಳಿಸಿದವನು. ಜಿಲ್ಲಾಧಿಕಾರಿಯಿಂದ ಬಹುಮಾನ ಪಡೆದಿದ್ದಾನೆ. ಅದು ಅವನ ಹಿರಿಮೆ. ಇನ್ನು ನಿಜವಾದ ಕಥೆ ಆರಂಭವಾಗುತ್ತಿದೆ. ಸದ್ದು ಮಾಡಬೇಡಿ. ಸ್ವಲ್ಪ ಮನಸ್ಸಿಟ್ಟು ಕೇಳಿರಿ.

ಅಗೋ ಬೈಗುಳ ಕೇಳಿಸುತ್ತಿದೆ..!

"ನೀ.. ಮ್ಮನ್ ಲಂವಡಿಕೇ, ಏನು ಬಹಳ ಮೆರಿತಿದ್ದೀಯಾಲೋ? ಇನ್ನು ನಿನ್ನಂತಹವನು ಇಲ್ಲವೆಂದುಕೊಳ್ಳುತ್ತಿದ್ದೀಯೇನೋ! ಹೇಳುತ್ತಿದ್ದರೆ ಕೇಳುತ್ತಿಲ್ಲ"ವೆಂದು ಮುತ್ತಯ್ಯ ಮಗನಿಗೆ ಬಯ್ಯುತ್ತಿದ್ದಾನೆ. ಸ್ವಲ್ಪ ಹೊತ್ತು ಗುಡಿಸಿಲಿನಲ್ಲಿ ನಿಶ್ಶಬ್ದ. ನಿಧಾನವಾಗಿ ಬಾಯಿ ಬಿಟ್ಟ ಧನಂಜಯ, "ಹಾಗಲ್ಲ ಅಪ್ಪ, ನಿನಗೆ ಗೊತ್ತಿಲ್ಲ, ಪಟ್ಟಣಕ್ಕೆ ಹೋಗಿ ಓದಿದರೆ ದೊಡ್ಡ ಕೆಲಸ ಸಿಗುತ್ತೆ" ಎಂದ.

"ನಿನ್ನ ಕೆಲಸದ ವಿಚಾರ ದೇವರಿಗೇ ಗೊತ್ತು, ಮೊದಲು ಖರ್ಚಿನ ವಿಚಾರ ಹೇಳು."

"ಎಲ್ಲ ಸರ್ಕಾರವೇ ಭರಿಸುತ್ತೆ. ಪ್ರಯಾಣದ ಖರ್ಚು ವೆಚ್ಚ ಮಾತ್ರ ಕೊಟ್ಟರೆ ಸಾಕು, ಅದು ಕೂಡ ಹಬ್ಬಗಳಿಗೋ, ರಜೆಗಳಿಗೋ ನಾನು ಮನೆಗೆ ಬರುವುದಕ್ಕೆ."



ತೆಲುಗು ಮೂಲ
**ಪಸುನೂರಿ ರವೀಂದರ್**

ಕನ್ನಡಕ್ಕೆ
**ಎಂ. ಜಿ. ಶುಭಮಂಗಳ**

**ತಿಂಗಳ ಕಥೆ**

# ನನ್ನ ಧನಂಜಯ

ಧನಂಜಯನ ಮೇಲೆ ಮುತ್ತಯ್ಯನಿಗೆ ಕೆರೆ ಕಟ್ಟೆಯೊಡೆದು ಕೋಡಿ ಹರಿಯುವಷ್ಟು ಪ್ರೀತಿ ಉಕ್ಕಿ ಉಕ್ಕಿ ಬರುತ್ತಿದೆ. ಈಗಲೇ ಮಗನನ್ನು ಅಪ್ಪಿ ಮುದ್ದಾಡಬೇಕೆನಿಸುತ್ತಿದೆ. ಸರಸರನೆ ಮನೆ ದಾರಿ ಹಿಡಿದನು. ದಾರಿಯಲ್ಲಿ ಕಂಡವರಿಗೆಲ್ಲ ಹೇಳಬೇಕೆಂದುಕೊಂಡನಾದರೂ, ನರಸಿರೆಡ್ಡಿ ಪಟೇಲನ ಮಾತುಗಳು ನೆನಪಿಗೆ ಬಂದಿತು. ನೂರು ಚೀಲ ಭತ್ತ ಹೊರುವಾಗ ಆಗುವಷ್ಟು ಕಷ್ಟದಿಂದ ಈ ಗುಟ್ಟನ್ನು ಒಳಗೇ ಮುಚ್ಚಿಟ್ಟುಕೊಂಡ ಮುತ್ತಯ್ಯ.

"ಮಗನೇ ಧನಂಜಯ ಎಲ್ಲಿದ್ದೀಯಪ್ಪಾ?" ಮನೆ ಇನ್ನೂ ಸ್ವಲ್ಪ ದೂರದಲ್ಲಿರುವಾಗಲೇ ಅರಚುತ್ತಾ ಹೋದ ಮುತ್ತಯ್ಯ. ಹೀಗೆ ಮುತ್ತಯ್ಯ ಗಾಳಿಯಲ್ಲಿ ತೇಲಾಡಿದಂತೆ ಮಗನಿಗಾಗಿ ಬರುತ್ತಿದ್ದರೆ, ಮಗ ಗೊಡ್ಡಲಿಯಿಂದ ಕಟ್ಟಿಗೆ ಒಡೆಯುವ ಕೆಲಸದಲ್ಲಿ ತಲ್ಲೀನನಾಗಿದ್ದಾನೆ. ಅಪ್ಪನ ಕೂಗು ಕೇಳಿ ತಲೆ ಮೇಲೆತ್ತಿದ ಧನಂಜಯ.

"ಅದೇ, ಆ ಪ್ರಯಾಣದ ವೆಚ್ಚವೂ ನನ್ನಿಂದ ಕೈಲಿ ಆಗುವುದಿಲ್ಲವೆನ್ನುತ್ತಿದ್ದೇನೆ. ಇನ್ನು ನಿನ್ನಿಷ್ಟ. ಹೇಳುವುದನ್ನು ಹೇಳಿದ್ದೇನೆ. ನಮ್ಮ ಗ್ರಾಮ ಮಂಡಲದಲ್ಲಿಯೇ ನೀನು ಓದಲು ಕಾಲೇಜು ಇರುವಾಗ, ನಿನ್ನ ಪಟ್ಟಣದ ಶೋಕಿಯೇನೋ, ನನಗೊಂದೂ ಗೊತ್ತಾಗುತ್ತಿಲ್ಲ" ಎಂದುಕೊಳ್ಳುತ್ತ ಮನೆ ಮುಂದೆ ನಿಲ್ಲಿಸಲಾಗಿದ್ದ ಚಿಕ್ಕ ಹಗ್ಗದ ಮಂಚವನ್ನು ಬಗ್ಗಿಸಿಕೊಂಡು ಮಲಗಿದ ಮುತ್ತಯ್ಯ. ಆ ದಿನವೇ ಇಂಟರ್ ಪರೀಕ್ಷೆಯ ರಿಸಲ್ಟ್ ಬಂದಿದೆ. ಧನಂಜಯ ಕೂಡ ಪಾಸಾಗಿದ್ದಾನೆ. ಆದರೆ ಏನು ಲಾಭ? ಪಟ್ಟಣದಲ್ಲಿ ಪದವಿ ಓದುತ್ತೇನೆ ಎಂದರೆ, ಖರ್ಚು ಎಷ್ಟಾಗುವುದೋ ಎಂದು ಮುತ್ತಯ್ಯ ಮಗನೊಂದಿಗೆ ಜಗಳಕ್ಕಿಳಿದು ಪಟ್ಟಣದ ಆಸೆಯನ್ನು ಮುಚ್ಚಿಹಾಕಲು ನೋಡುತ್ತಿದ್ದಾನೆ. ಅಷ್ಟರಲ್ಲಿಯೇ ಲಕ್ಷ್ಮಮ್ಮ ದೀಪದ ಬೆಳಕಿನಲ್ಲಿ ಹುಣಸೆ ತೊಕ್ಕು ರುಬ್ಬಿ ಮಗನಿಗೆ, ಗಂಡನಿಗೆ ಊಟ ತೆಗೆದುಕೊಂಡು ಬಂದಳು.

"ಏನು ತರಕಾರಿ ಹಾಕಿದ್ದೀಯ ಅಮ್ಮ? ತಂಬಿಗೆಯಲ್ಲಿ ನೀರು ತೆಗೆದುಕೊಂಡು ಕೈ ತೊಳೆಯುತ್ತ ಕೇಳಿದ.

"ತರಕಾರಿ ಎಲ್ಲಿ ಬಂತು ಮಗನೇ, ಬಾವಿಯಲ್ಲಿ ನೀರಿಲ್ಲದೆ ತರಕಾರಿಗೂ ಬರವೇ. ಇನ್ನು ಊರಿನಲ್ಲಿ ಏನಾದರೂ ಕೊಂಡುಕೊಳ್ಳೋಣವೆಂದರೆ ಹಣ ಇಲ್ಲ" ಎಂದಳು ಲಕ್ಷ್ಮಮ್ಮ.

"ಓ ಲಚ್ಚಿ, ಈ ಊಟ ಆ ಬಂಡೆಯ ಮೇಲಿಡು, ಊರಿನೊಳಗೆ ಹೋಗಿಬರಬೇಕು, ಬಂದಮೇಲೆ ತಿನ್ನುತ್ತೇನೆ" ಎಂದ ಮುತ್ತಯ್ಯ.

"ಕತ್ತಲಾಯಿತು! ಈಗೇನು ಕೆಲಸ? ಅದೂ ಇದೂ ಕೆಟ್ಟ ಹುಳಗಳು ಓಡಾಡುವ ಸಮಯದಲ್ಲಿ?"

"ಹೌದು ಕೆಲಸ ಇದೆ."

"ಅಬ್ಬಾ! ನಿನ್ನ ಕೆಲಸ ನನಗೆ ಗೊತ್ತಿಲ್ಲವಾ, ಕಾಲು ಸೇರು ಕುಡಿಯದಿದ್ದರೆ ನಿನಗೆ ನಿದ್ದೆ ಬರುತ್ತಾ." ಗಂಡನ ಮೇಲೆ ಪ್ರೀತಿಯ ಬೈಗುಳ ಬಯ್ಯುತ್ತಿದ್ದಾಳೆ ಲಕ್ಷ್ಮಮ್ಮ.

ಈ ಗಂಡ ಹೆಂಡಿರ ಗಲಾಟೆಯಲ್ಲಿ 'ಅಮ್ಮಾ..' ಎಂದು ಜೋರಾಗಿ ಕೂಗಿದ ಮಗ.

"ಏನೋ? ನಿನ್ನದೊಂದು ಗಲಾಟೆ!" ಲಕ್ಷ್ಮಮ್ಮನಿಗೆ ಗಂಡನ ಮೇಲಿನ ಕೋಪ ಮಗನ ಮೇಲೆ ತಿರುಗಿತು.

"ನನಗೆ ಈ ಹುಣಸೆ ಖಾರದ ಊಟ ಬೇಡವೆಂದೆ ನಲ್ಲವಾ" ಎಂದು ಕೂಗಾಡಿದ ಧನಂಜಯ.

"ಏನಪ್ಪಾ ಮಾಡೋದು..? ಹೇಗೋ ಅನುಸರಿಸಿಕೊಂಡು ತಿನ್ನಪ್ಪಾ! ನಾವೇನು ದೊರೆಗಳಾ? ದುಡೀದಿದ್ದರೆ ಹೊಟ್ಟೆಯ ಮೇಲೆ ತಣ್ಣೀರ ಬಟ್ಟೇನೇ! ... ಸ್ವಲ್ಪ ತಿನ್ನು ಮಗನೇ. ನೀನು ನನ್ನ ಬಂಗಾರ ಅಲ್ವಾ! ನಾಳೆ ಹೇಗಾದರೂ ಮಾಡಿ ತರಕಾರಿ ಹಾಕಿಯೇ ಮಾಡುತ್ತೇನೆ" ಲಕ್ಷ್ಮಮ್ಮ ಮಗನನ್ನು ಮುದ್ದು ಮಾಡುತ್ತಿದ್ದಾಳೆ.

ಆದರೆ ಧನಂಜಯ ಎಲ್ಲದರಲ್ಲೂ ಎತ್ತಿದ ಕೈ ಎಂದುಕೊಂಡೆವಲ್ಲವಾ, ಹಾಗೆಯೇ ಹಠದಲ್ಲಿಯೂ ಫಸ್ಟ್! ಮೊಂಡು ಹಿಡಿದಿದ್ದಾನೆ.

ಬೀಡಿ ಸೇದುತ್ತ, ಈ ಅಮ್ಮ-ಮಗನ ಮುಚ್ಚಟೆಯನ್ನು ಕೇಳಿದ ಮುತ್ತಯ್ಯನಿಗೆ ಪಿತ್ತ ನೆತ್ತಿಗೇರಿತು. ಧನಂಜಯನ ಮೇಲೆ ಮತ್ತೊಮ್ಮೆ ಕೋಪ ಕೆರಳಿತು. "ಬೋಸು..ಕೆ, ನಕ್ರಾ ಮಾಡುತ್ತೀಯೇನೋ, ಇರುವುದನ್ನು ತಿನ್ನಬೇಕು, ಅನುಸರಿಸಿಕೊಳ್ಳಬೇಕು. ತರಕಾರಿ




ಬೇಕೆಂದರೆ ಹೇಗೆ ಬಂದುಬಿಡುತ್ತೆ, ನಿನ್ನ ತಾತ ಸಂಪಾದಿಸಿದ್ದಾನಾ, ಮುತ್ತಾತ ಸಂಪಾದಿಸಿದ್ದಾನಾ?" ಸ್ವಲ್ಪ ಜೋರಾಗಿಯೇ ಗದರಿಸಿ ಒಂದು ಪೆಗ್ ಸಾರಾಯಿ ಹಾಕಿಕೊಂಡು ಬರಲು ಎದ್ದ. ಲಕ್ಷ್ಮಮ್ಮ ಕುಡಿಯಲು ಹೋಗಬೇಡವೆಂದು ಬಯ್ಯುತ್ತಿದ್ದರೂ ಮುತ್ತಯ್ಯ ಅದಾವುದನ್ನೂ ಲೆಕ್ಕಿಸದೆ ಊರ ಕಡೆಗೆ ನಡೆದ.

ಇನ್ನು ಧನಂಜಯನಿಗೆ ಆಶಾಭಂಗವಾಯಿತು. 'ನಿ..ಮ್ಮನ್! ಏನು ಬದುಕಿದು? ಪಾಸಾದ ದಿನ ಕೂಡ ಖುಷಿಯಿಂದ ಬಾಯಿ ಚಪ್ಪರಿಸಿ ತಿನ್ನುವಂತಹ ಊಟವಿಲ್ಲದೆ ಹೋಯಿತು, ಹೊಟ್ಟೆ ತಣ್ಣಗಾಗಲು ಸ್ವಲ್ಪ ತಿಂದು ಹುಣಸೆ ಮರದ ಕೆಳಗೆ ಅಪ್ಪ ಇಳಿಬಿಟ್ಟ ಹಗ್ಗದ ಮಂಚದ ಮೇಲೆ ಮಲಗಿದ.'

ಮುತ್ತಯ್ಯ ಗಂಟಲವರೆಗೂ ಕುಡಿದು ಎಲ್ಲರೂ ಮಲಗಿದ ಮೇಲೆ, ಬಹಳ ಹೊತ್ತಿಗೆ ಮನೆಯ ದಾರಿ ಹಿಡಿದ. ಕುಡಿದ ಮತ್ತಿನಲ್ಲಿ ಜೋಲಾಡುತ್ತ ತಿಂದ ನಂತರ ಕಣ್ಮುಚ್ಚಿ ನಿಲ್ಲುವ ಕೋಳಿಯಂತೆ ಬಾಗಿಲಲ್ಲಿ ನಿಂತ. ಆ ಶಬ್ದಕ್ಕೆ ಲಕ್ಷ್ಮಮ್ಮ ಎದ್ದು ಬಯ್ಯಲಾರಂಭಿಸಿದಳು.

"ಹೊತ್ತು ಗೊತ್ತು ಏನೂ ಇಲ್ಲ ನಿನಗೆ, ಇದೇ ಗೋಳಾಯಿತು" ಎಂದು ಕೋಪದಿಂದ ಕೂಗಾಡಲಾರಂಭಿಸಿದಳು. ಮುತ್ತಯ್ಯ ಲುಂಗಿ ಮೇಲೆ ಎತ್ತಿ ಕಟ್ಟಿ, ತೋರುಬೆರಳನ್ನು ಮೂತಿಯ ಮೇಲಿಟ್ಟು, "ಷ್... ಸದ್ದು ಮಾಡಬೇಡ. ಅವನು ಮಲಗಿದನಾ?" ಪಿಸುಗುಡುತ್ತ ಕೇಳಿದ.

"ಅವನು ಮಲಗಿ ಯಾವುದೋ ಕಾಲ ಆಯಿತು, ಮಧ್ಯರಾತ್ರಿ ಆಯಿತು. ಊಟ ಮಾಡಲಿಲ್ಲ, ಮಲಗಿಕೋತೀಯಾ ಇಲ್ಲವಾ?"

"ಏ ನಿ..ಮ್ಮನ್ ನನ್ನ ವಿಷಯ ಯಾಕೆ, ಅವನು ತಿಂದನಾ?"

"ಎಲ್ಲಿ ತಿಂದ? ತರಕಾರಿ ಇಲ್ಲ, ಗಿರಕಾರಿ ಇಲ್ಲ, ಹಸಿವು ತಾಳಲಾರದೆ ಸ್ವಲ್ಪ ತಿಂದು, ಉಳಿದದನ್ನು ತಟ್ಟೆಯಲ್ಲೇ ಬಿಟ್ಟು ಮಲಗಿದ."

ಲಕ್ಷ್ಮಮ್ಮನ ಮಾತುಗಳಿಗೆ ಮುತ್ತಯ್ಯ ಸ್ವಲ್ಪ ಹೊತ್ತು ಸದ್ದು ಮಾಡದೆ ಸುಮ್ಮನಿದ್ದ. ಹೆಂಡತಿ ಎದುರು ಮಾನ ಹೋಗುವಂತಿದೆ ಎಂದು ಮಾತು ಬದಲಾಯಿಸುತ್ತ, "ಏನೇ ನಾನು ಏಕೆ ಕುಡಿದೆ ಗೊತ್ತಾ?" ಮೀಸೆ ತಿರುವುತ್ತ ಲಕ್ಷ್ಮಮ್ಮನನ್ನು ಕೇಳಿದ.

"ಅಬ್ಬಾ! ಈ ದೊಡ್ಡ ಗಂಡಸು ಏಕೆ ಕುಡಿದ ಅಂತ, ಊರೆಲ್ಲ ಯೋಚಿಸುತ್ತೆ ಮತ್ತೆ!" ಮುಖಕ್ಕೆ ಹೊಡೆದಂತೆ ಅಂದಳು ಲಕ್ಷ್ಮಮ್ಮ.

"ಏಯ್...ನಿನ್ ಗೋಳು ನಿಲ್ಲಿಸ್ತೀಯಾ, ಇವತ್ತು ನನ್ನ ಮಗ ಪಾಸಾಗಿದ್ದಾನೆ ಕಣೇ. ಅದಕ್ಕೇ ಕುಡಿದಿದೀನಿ!!"

"ಓ ಹೌದಾ..? ಹಾಗಿದ್ದರೆ, ನಿನ್ನೆ, ಮೊನ್ನೆ ಏಕೆ ಕುಡಿದೆಯೋ ಮತ್ತೆ?" ಲಕ್ಷ್ಮಮ್ಮ ಗೊಣಗಿದಳು.

ಮುತ್ತಯ್ಯನಿಗೆ ಮರ್ಯಾದೆ ಹೋದಂತಾಯಿತು. ಆದರೂ ಲಕ್ಷ್ಮಮ್ಮನ ಬಾಯಿ ಮುಚ್ಚಿಸಲು "ಹಾಗಲ್ಲವೇ ಲಚ್ಚಿ, ಮೊನ್ನೆ ಕೂಲಿ ಸಿಗಲಿಲ್ಲ. ಅದಕ್ಕೆ ಕುಡಿದೆ. ನಿನ್ನೆ ಮೊನ್ನೆಯ ಬಾಧೆಯಿಂದಾಗಿ ಕುಡಿದೆ" ಎಂದ.

"ನಿನ್ ಕುಡಿತಕ್ಕೆ ಮಣ್ಣು ಬೀಳಾ, ಯಾರಾದರೂ ಕೇಳಿದರೆ ನಗ್ತಾರೆ. ಕುಡಿಯೋದೇನೋ ದೊಡ್ಡ ಘನಂದಾರಿ ಕೆಲಸ ಅನ್ನೋ ಹಾಗೆ ಕಥೆ ತೆಗಿತೀಯಾ! ತಿನ್ನಕ್ಕೆ ಗತಿ ಇಲ್ಲದಿದ್ದರೂ, ಒಂದೇ ಸಮನೆ ಕುಡಿಯಕ್ಕೆ ಓಡ್ತೀಯ" ಬೈಗುಳದ ಮಳೆಗರೆದಳು.

ಹೀಗೆ ಬೈದುಕೊಳ್ಳುತ್ತ ಯಾವಾಗ ಮಲಗಿದರೋ ಗಂಡ ಹೆಂಡತಿ.

"ಮುತ್ತಯ್ಯ, ಓ ಮುತ್ತಯ್ಯ.. ಬೆಳಗಾಗಿ ಎಷ್ಟು ಹೊತ್ತಾಯಿತು. ಏಳು, ಬೇಗ ಏಳು. ನಿನ್ನನ್ನು ದೊರೆಗಳು ಕರೆದುಕೊಂಡು ಬರುವಂತೆ ಹೇಳಿದ್ದಾರೆ."

ಮಾದಿಗರ ಎಲ್ಲಪ್ಪ ಮುತ್ತಯ್ಯನನ್ನು ಆತುರಾತುರವಾಗಿ ಎಬ್ಬಿಸಿದ.

ನರಸಿರೆಡ್ಡಿ ಪಟೇಲ ಆ ಊರ ದೊಡ್ಡ ಜಮೀನ್ದಾರನಾದರೂ ಎಲ್ಲರೊಂದಿಗೆ, ಎಲ್ಲ ಕುಲದವರೊಂದಿಗೆ ಒಳ್ಳೆಯ ರೀತಿಯಲ್ಲಿಯೇ ನಡೆದುಕೊಳ್ಳುತ್ತಾನೆ. ಎಲ್ಲರೂ ಅವನನ್ನು ದೊರೆ ಎಂದೇ ಕರೆಯುತ್ತಾರೆ.

ನರಸಿರೆಡ್ಡಿ ಪಟೇಲನ ತಂದೆಯ ಕಾಲದಲ್ಲಿ ಹೀಗಿರಲಿಲ್ಲವಂತೆ. ಕ್ರಮೇಣ ಆದದ್ದು ಈ ಬದಲಾವಣೆ.

ನರಸಿರೆಡ್ಡಿ ಪಟೇಲನ ಹೆಸರು ಕೇಳುತ್ತಿದ್ದಂತೆ ಮುತ್ತಯ್ಯ ಬೇಗ ಬೇಗ ಒಂದು ಬೇವಿನ ಕಡ್ಡಿ ಮುರಿದು ಬಾಯಿಗಿಟ್ಟುಕೊಂಡು ಹಲ್ಲುಜ್ಜುತ್ತ ಮಾದಿಗ ಎಲ್ಲಪ್ಪನ ಹಿಂದೆ ದೊರೆಯ ಬಂಗಲೆಯ ಬಳಿ ಬಂದ. ದಾರಿಯಲ್ಲೇ ಕಡ್ಡಿ ಎಸೆದು ಬೋರ್‌ವೆಲ್ ಬಳಿ ಮುಖಕ್ಕೆ ನೀರು ತೋರಿಸಿದಂತೆ ಮಾಡಿದ.

ಆತುರಾತುರವಾಗಿ ಕೋರ್ಟಿನಲ್ಲಿ ಜಡ್ಜ್ ಎದುರು ತಪ್ಪಿತಸ್ಥರು ಹಾಜರಾದಂತೆ ನರಸಿರೆಡ್ಡಿ ಪಟೇಲನ ಮುಂದೆ ಕೈಕಟ್ಟಿ ನಿಂತುಕೊಂಡು "ದೊರೆ ಬರಹೇಳಿದಿರಂತೆ" ಎಂದು ಮೆಲ್ಲಗೆ ಉಸುರಿದ.

"ಊಂ ಕಣೋ ಮುತ್ತಾ ನಾನೇ ಬರಹೇಳಿದೆ."

"ಹೇಳಿ ದೊರೆ ಏನು ಮಾಡಬೇಕು?"

"ಏನಿಲ್ಲ ಕಣೋ! ನಿನ್ನೆ ಪರೀಕ್ಷೆಯಲ್ಲಿ ಪಾಸಾಗಿರುವವರ ಮಾರ್ಕ್ಸ್ ಬಂದಿವೆ! ನನ್ನ ಮಗಳು ಫಸ್ಟ್‌ಕ್ಲಾಸಿನಲ್ಲಿ ಪಾಸಾಗಿದ್ದಾಳೆ. ಅದಕ್ಕೇ ಪಾರ್ಟಿ ಮಾಡೋಣವೆಂದುಕೊಂಡಿದ್ದೇನೆ. ಮೇಕೆ ಕಡಿಯ ಬೇಕು, ಕಳ್ಳು, ಬ್ರಾಂದಿ ತರಬೇಕು, ಎಲ್ಲಕ್ಕಿಂತ ಮುಖ್ಯವಾಗಿ ಒಲೆಗೆ ಹಾಕಲು ಕಟ್ಟಿಗೆ ಬೇಕು. ಇನ್ನು ನೀನು ಇವತ್ತು ಇಲ್ಲೇ ಇದ್ದು ಎಲ್ಲಪ್ಪನ ಜೊತೆ ಕೆಲಸ ಮಾಡು, ಸಂಜೆ ಪಟ್ಟಣದಿಂದ ನನ್ನ ಸ್ನೇಹಿತರು ಬರುತ್ತಾರೆ" ಎಂದ ನರಸಿರೆಡ್ಡಿ ಪಟೇಲ.

"ಅದಕ್ಕೇನು ದೊರೆ ಮಾಡೋಣ. ನೀವು ಹೇಗೆ ಹೇಳಿದರೆ ಹಾಗೆ" ಎನ್ನುತ್ತ ತಲೆಯಾಡಿಸಿದ ಮುತ್ತಯ್ಯ. ಇವತ್ತಿನ ಕೂಲಿ ಸಿಕ್ಕಿತೆಂಬ ಸಂತೋಷದಲ್ಲಿ. ನರಸಿರೆಡ್ಡಿ ಪಟೇಲನ ಬಳಿ ಕೆಲಸ ಮಾಡುವವರು ಏಳೆಂಟು ಮಂದಿ ಇದ್ದರೂ ಮುತ್ತಯ್ಯನೆಂದರೆ ಒಂದು ಕೈ ಹೆಚ್ಚು! ಯಾವ ಕೆಲಸವನ್ನಾದರೂ ಅಚ್ಚುಕಟ್ಟಾಗಿ ಮಾಡುತ್ತಾನೆ. ಎದುರು ಮಾತನಾಡುವುದಿಲ್ಲ. ಕೊಟ್ಟಿದ್ದು ತಿನ್ನುತ್ತಾನೆ. ತಿನ್ನುವುದಕ್ಕಿಂತ ಎರಡು ಪಟ್ಟು ಹೆಚ್ಚು ಕೆಲಸ ಮಾಡುತ್ತಾನೆ. ಅದಕ್ಕೆ ನರಸಿರೆಡ್ಡಿ ಪಟೇಲ ತನ್ನ ಜೀತದವರಿಗಿಂತ ಮುತ್ತಯ್ಯನಿಗೆ ಹೆಚ್ಚು ಪ್ರಾಶಸ್ತ್ಯ ಕೊಡುತ್ತಾನೆ.

ಮೇಕೆಯನ್ನು ಕಡಿದಾಗಿದೆ, ಮುತ್ತಯ್ಯ ಒಡೆದ ಕಟ್ಟಿಗೆಯಲ್ಲಿ ಅಡುಗೆ ಆಗಿದೆ. ಟೆಂಟ್ ಹಾಕಿದ್ದರೂ ನೆರಳು ಸಾಲುತ್ತಿಲ್ಲ. ಸುಡುಬಿಸಿಲಾದರೂ ಕೆಲಸದವರು ಚೆನ್ನಾಗಿ ಕೆಲಸ ಮಾಡುತ್ತಿದ್ದಾರೆ. ತರಕಾರಿ ಹೆಚ್ಚುವವರು, ನೀರು ಹೊರುವವರು ತಮ್ಮ ಕೆಲಸಗಳನ್ನು ಚುರುಕಾಗಿ ಮಾಡುತ್ತಿದ್ದಾರೆ. ಒಲೆ ಉರಿಸಲು ಮೊರದಿಂದ ಗಾಳಿ ಬೀಸುತ್ತಿದ್ದಾರೆ. ನರಸಿರೆಡ್ಡಿ ಪಟೇಲ ತನ್ನ ಮಗಳು ಪಾಸಾಗಿರುವ ಖುಷಿಗೆ ಬೆಳ್ಳಂಬೆಳಗ್ಗೆನೇ ಕುಡಿಯಲಾರಂಭಿಸಿದ್ದಾನೆ.

ಕರಿದ ಬೋಟಿ ಫ್ರೈ ಪಲ್ಯದಲ್ಲಿಟ್ಟು ನರಸಿರೆಡ್ಡಿ ಪಟೇಲನಿಗೆ ಕೊಟ್ಟರೆ, ಪಾನೀಯದೊಂದಿಗೆ ನೆಂಜಿಕೊಂಡು ತಿನ್ನುತ್ತಿದ್ದಾನೆ. ಎರಡುಮೂರು ರೌಂಡ್ ಕುಡಿದಾದ ನಂತರ "ಓ ಮುತ್ತ! ಇಲ್ಲಿ ಬಾ" ಎಂದು ಕೇಕೆ ಹಾಕಿದ. "ದೊರೆ, ನಿಂಬೆಕಾಯಿ ಕೊಯ್ಯುತ್ತಿದ್ದೇನೆ, ಅದು ಮುಗಿದರೆ ಅಡುಗೆ ಮುಗಿದಂತೆಯೇ" ಎಂದ ಮುತ್ತಯ್ಯ ವಿನಯದಿಂದ.

"ಸರಿ ಈ ಬೇವಿನಮರದ ಕೆಳಗೆ ಬಾರೋ, ಆ ಬಿಸಿಲಿನಲ್ಲೇಕೆ ಕೊಯ್ಯುತ್ತೀಯ" ದೊರೆಯ ಪ್ರೀತಿಗೆ ಮುತ್ತಯ್ಯನಿಗೆ ಸುಡುತ್ತಿದ್ದ ಬಿಸಿಲು ಮಾಯವಾದಂತೆ ಭಾಸವಾಯಿತು. ನರಸಿರೆಡ್ಡಿ ಪಟೇಲನ ಮಾತು ತೆಗೆದುಹಾಕಲಾರದೆ ಹತ್ತಿರ ಹೋಗಿ ಒಂದು ಮೂಲೆಯಲ್ಲಿ ನೆತ್ತಿಯ ಮೇಲಿದ್ದ ರುಮಾಲು ತೆಗೆದು, ಕೈ ಕಟ್ಟಿಕೊಂಡು ನಿಂತ. ನರಸಿರೆಡ್ಡಿ ಪಟೇಲನಿಗೆ ನಿಧಾನವಾಗಿ ನಶೆಯೇರುತ್ತಿದ್ದಂತಿದೆ.

"ಅರೆ, ಮುತ್ತ! ಇಲ್ಲಿ ಕೆಳಗೆ ಕುಳಿತುಕೋ ಬಾ" ಎಂದು ಕೈ ತೋರಿಸಿದ ನರಸಿರೆಡ್ಡಿ ಪಟೇಲ.

"ಏಯ್ ಬೇಡ ದೊರೆ!' ತಲೆ ಕೆರೆದುಕೊಳ್ಳುತ್ತ ಹೇಳಿದ ಮುತ್ತಯ್ಯ.

"ಅರೆ ನಿಂತುಕೊಂಡು ನಿಂಬೆಕಾಯಿ ಕೊಯ್ಯುತ್ತೀಯೇನೋ?"

ಇಲ್ಲವೆನ್ನಲಾರದೆ ನರಸಿರೆಡ್ಡಿ ಪಟೇಲ ಕುಳಿತಿದ್ದ ಚೇರಿನಿಂದ ಸ್ವಲ್ಪ ಅತ್ತಿತ್ತ ಸರಿದು ಕುಳಿತು ನಿಂಬೆಕಾಯಿ ಕೊಯ್ಯಲಾರಂಭಿಸಿದ ಮುತ್ತಯ್ಯ.

ಬೋಟಿ ಚಪ್ಪರಿಸುತ್ತ ಗ್ಲಾಸು ಖಾಲಿ ಮಾಡಿದ ನರಸಿರೆಡ್ಡಿ ಪಟೇಲ. ಜೀವ ತಣ್ಣಗಾಗುತ್ತಿದ್ದಂತಿದೆ.., ಏನಾದರೂ ಮಾತನಾಡಬೇಕೆಂದು ಮೆಲ್ಲನೆ ಬಾಯ್ತೆರೆದ! "ಏನೋ ಮುತ್ತಾ, ನಿನ್ನ ಮಗ ಕೂಡ ನನ್ನ ಮಗಳ ಜೊತೆಯವನೇ ಅಲ್ಲವಾ?"

"ಹೌದು ದೊರೆ!"

"ಮತ್ತೆ ಅವನು ಪಾಸಾಗಿದ್ದಾನಾ?"

"ಆಂ, ಆಯಿತೆಂದು ಹೇಳಿದ ದೊರೆ, ಅದರಲ್ಲಿ ನಿಜವೆಷ್ಟೋ, ಸುಳ್ಳೆಷ್ಟೋ ನನಗಂತೂ ಗೊತ್ತಿಲ್ಲ." ನಿಜ ತಿಳಿದಿದ್ದರೂ ದೊರೆಯ ಮಗಳೊಂದಿಗೆ ತನ್ನ ಮಗನಿಗೇಕೆ ಪೈಪೋಟಿ ಎಂದುಕೊಂಡು ತನ್ನ ಮಗನ ಕುರಿತು ಕೊಂಕು ನುಡಿದ ಮುತ್ತಯ್ಯ. ಹಾಗೆ ತನ್ನ ಮಗನನ್ನು ಬೈದರೆ ದೊರೆ ತನ್ನ ಮೇಲೆ ಮತ್ತಷ್ಟು ಪ್ರೀತಿ ತೋರಿಸುವನೆಂದು ಮುತ್ತಯ್ಯನ ಆಸೆ. ಆದರೂ ನರಸಿರೆಡ್ಡಿ ಪಟೇಲನಿಗೆ ಧನಂಜಯನ ಕುರಿತು ಸ್ವಲ್ಪ ತಿಳಿದಿದೆ.

"ಹಾಗೇಕೆ ಹೇಳುತ್ತಿಯಾ. ನಮಗೆ ಗೊತ್ತಿಲ್ಲವಾ ನಿನ್ನ ಮಗ ಚೆನ್ನಾಗಿ ಓದುತ್ತಾನೆಂದು ಊರೆಲ್ಲ ಹೇಳುತ್ತದೆ."

"ಏನೋ ದೊರೆ ನಿಮ್ಮ ದಯೆ!"

"ನನ್ನ ದಯೆಯೇನು ಬಂತು ಎಷ್ಟು ಮಾರ್ಕ್ಸ್ ಬಂದಿದೆಯೋ?" ದೊರೆ ಒಳ್ಳೆಯವನಷ್ಟೇ ಅಲ್ಲ, ಒಳ್ಳೆಯ ಮಾತುಗಾರನೂ ಕೂಡ!

"ಅಕ್ಷರ ಬರದವನು! ನನಗೆಲ್ಲಿ ಗೊತ್ತಾಗುತ್ತೆ ದೊರೆ ಅವೆಲ್ಲ?" ಅಮಾಯಕ ಮೂರ್ತಿವೆತ್ತ ರೂಪವೇ ಮುತ್ತಯ್ಯನ ಮಾತು, ನಡೆ.

ಇವರಿಬ್ಬರ ಮಾತುಕತೆ ನಡುವೆಯೇ ಗ್ರಾಮ ಪಂಚಾಯಿತಿ ಕಾರ್ಯದರ್ಶಿ ರಾಜಿರೆಡ್ಡಿ ಮತ್ತು ಮಂಡಲ ಪರಿಷತ್ ಸದಸ್ಯ ಮಲ್ಲಾರೆಡ್ಡಿ "ನಮಸ್ತೇ ರೆಡ್ಡಿ ಸಾಹೇಬರೇ" ಎನ್ನುತ್ತ ಬಂದರು. ಅವರು ಕೂಡ ದೊರೆಯ ಕುಲದವರೇ. ದೂರದ ನೆಂಟರು ಕೂಡ.



ಇದೇನ್ರೀ.. ನಿದ್ರೆಯಲ್ಲಿ ಗೊರಕೆಯ ಸದ್ದು ಗೊರ್.. ಅನ್ನೋ ಬದಲು ವೋಟ್.. ಅಂತಿದೆಯಲ್ರೀ..?!

"ಆ ಬನ್ನಿ ಬನ್ನಿ. ನಿಮಗಾಗಿಯೇ ಎದುರು ನೋಡುತ್ತಿದ್ದೇನೆ! ಓಯ್ ಮುತ್ತ ಇನ್ನೆರಡು ಗ್ಲಾಸು ತೆಗೆದುಕೊಂಡು ಬಾ" ಎಂದ.

ದೊರೆಗೆ ಕುಡಿದು ಹರಟೆ ಹೊಡೆಯಲು ಕಂಪನಿ ಸಿಕ್ಕಿತು. ಕುಡಿಯುವಾಗ ಹರಟೆ ಇಲ್ಲದಿದ್ದರೆ ಮಜ ಏನಿರುತ್ತದೆ ಹೇಳಿ! ಮೂರು ಗ್ಲಾಸುಗಳು ಪಾನೀಯದಿಂದ ಮುಳುಗಿ ಒಂದಕ್ಕೊಂದು ಶೇಕ್ ಹ್ಯಾಂಡ್ ಕೊಟ್ಟುಕೊಂಡವು.

ಮುತ್ತಯ್ಯ ಅವರಿಗೆ ಪಲ್ಯ ಕಡಿಮೆಯಾದರೆ ಪಲ್ಯ, ನೀರು ಖಾಲಿಯಾದಾಗ ನೀರು ಪೂರೈಸುತ್ತ ಅಡುಗೆ ಕೆಲಸ ನೋಡಿಕೊಳ್ಳುತ್ತಿದ್ದಾನೆ. ಅದಾಗಲೆ ಎರಡು ಮೂರು ಸುತ್ತು ಪೆಗ್ ಏರಿಸಿದವರು ಮಾತಿಗೆ ಶುರುವಿಟ್ಟುಕೊಂಡರು.

"ಹೌದು ಪಟೇಲರೇ! ಚಿಕ್ಕ ದೊರೆಸಾನಿಗೆ ಎಷ್ಟು ಮಾರ್ಕ್ಸ್ ಬಂದಿದೆಯಂತೆ" ಕೇಳಿದನು ರಾಜಿರೆಡ್ಡಿ.

ಅಷ್ಟರಲ್ಲಿ ಮಲ್ಲಾರೆಡ್ಡಿ ಅರ್ಧ ಕುಡಿದ ಗ್ಲಾಸ್ ಮೇಲೆತ್ತಿ "ತಿಳಿಯದಿರುವುದೇನಿದೆ, ಚಿಕ್ಕ ದೊರೆಸಾನಿಯೇನೋ ವಿದ್ಯಾ ದೇವಿಯೇ ಸರಿ! ಚೆನ್ನಾಗಿಯೇ ಬಂದಿರುತ್ತದೆ" ಅಂದನು ಇನ್ನೊಂದು ಗ್ಲಾಸ್ ಸುರಿಯುವಂತೆ ಕೈಚಾಚುತ್ತ.

ಇನ್ನು ಬಾಯಿ ಬಿಡದಿದ್ದರೆ ಸರಿಕಾಣುವುದಿಲ್ಲ ಎಂದು "ಮಾರ್ಕ್ಸ್ ಎಷ್ಟೆಂದು ಹೇಳಲಿಲ್ಲ, ಆದರೆ "ಸವೆಂಟಿಸಿಕ್ಸ್ ಪರ್ಸೆಂಟೇಜ್" ಬಂದಿದೆ ಡ್ಯಾಡಿ ಎಂದು ನನಗೆ ಹೇಳಿದಳು" ನರಸಿರೆಡ್ಡಿ ಪಟೇಲ ಮೀಸೆ ತಿರುವಿಕೊಳ್ಳುತ್ತ ಹೇಳಿದನು.

"ಅರೆ ಶಹ್‌ಬಾಷ್, ಹುಲಿಯ ಹೊಟ್ಟೆಯಲ್ಲಿ ಹುಲಿಯೇ ಹುಟ್ಟಿದೆ" ಎಂದರು ಇಬ್ಬರೂ ಸ್ವಲ್ಪ ಹೆಚ್ಚಾಗಿಯೇ ಹೊಗಳುತ್ತ. ಆ ಹೊಗಳಿಕೆಗೆ ನರಸಿರೆಡ್ಡಿ ಪಟೇಲ ಖುಷಿಯಲ್ಲಿ ತೇಲಾಡುವಂತಾಗುತ್ತಿದೆ.

ಅಷ್ಟರಲ್ಲೇ "ದೊರೆ ಊಟಕ್ಕೆ ಎಷ್ಟು ಬಾಳೆಎಲೆ ತರಿಸಬೇಕು" ಮಾತಿನ ನಡುವೆ ಕೇಳಿದನು ಮುತ್ತಯ್ಯ.

"ಒಂದು ಇಪ್ಪತ್ತು ಎಲೆ ತರಿಸಿಬಿಡು" ನರಸಿರೆಡ್ಡಿ ಪಟೇಲ ಆದೇಶಿಸಿದನು.

"ಸರಿ ದೊರೆ" ಎಂದು ಹಿಂದೆ ತಿರುಗಿ ಹೊರಡಲಿದ್ದ ಮುತ್ತಯ್ಯನನ್ನು ರಾಜಿರೆಡ್ಡಿ, "ಅರೆ ಮುತ್ತಾ ನಿನ್ನ ಮಗನಿಗೆ ಎಷ್ಟು ಮಾರ್ಕ್ಸ್ ಬಂದಿದೆಯೋ" ಎಂದು ಕೇಳಿದನು.

"ಆ ನಮ್ಮದೇನಿದೆ ರೆಡ್ಡಿ ಸಾಬ್, ನಮ್ಮದೇನು ಲೆಕ್ಕ ಹೇಳಿ? ನನ್ನ ಮಗ ಚಿಕ್ಕವನಿದ್ದಾಗ ಚೆನ್ನಾಗಿ ಓದುತ್ತಾನೆಂದು ಎಲ್ಲರೂ ಹೇಳುತ್ತಿದ್ದುದನ್ನು ಕೇಳಿದ್ದೇನೆಯೇ ಹೊರತು ಇತ್ತೀಚೆಗೆ ಅವನು ಹೇಗೆ ಓದುತ್ತಿದ್ದಾನೋ, ಎಷ್ಟು ಮಾರ್ಕ್ಸ್ ಬರುತ್ತಿದೆಯೋ ನನಗೇನು ಗೊತ್ತಾಗುತ್ತೆ!" ಎಂದಿನಂತೆ ವಿನಯವಾಗಿ ಕೈ ಕಟ್ಟಿಕೊಂಡು ಹೇಳಿದ ಮುತ್ತಯ್ಯ.

"ಅದೇನೋ ನಿನ್ನೆಯೇ ಪೇಪರ್‌ನಲ್ಲಿ ಬಂದಿದೆ, ನಿನ್ನ ಮಗ ಹೇಳಲಿಲ್ಲವಾ? ನೋಡು ನಮ್ಮ ಪಟೇಲರ ಮಗಳು ಚಿಕ್ಕ ದೊರೆಸಾನಿಗೆ ಸವೆಂಟಿಸಿಕ್ಸ್ ಪರ್ಸೆಂಟ್ ಬಂದಿದೆಯಂತೆ" ವ್ಯಂಗ್ಯವಾಗಿ ಅವಹೇಳನ ಮಾಡಿದ ರಾಜಿರೆಡ್ಡಿ.

"ಆ ಹೇಳಿದ್ದಾನಾಗಲಿ, ಚಿಕ್ಕ ದೊರೆಸಾನಿ ಎಲ್ಲಿ?

ನಮ್ಮವನೆಲ್ಲಿ ಸಾಬ್? ಅವನು ತರಕಾರಿ ಇಲ್ಲವೆಂದು, ಷರ್ಟ್ ಇಲ್ಲವೆಂದು ನನ್ನ ಮೇಲೆ ಜಗಳಕ್ಕೆ ಬರುತ್ತಾನೆ ಹೊರತು ದೊಡ್ಡವರ ಮಕ್ಕಳಂತೆ ಓದಬಲ್ಲನಾ!" ನರಸಿರೆಡ್ಡಿ ಪಟೇಲ ಕೈಯಲ್ಲಿ ಗ್ಲಾಸ್ ಹಿಡಿದುಕೊಂಡು ಕೇಳುತ್ತಿದ್ದಾನೆ.

ಮುತ್ತಯ್ಯ ಮತ್ತೆ ಹೇಳುತ್ತಿದ್ದಾನೆ, "ಸಾವಿರಕ್ಕೆ ಒಂಬೈನೂರ ಇಪ್ಪತ್ತೋ, ಅರವತ್ತೋ ಬಂದಿದೆ ಎಂದ, ಚಿಕ್ಕ ದೊರೆಸಾನಿಯಂತೆ ಸವೆಂಟಿ, ಗಿವೆಂಟಿ ನಮ್ಮನಿಗೆ ಬರುತ್ತದೆಯಾ ಸಾಬ್, ಅವನು ಕೆಲಸಕ್ಕೆ ಬಾರದವನು" ಮಡಿಕೆ ಒಡೆದಂತೆ ನಿಜವಾದ ವಿಷಯ ಬಾಯಿಬಿಟ್ಟ.

"ಸಾವಿರಕ್ಕೆ ಒಂಭತ್ತುನೂರ ಅರವತ್ತಾ!!!!" ಎಂದು ಗ್ಲಾಸುಗಳೆಲ್ಲ ಆಶ್ಚರ್ಯದಿಂದ ಬಾಯ್ಬಿಟ್ಟವು.

ನರಸಿರೆಡ್ಡಿ ಪಟೇಲನ ಗ್ಲಾಸ್ ಕೈಯಿಂದ ಜಾರಿ ಕೆಳಗೆ ಬೀಳುವಂತಾಯಿತು!

ರಾಜಿರೆಡ್ಡಿಗೆ ಗಂಟಲಲ್ಲಿ ಬೋಟಿಖಾರ ಸರ್ರನೆ ಗಂಟಲಿಗಿಳಿಯಿತು!!

ಮಲ್ಲಾರೆಡ್ಡಿಗೆ ಆಶ್ಚರ್ಯದಿಂದ ಬಿಟ್ಟಕಣ್ಣು ರೆಪ್ಪೆಯಾಡುತ್ತಿಲ್ಲ!!! ಒಮ್ಮೆಲೇ ಮೂವರಿಗೂ ದಿಗ್ಭ್ರಮೆಯಾಯಿತು.

ಮೂವರೂ ಒಬ್ಬರ ಮುಖ ಮತ್ತೊಬ್ಬರು ನೋಡಿಕೊಂಡು ತಣ್ಣಗಾದರು. ನರಸಿರೆಡ್ಡಿ ಪಟೇಲನಿಗೆ ಇಷ್ಟು ಹೊತ್ತು ಕುಡಿದದ್ದೆಲ್ಲ, ಧನಂಜಯನ ಮಾರ್ಕ್ಸ್ ಕೇಳಿ ಸರ್ರನೆ ಇಳಿಯಿತು. ಹೊಸ ಬಾಟಲಿನ ಮುಚ್ಚಳ ತೆಗೆದು ಗ್ಲಾಸಿಗೆ ಸುರಿಯದೆ ಹಾಗೇ ಮೇಲಕ್ಕೆತ್ತಿ ಗಂಟಲಿಗಿಳಿಸತೊಡಗಿದನು. ಮುತ್ತಯ್ಯನಿಗೆ ಏನು ನಡೆಯಿತೋ, ಏನು ನಡೆಯುತ್ತಿದೆಯೋ ಒಂದೂ ಅರ್ಥವಾಗುತ್ತಿಲ್ಲ. ಏನಾದರೂ ತಪ್ಪು ಮಾತನಾಡಿದೆನಾ ಎಂದುಕೊಂಡು ಮತ್ತೆ ತಲೆ ಕೆರೆದುಕೊಳ್ಳುತ್ತ ಅಲ್ಲೇ ನಿಂತುಕೊಂಡ. ಈಗಲೇ ಬರ್ತೀನಿ ಎಂದು, ನರಸಿರೆಡ್ಡಿ ಪಟೇಲ ಎದ್ದುಹೋದ... "ಮುತ್ತಾ ಇಲ್ಲಿ ಬಾರೋ" ಎಂದು ಪಕ್ಕಕ್ಕೆ ಕರೆದನು. ದೊರೆ ಹೊಡೆಯುವನೋ ಏನೋ ಎಂದು ನಡುಗುತ್ತ ಮುತ್ತಯ್ಯ ದೊರೆ ಬಳಿ ಹೋದ.

'ಇಗೋ, ನನ್ನ ಮಗಳಿಗಿಂತ ನಿನ್ನ ಮಗನಿಗೇ ಜಾಸ್ತಿ ಮಾರ್ಕ್ಸ್ ಬಂದಿದೆ, ಸವೆಂಟಿಸಿಕ್ಸ್‌ಗಿಂತಲೂ, ಒಂಬೈನೂರು ಜಾಸ್ತಿ ಕಣೋ, ಇಗೋ ಈ ವಿಷಯ ಇನ್ನು ಎಲ್ಲೂ ಬಾಯಿ ಬಿಡಬೇಡ! ನನ್ನ ಮರ್ಯಾದೆ ಹೋಗುತ್ತದೆ" ಎನ್ನುತ್ತ ಮೆಲ್ಲಗೆ ಉಸುರಿದ. ಆ ವಿಷಯ ಹೇಳುವಾಗ ದೊರೆ ಪೆಚ್ಚುಮೋರೆ ಯಿಂದಿದ್ದರೆ, ಮುತ್ತಯ್ಯನ ಮುಖ ಬೇಸಿಗೆಯಲ್ಲಿ ಊಹಿಸದ ಮಳೆ ಹುಯ್ದು ತಂಪಾಗಿ ಬಾನಿನಲ್ಲಿ ಕಾಮನಬಿಲ್ಲು ಮೂಡಿದಂತಾಯಿತು. ತಿನ್ನುವ ಮೊದಲೇ ಮುತ್ತಯ್ಯನಿಗೆ ಹೊಟ್ಟೆ ತುಂಬಿತು. ಎದೆ ಸಂತೋಷದಿಂದ ಉಬ್ಬಿಬರುತ್ತಿದೆ. ಧನಂಜಯನ ಮೇಲೆ ಪ್ರೀತಿ ತುಂಬಿ ಬರುತ್ತಿದೆ. ತಿಳಿಯದೆ ಮಗನನ್ನು ರಾತ್ರಿ ಆಡಬಾರದ ಮಾತೆಲ್ಲ ಆಡಿದೆ, ತರಕಾರಿ ಬೇಕೆಂದಿದ್ದಕ್ಕೆ ಕೂಗಾಡಿ ತಪ್ಪು ಮಾಡಿಬಿಟ್ಟೆ. ಧನಂಜಯನ ಮೇಲೆ ಮುತ್ತಯ್ಯನಿಗೆ ಕೆರೆ ಕಟ್ಟೆಯೊಡೆದು ಕೋಡಿ ಹರಿಯುವಷ್ಟು ಪ್ರೀತಿ ಉಕ್ಕಿ ಉಕ್ಕಿ ಬರುತ್ತಿದೆ. ಈಗಲೇ ಮಗನನ್ನು ಅಪ್ಪಿ ಮುದ್ದಾಡಬೇಕೆನಿಸುತ್ತಿದೆ. ಸರಸರನೆ ಮನೆ ದಾರಿ ಹಿಡಿದನು. ದಾರಿಯಲ್ಲಿ ಕಂಡವರಿಗೆಲ್ಲ ಹೇಳಬೇಕೆಂದು ಕೊಂಡನಾದರೂ, ನರಸಿರೆಡ್ಡಿ ಪಟೇಲನ ಮಾತುಗಳು ನೆನಪಿಗೆ ಬಂದಿತು. ನೂರು ಚೀಲ ಭತ್ತ ಹೊರುವಾಗ ಆಗುವಷ್ಟು ಕಷ್ಟದಿಂದ ಈ ಗುಟ್ಟನ್ನು ಒಳಗೇ ಮುಚ್ಚಿಟ್ಟುಕೊಂಡ ಮುತ್ತಯ್ಯ.

"ಮಗನೇ ಧನಂಜಯ ಎಲ್ಲಿದ್ದೀಯಪ್ಪಾ?" ಮನೆ ಇನ್ನೂ ಸ್ವಲ್ಪ ದೂರದಲ್ಲಿರುವಾಗಲೇ ಅರಚುತ್ತಾ ಹೋದ ಮುತ್ತಯ್ಯ. ಹೀಗೆ ಮುತ್ತಯ್ಯ ಗಾಳಿಯಲ್ಲಿ ತೇಲಾಡಿದಂತೆ ಮಗನಿಗಾಗಿ ಬರುತ್ತಿದ್ದರೆ, ಮಗ ಗೊಡ್ಡಲಿಯಿಂದ ಕಟ್ಟಿಗೆ ಒಡೆಯುವ ಕೆಲಸದಲ್ಲಿ ತಲ್ಲೀನನಾಗಿದ್ದಾನೆ. ಅಪ್ಪನ ಕೂಗು ಕೇಳಿ ತಲೆ ಮೇಲೆತ್ತಿದ ಧನಂಜಯ.

'ಏನಾಯಿತು? ಅಪ್ಪ ಯಾರ ಜೊತೆಗಾದರೂ ಗಲಾಟೆ ಮಾಡಿಕೊಂಡು ಬಂದನಾ..' ಎಂದುಕೊಂಡು ಕಟ್ಟಿಗೆ ಒಡೆಯುವುದನ್ನು ಬಿಟ್ಟು "ಏನಪ್ಪಾ?" ಎನ್ನುತ್ತ ಎದುರಿಗೆ ಹೋದ ಧನಂಜಯ.

"ಏನಿಲ್ಲ ಮಗನೇ!" ಎಂದು ಮಗನನ್ನು ಗಟ್ಟಿಯಾಗಿ ಅಪ್ಪಿ ಪ್ರೀತಿಯಿಂದ ಮುದ್ದಾಡಿದನು. ಇದನ್ನು ನೋಡಿದ ಲಕ್ಷ್ಮಮ್ಮ, 'ಬೆಳ್ಳಂಬೆಳಿಗ್ಗೆ ಕುಡಿದಿರುವನಾ ಹೇಗೆ, ಈ ಮುಂಡೇ ಮಗ ಹೀಗೆ ಮಾಡುತ್ತಿದ್ದಾನೇಕೆ ಎಂದು ಆಶ್ಚರ್ಯದಿಂದ ನೋಡಿದಳು.'

"ಏನಪ್ಪ? ಏನಾಯಿತು?" ಕೇಳಿದ ಧನಂಜಯ.

"ಏನಿಲ್ಲ ಮಗನೇ ನಿನ್ನ ಮಾರ್ಕ್ಸ್ ದೊರೆಗಳಿಗೆ ಹೇಳಿದರೆ ಬೇಸರ ಪಟ್ಟುಕೊಂಡರು! ನನಗೆ ತಿಳಿಯದೆ ರಾತ್ರಿ ನಿನ್ನನ್ನು ಹೇಗೆಂದರೆ ಹಾಗೆ ಬೈಯ್ದುಬಿಟ್ಟೆ ಮಗನೇ" ಕಣ್ಣೀರು ಹರಿಯುತ್ತಿದೆ ಮುತ್ತಯ್ಯನಿಗೆ.

"ಏ ಅದರಲ್ಲೇನಿದೆ ಸುಮ್ಮನಿರು" ಎಂದ ಧನಂಜಯ.

"ಅಲ್ಲ ಕಣೋ.. ನಾನು ಹೇಳುವುದು ಕೇಳು. ದೊರೆಗಳ ಸಮಾನವಾಗಿ ಆಗಬೇಕು ಎಂದೇ ಕಣೋ ನಿನಗೆ ನಾನು ಧನಂಜಯ ಎಂದು ಹೆಸರು ಇಟ್ಟಿದ್ದು. ಆದರೆ ಹುಟ್ಟುತ್ತಲೇ ಹೇಗೆ ಆಗುತ್ತೇವೆ ಕಣೋ.. ಕಾಲ ಬದಲಾದರೂ ಎಲ್ಲಿರುವವರು ಅಲ್ಲಿಯೇ ಇದ್ದೇವೆ.. ಆದರೆ ಇವತ್ತು ನನಗನಿಸುತ್ತಿದೆ.. ಈ ವಿದ್ಯೆ ಇದೆಯೇ.. ಅದು ನಮ್ಮನ್ನು ದೊಡ್ಡವರಾಗಿ ಮಾಡುತ್ತದೆ ಎಂದು ಅನಿಸುತ್ತಿದೆ ಕಣೋ.. ಆ ಓದು ನಮ್ಮ ಕಾಲದವರಿಗೆ ಇಲ್ಲವಾಗಲಿ.. ಈಗ ನಿಮ್ಮ ಕಾಲದಲ್ಲಾದರೂ ಅದು ಇರುವವರನ್ನು, ಇಲ್ಲದವರನ್ನು ಸರಿಸಮಾನವಾಗಿ ಮಾಡುತ್ತಿದ್ದರೆ ನಿನ್ನನ್ನು ನಾನು ಹೇಗೆ ತಡೆಯುತ್ತೇನೆ ಕಣೋ?" ಯೋಚಿಸಿಯೇ ಹೇಳಿದ ಮುತ್ತಯ್ಯ.

"ಅದೇನಪ್ಪಾ?" ಎಂದನು ಧನಂಜಯ.

"ಹೌದು ಮಗನೇ... ನೀನು ಪಟ್ಟಣಕ್ಕೆ ಹೋಗಬೇಕು. ಹೆಚ್ಚಿನ ವಿದ್ಯಾಭ್ಯಾಸ ಪಡೆಯಬೇಕು... ಊಂ... ನಿನಗೂ, ದೊರೆ ಮಗಳು ನೀಲಮ್ಮನಿಗೂ ಸರಿಸಮಾನ ಮಾರ್ಕ್ಸ್ ಬಂದಿದೆ... ನಿನಗೆ ಇನ್ನೂ ಜಾಸ್ತಿಯೇ ಬಂದಿದೆಯಲ್ಲವೇನೋ... ಇನ್ನು ನನ್ನ ಕನಸು ನನಸಾಗುವ ಕಾಲ ಬಂದಿದೆಯೆನಿಸುತ್ತಿದೆ. ಓದಿನಿಂದ ನೀವು ಸಮಾನವಂತರಾದರೆ, ಅದೇ ಅಲ್ಲವಾ ನಾನು ಬಯಸಿದ್ದು. ಮಗನೇ... ನಿನ್ನನ್ನು ಈಗ ಹೆಚ್ಚಿನ ಓದಿಗೆ ಕಳಿಸದಿದ್ದರೆ ನಂದೇ ತಪ್ಪಾಗುತ್ತದೆ..." ಎಂದ. "ಪಟ್ಟಣಕ್ಕೆ ಹೋಗು... ನಾಳೆಯೇ ಸಿದ್ಧನಾಗು" ಪ್ರೀತಿಯಿಂದ ತನ್ನ ನಿರ್ಧಾರವನ್ನು ಹೇಳಿದ ಮುತ್ತಯ್ಯ.

"ಈಗ ಹೇಳು ಮಗನೇ.. ನೀನು ಯಾವ ತರಕಾರಿ ತಿನ್ನುತ್ತೀನೆಂದರೆ ಇವತ್ತು ಅದೇ ಮಾಡೋಣ. ಕೋಳಿ ಕೊಯ್ಯೋಣಾ... ಹೇಳು ಮಗನೇ" ಸಂತೋಷಭರಿತನಾಗಿ ಕೇಳಿದ ಮುತ್ತಯ್ಯ.

"ಕೋಳಿಯ ಸಂಗತಿ ಹಾಗಿರಲಿ ಅಪ್ಪಾ..." ಎನ್ನುತ್ತ ಗಟ್ಟಿಯಾಗಿ ತಬ್ಬಿಕೊಂಡ ಧನಂಜಯ.

ತಂದೆ ಮಗನನ್ನು ಹಾಗೆ ನೋಡುತ್ತಿದ್ದರೆ ಲಕ್ಷ್ಮಮ್ಮನಿಗೆ ಕಣ್ಣೀರು ಧಾರಾಕಾರವಾಗಿ ಸುರಿಯುತ್ತಿದೆ.. ಸೆರಗಿನಿಂದ ಕಣ್ಣೊರೆಸಿಕೊಂಡಳು. ತಡೆಯಲಾರದೆ ಆಗಿಂದಾಗಲೇ ಬಂದ ಅಲ್ಲಿಗೆ ರಾಜಿರೆಡ್ಡಿ, ಮಲ್ಲಾರೆಡ್ಡಿ ಬಂದು 'ಅರೆ... ಮುತ್ತಾ! ಏನೋ ಅಂದುಕೊಂಡೆವಾಗಲಿ, ನಿನ್ನ ಮಗ 'ಭಲೇ' ಚುರುಕಾಗಿದ್ದಾನೆ ಕಣೋ' ಎಂದರು.

ಹೌದು, "ಅವನು ನನ್ನ ಧನಂಜಯ..." ತಂದೆ ಹೆಮ್ಮೆಯಿಂದ ಬೀಗಿದನು.



ತೆಲುಗು ಮೂಲ : **ಪಸುನೂರಿ ರವೀಂದರ್**
ಕನ್ನಡಕ್ಕೆ : **ಎಂ. ಜಿ. ಶುಭಮಂಗಳ**
ನಂ. ೨೬, 'ಪಾರಿಜಾತ', ಒನೇ ಕ್ರಾಸ್, ವೆಂಕಟೇಶ್ವರ ಲೇಔಟ್
ಚನ್ನಕೇಶವ ನಗರ, ಎಲೆಕ್ಟ್ರಾನ್‌ಸಿಟಿ, ಬೆಂಗಳೂರು–೫೬೦೧೦೦

ಸದ್ಯ ಎನ್‌ಐಎಎಸ್‌ನಲ್ಲಿ ಅತಿಥಿ ಪ್ರಾಧ್ಯಾಪಕರಾದ ಷಡಕ್ಷರ ಶೆಟ್ಟರ ಅವರು ಪ್ರಸಿದ್ಧ ಇತಿಹಾಸಕಾರರು. ಅನೇಕ ವಿಷಯಗಳೊಡನೆ ಅವರು ಭಾರತೀಯ ಶಿಲ್ಪ, ಶಿಲ್ಪಿಗಳು, ಲಿಪಿಗಳ ಬೆಳವಣಿಗೆ ಮತ್ತು ಲಿಪಿಕಾರರ ಬಗೆಗೆ ಅಮೂಲ್ಯವಾದ ಸಂಶೋಧನೆಗಳನ್ನು ಮಾಡಿದ್ದಾರೆ. ಶಿವಾನಂದ ಕಣವಿ ಅವರನ್ನು ಭೇಟಿ ಮಾಡಿ ಹಲವಾರು ವಿಷಯಗಳನ್ನು ಚರ್ಚಿಸಿದರು. ಇದು ಆ ಸಂಭಾಷಣೆಯ ಪರಿಷ್ಕೃತ ರೂಪ.

**ಶಿವಾನಂದ ಕಣವಿ**



# ಸಂಸ್ಕೃತಿ ಸಂಶೋಧಕ ಪ್ರಾ. ಷಡಕ್ಷರ ಶೆಟ್ಟರ ಅವರೊಂದಿಗೆ ಒಂದು ಸಂಭಾಷಣೆ

**ಶಿವಾನಂದ ಕಣವಿ :** ಮೊದಲನೆ ಪ್ರಶ್ನೆ ನಿಮ್ಮ ಭಾಷೆ, ಲಿಪಿ ಸಂಶೋಧನೆಗೆ ಸಂಬಂಧಿಸಿದ್ದಲ್ಲ. ಇದು ನಿಮ್ಮ ಟೆಂಪಲ ಆರ್ಕಿಟೆಕ್ಚರ ಬಗೆಗಿನ ಹಿಂದಿನ ಕೆಲಸಕ್ಕೆ ಸಂಬಂಧಿಸಿದ್ದು. ಈಗ ಹಾಗೆ ನೀವು ಲಿಪಿ, ಲಿಪಿಕಾರರ ಬಗ್ಗೆ ಬರೆದೀರಿ, ಹಂಗ ನಮ್ಮ ಗುಡಿಗಳನ್ನು ಕಟೆದ ಶಿಲ್ಪಕಾರರು; ಅವರ ಬಗ್ಗೆ, ಅವರ ಹಿನ್ನೆಲೆ ಬಗ್ಗೆ, ಅವರು ಬಳಸಿದ ಪರಿಕರಗಳು, ಟೂಲ್ಸ, ಟೆಕ್ನಾಲಜಿ, ಅವರಿಗೆ ಮಾರ್ಗದರ್ಶನ ಮಾಡಿದ ಗ್ರಂಥಗಳು, ಶಾಸ್ತ್ರಗಳು – ಇವುಗಳ ಬಗ್ಗೆ ಕೆಲಸ ಆಗಿದೆಯಾ?

**ಪ್ರಾ. ಶೆಟ್ಟರ :** ಆಗಿದೆ. ನನ್ನ ಬರವಣಿಗೆಯಲ್ಲಿಯೇ ಸ್ವಲ್ಪ ಬಂದಿದೆ. ಲಿಪಿಕಾರರ ಬಗ್ಗೆ ನಾನು ಇತ್ತೀಚೆಗಷ್ಟೇ ಬರೆದಿದ್ದೇನೆ. ಹಿಂದೆ ಪ್ರಾಚೀನ ಶಿಲ್ಪಿಗಳ ಬಗ್ಗೆ ಬರೆದಿರುವೆ. ಬಹುಶಃ ನಮ್ಮ ದೇಶದೊಳಗೆ ಪ್ರಾಚೀನ ಶಿಲ್ಪಿಗಳ ಬಗ್ಗೆ ಕೆಲಸ ಮಾಡಿರುವ ಇಬ್ಬರು ಅಂದರೆ, ನಾನು ಮತ್ತು ಎಸ್. ಸಿ. ಮಿಶ್ರಾ ಅವರು ಮಧ್ಯಪ್ರದೇಶದ ಶಿಲ್ಪಿಗಳ ಕುರಿತಾಗಿ ಬರೆದಿದ್ದಾರೆ. ವಿಸ್ತೃತವಾಗಿ ಪ್ರಾಚೀನ ಶಿಲ್ಪಿಗಳ ಬಗ್ಗೆ ಬರೆದಿರೋದು ನಮ್ಮ ದೇಶದಲ್ಲಿ ಬಹುಶಃ ನಾನೊಬ್ಬನೇ ಎಂದು ಕಾಣುತ್ತೆ. ನನಗೆ ಅದರ ಬಗ್ಗೆ ಒಂದು ತರಹದ ಹುಚ್ಚು ಇತ್ತು. ಇದುವರೆಗೆ ಶಿಲ್ಪಿಗಳನ್ನ ಹೊರಗಿಟ್ಟು, ಬರೀ ಕಲೆ, ಶೈಲಿ, ಶಿಲ್ಪಶಾಸ್ತ್ರದ ಬಗ್ಗೆ ಬರೆದುಕೊಂಡಿದ್ದಿವಿ ಅಂತ ನನಗೆ ಅನಿಸುತ್ತಿತ್ತು. ನಾನು ಇಂಡಿಯನ್ ಹಿಸ್ಟರಿ ಕಾಂಗ್ರೆಸ್ಸಿನ ಅಧ್ಯಕ್ಷನಾದಾಗ ಕೂಡ ಪ್ರಾರಂಭ ಕಾಲದ ಶಿಲ್ಪಿಗಳ ಬಗ್ಗೆನೆ ನನ್ನ ಅಧ್ಯಕ್ಷ ಭಾಷಣದ ಉದ್ದಕ್ಕೂ ಬಂದಿದೆ.

ಇತ್ತೀಚೆಗೆ ಸ್ವಲ್ಪ ಜನ ಶಿಲ್ಪಿಗಳ ಬಗ್ಗೆ ಆಸಕ್ತರಾಗಿದಾರೆ. ಇನ್ನೊಂದು ವಿಷಯ ಅಂದ್ರೆ, ಶಿಲ್ಪಿಗಳ ಬಗ್ಗೆ ಆಕರಗಳೇನಿವೆಯಲ್ಲ, ಅವು ಕರ್ನಾಟಕದಲ್ಲಿ ಸಿಕ್ಕಿರುವಷ್ಟು ಬೇರೆಲ್ಲಿಯೂ ಸಿಗುವುದಿಲ್ಲ. ಬಾದಾಮಿಯ ಚಾಳುಕ್ಯರ ಕಾಲದಿಂದಲೂ ಇದನ್ನು ನಾವು ಹೇಳಬಹುದು. ನನ್ನ ಇತ್ತೀಚಿನ ಹಳಗನ್ನಡದ ಬಗೆಗಿನ ಪುಸ್ತಕದಲ್ಲಿ ಇದರ ಉಲ್ಲೇಖ ಇದ್ದೇ ಇದೆ. ಶಿಲ್ಪಿಗಳ ಅಧ್ಯಯನವಷ್ಟೇ ಅಲ್ಲದೆ, ಅವರ ಹಸ್ತಾಕ್ಷರ ಮೊದಲು ಮಾಡಿ ಸಂಗ್ರಹಿಸಿ ಅಧ್ಯಯನ ಮಾಡಿದ್ದೇನೆ. ಹೀಗೆ ಯಾರೂ ಮಾಡಿಲ್ಲ ಎಂಬುದು ನನ್ನ ಅಂದಾಜು. ಹೊಯ್ಸಳರ ಕುರಿತಾದ ಪುಸ್ತಕವೊಂದರಲ್ಲಿಯೇ ಶಿಲ್ಪಿಗಳ ಬಗ್ಗೆ ಮೂರು ಅಧ್ಯಾಯಗಳಿವೆ. ಯಾವ ಯಾವ ರೀತಿಯ ಶಿಲ್ಪಿಗಳಿದ್ದರು, ಹೇಗಿದ್ದರು, ಹೇಗೆ ಬದುಕಿದ್ರು, ಯಾವ ರೀತಿ ಕೆಲ್ಸ ಮಾಡ್ತಾ ಇದ್ರು ಎಂಬುದರ ಬಗ್ಗೆ ಆ ಲೇಖನಗಳು ಬೆಳಕು ಚೆಲ್ಲುತ್ತವೆ. ಇದೆಲ್ಲಕ್ಕಿಂತ ಹೆಚ್ಚಾಗಿ, ಅವರು ಕೈಗೊಳ್ಳುತ್ತಿದ್ದಂತಹ ವೃತ್ತಿಯಾತ್ರೆಗಳು. ಎಲ್ಲೆಲ್ಲಿಗೆ ಪ್ರಯಾಣ ಬೆಳೆಸ್ತಿದ್ರು, ಎಷ್ಟು ದೂರದ ತನಕ ಹೋಗ್ತಾ ಇದ್ರು ಇತ್ಯಾದಿ.

ನನ್ನ ಅಧ್ಯಕ್ಷ ಭಾಷಣದ ಶೀರ್ಷಿಕೆ ಕೂಡ "ದಿ ಫೂಟ್ ಪ್ರಿಂಟ್ಸ್ ಆಫ್ ದಿ ಆರ್ಟಿಸನ್ಸ್ ಆಫ್ ಇಂಡಿಯ" (ಭಾರತೀಯ ಕುಶಲಕರ್ಮಿಗಳ ಹೆಜ್ಜೆ ಗುರುತುಗಳು). ಅಶೋಕ ಚಕ್ರವರ್ತಿಯ ಕಾಲದಿಂದ ಹಿಡಿದು ಕುಶಾಣರವರೆಗಿನ ಕುಶಲಕರ್ಮಿಗಳ ಇತಿಹಾಸದ ಮೇಲೆ ಆ ಭಾಷಣ ಬೆಳಕು ಚೆಲ್ಲುವುದು. ಅದರಲ್ಲಿ ಕರ್ನಾಟಕದ ಬಗ್ಗೆ ಅಷ್ಟಾಗಿ ಪ್ರಸ್ತಾಪವಿಲ್ಲ. ಆದರೆ ಯಾವುದೇ ಶೈಲಿಯ ಶಿಲ್ಪವಾದರೂ ನನ್ನ ಎಲ್ಲಾ ಬರವಣಿಗೆಗಳಲ್ಲಿ ಶಿಲ್ಪಿಗಳ ಬಗ್ಗೆ ಬರೆದಿದ್ದೇನೆ.

**ಕಣವಿ :** ಆಗ ಶಿಲ್ಪಕಲಾ ಶಾಲೆಗಳು ಇದ್ದವೇ?

**ಶೆಟ್ಟರ :** ಶಿಲ್ಪಕಲಾ ಶಾಲೆಗಳು ಇದ್ದವೇ ಎಂದು ನಾವು ಎಲ್ಲಾ ಕಡೆಗೂ ಕೇಳ್ತೀವಿ. ಆ ಕಾನ್ಸೆಪ್ಟ್ ಇತ್ತು ಅಂತ ಹೇಳಲಿಕ್ಕಾಗುವುದಿಲ್ಲ. ಇದು ಒಂದು ರೀತಿಯಲ್ಲಿ ತಂದೆಯಿಂದ ಮಗನಿಗೆ, ಅವನಿಂದ ಮತ್ತವನ ಮಗನಿಗೆ

ಪಾರಂಪರಿಕವಾಗಿ ಮುಂದುವರೆಸಿಕೊಂಡು ಹೋಗ್ತಾ ಇದ್ದಂತಹ ಕಲೆ. ಮೂಲ ವಾಸ್ತು ಮತ್ತು ಶಿಲ್ಪಕಲಾ ಗ್ರಂಥಗಳನ್ನು ಆಳವಾಗಿ ಅಧ್ಯಯನ ಮಾಡುವಷ್ಟು ಅವರು ಅಕ್ಷರಸ್ಥರಾಗಿರಲಿಲ್ಲ ಎಂದು ನನಗನಿಸುತ್ತದೆ. ಆದರೆ ಕುಶಲಕರ್ಮಿಗಳು ಶಾಸ್ತ್ರ ಗ್ರಂಥವಲ್ಲದಿದ್ದರೂ ಕೆಲ ಕೈಪಿಡಿ ತಂತ್ರಗಳನ್ನು ಉಪಯೋಗಿಸುತ್ತಿದ್ದರು. ಕುಶಲತೆಗಳು ಇದ್ದಿರ ಬಹುದೇನೋ, ಅದನ್ನೇ ತಂದೆ ಮಗನಿಗೆ ಬಳುವಳಿಯಾಗಿ ಕೊಟ್ಟಿರಬಹುದು ಎಂದು ಊಹಿಸಬಹುದು. ಅದು ಕೇವಲ ಒಂದು ಕುಟುಂಬಕ್ಕೆ ಮಾತ್ರ ಸೀಮಿತವಾಗಿದ್ದ ಕೌಶಲ್ಯ ಎಂದು ಹೇಳಲಿಕ್ಕೆ ಆಗುವುದಿಲ್ಲ. ಅದು ಒಂದು ಪಂಗಡಕ್ಕೆ, ಸಮಾಜದ ಒಂದು ವರ್ಗಕ್ಕೆ ಸೇರಿದ್ದಾಗಿತ್ತು. ಇನ್ನೊಂದೆಂದರೆ ಆಗ ಮತ್ತು ಈಗಲೂ ಕೂಡ ಈ ತರಹದ ಕಲೆಗಳು, ಸಂಗೀತ ಇತ್ಯಾದಿ ಪಾಠ, ಗ್ರಂಥಗಳಿಂದಲ್ಲ ಆದರೆ ಒಬ್ಬ ಗುರು ಹಿರಿಯರ ಮಾರ್ಗದರ್ಶನದಲ್ಲಿ ಅಭ್ಯಾಸ, ಸಾಧನೆಗಳಿಂದಲೇ ಎಲ್ಲರೂ ಕಲಿಯುತ್ತಾರೆ. ಪಠ್ಯಗಳೂ ಇರಬಹುದು, ಆದರೆ ಪ್ರತ್ಯಕ್ಷ ಮಾಡುವ ಮೂಲಕವೇ ಕಲಿಯುವ ವಿದ್ಯೆ ಇದು.

**ಕಣವಿ :** ಶಾಸ್ತ್ರಗಳೂ ಇದ್ದವೇ?

**ಶೆಟ್ಟರ :** ಇದ್ದವು. ನಾನು ಐ ಜಿ ಎನ್ ಸಿ ಎ ಚೇರ್ಮನ್ ಆಗಿದ್ದಾಗ ಒಂದು ಕಾರ್ಯಾಗಾರ ಮಾಡಿದ್ವಿ. ಅದರ ಮುಖ್ಯ ಉದ್ದೇಶ ಏನಂತಂದ್ರೆ, ಕಾಶ್ಯಪ ಶಿಲ್ಪ ಪಠ್ಯವನ್ನ ಇಟ್ಟುಕೊಂಡು, ಹಿಂದೆ ಅವರು ಬಳಸಿದ್ದಂತಹ ಕಲ್ಲನ್ನೇ ನಾವೂ ಉಪಯೋಗಿಸಿಕೊಂಡು, ಸಾಂಪ್ರದಾಯಿಕವಾಗಿ ಆ ಕಲೆಯನ್ನ ಬಲ್ಲ ಶಿಲ್ಪಿಗಳನ್ನೇ ಕರ್ಕೊಂಡು ಬಂದು, ನನಗೆ ಏನು ಗೊತ್ತಿರುವ ಶೈಲಿ, ವಿನ್ಯಾಸಗಳನ್ನು ನಾನು ಹೇಳಿಕೊಟ್ಟು, ಅವರು ತಮ್ಮ ಉಪಕರಣ, ಪ್ಲಂಬ ಲೈನ್ಸ್, ತಾಳಮಾಳ ಇವನ್ನೆಲ್ಲ ಇಟ್ಟುಕೊಂಡು, ಶಿಲ್ಪಗಳನ್ನು ಕಡೆಯುವದು. ಈ ತರಹದ ಮೂರು ಕಾರ್ಯಾಗಾರಗಳನ್ನು ನಾವು ಹಮ್ಮಿಕೊಂಡಿದ್ವಿ. ಸಾಂಪ್ರದಾಯಿಕ ಶಿಲ್ಪಗಾರಿಕೆ ಗೊತ್ತಿದ್ದವರನ್ನೇ ಆ ಕೆಲಸದಲ್ಲಿ ಇನ್ವಾಲ್ವ್ ಮಾಡಿಕೊಂಡು ಏರ್ಪಡಿಸಿದ್ವಿ. ಅವರು ಯಾರೂ ವಿದ್ಯಾವಂತರಾಗಿರಲಿಲ್ಲ. ಆದರೆ ಅದ್ಭುತ ಕಲಾವಿದರಾಗಿದ್ರು. ಆಗ ನಾವು ೨೪ ಶಿವನ ಮೂರ್ತಿಗಳನ್ನು ಕೆತ್ತಿಸಿದೆವು. ಅಲ್ಲಿ ಈಗಲೂ ಇರಿಸಿದ್ದೀವಿ. ಚಾಳುಕ್ಯರ, ಹೊಯ್ಸಳರ ಕಾಲದ ಶಿಲ್ಪಿಗಳ ಕೆತ್ತನೆ ಕೆಲಸಕ್ಕಿಂತ ತುಂಬ ಉತ್ತಮವಾದ ಕರಕುಶಲತೆಯನ್ನ ಇಲ್ಲಿ, ಕೆಂಗುಂಟೆ ರಸ್ತೆಯಲ್ಲಿ ಇರುವ ಕಲಾಗ್ರಾಮದ ಕ್ಯಾಂಪಸಿನಲ್ಲಿ ಅವನ್ನ ಗಮನಿಸಬಹುದು. ಅಲ್ಲಿಯೇ ಒಂದು ಗ್ಯಾಲರಿಯನ್ನೂ ಕೂಡ ಮಾಡಲಾಗಿದೆ. ಸುಮಾರು ಮೂರರಿಂದ ಐದಡಿ ಎತ್ತರದ ಪ್ರತಿಯೊಂದು ಶಿಲ್ಪ. ಈ ಶಿಲ್ಪಿಗಳಿಗೆ ಈ ಕೆಲ್ಸ ನಿರ್ದೇಶಿಸಿದಾಗ, ಅವರು ದಿನಾಲೂ ಸುಮಾರು ಐದೂವರೆಗೆ ಎದ್ದು, ತಮ್ಮ ಎಂದಿನ ಸಂಪ್ರದಾಯಗಳನ್ನು ಪಾಲಿಸಿಯೇ ಶಿಲ್ಪಗಾರಿಕೆಯನ್ನ ಪ್ರಾರಂಭಿಸುತ್ತಿದ್ದರು. ಅದಕ್ಕೆ




ಸಂಬಂಧಿಸಿದ ಚಿತ್ರಗಳು, ವೀಡಿಯೋ ಎಲ್ಲವನ್ನೂ ಸಂಗ್ರಹಿಸಿದ್ದೇವೆ. ಅವು ಅಲ್ಲಿಯೇ ಇವೆ. ನನ್ನ ಉದ್ದೇಶ ಶಿಲ್ಪಕಲೆಯನ್ನ ರಿಕ್ರಿಯೇಟ್ ಮಾಡುವ ಸಾಧ್ಯತೆಯನ್ನು ತೋರಿಸುವುದಾಗಿತ್ತು. ಅವರು ಮೂಲದಿಂದಲೇ ತುಂಬ ಕುಶಲಕಲಾಕರ್ಮಿಗಳಾಗಿದ್ದರು. ಅವರು ಹೆಚ್ಚು ವಿದ್ಯಾವಂತರಲ್ಲದ ಕಾರಣಕ್ಕೆ ಅವರಿಗೆ ಈ ಸಾಂಪ್ರದಾಯಿಕ ವಾಸ್ತು ಪಠ್ಯವನ್ನ ಶಿಲೆಗೆ ಅಳವಡಿಸಿಕೊಂಡು ಕೆಲಸ ಮಾಡುವ ತಂತ್ರಗಾರಿಕೆ ಇರಲಿಲ್ಲ ಅಷ್ಟೇ. ಮತ್ತು ಒಮ್ಮೊಮ್ಮೆ ಅವರು ಎಲ್ಲ ಶೈಲಿಗಳನ್ನೂ ಮಿಕ್ಸ್ ಮಾಡಿಬಿಡ್ತಾ ಇದ್ರು. ಅವರ ದೃಷ್ಟಿಯೊಳಗ ಅದೆ ಉತ್ತಮ. ಆದರೆ ಚಾಳುಕ್ಯರ ಕಾಲದ ಶಿಲ್ಪಗಾರಿಕೆ ಬೇರೆ. ಚೋಳರ ಶೈಲಿಯೇ ಬೇರೆ. ಅವರಿಗೆ ಅದು ಗೊತ್ತಾಗ್ತಿರಲಿಲ್ಲ. ಅವರು ಕೆಲಸ ಮಾಡುತ್ತಾ, ಹೊಯ್ಸಳರದ್ದು ಮತ್ತು ಚೋಳರದ್ದು ಎರಡನ್ನೂ ಸೇರಿಸಿಬಿಡ್ತಾ ಇದ್ರು.

ಈಗ ಇತಿಹಾಸವನ್ನ ಗಮನಿಸಿ ಹೇಳೋದಾದರೆ, ಹೊಯ್ಸಳರ ನಂತರ ವಿಜಯನಗರ ಅರಸರ ಆಳ್ವಿಕೆ ಪ್ರಾರಂಭವಾದಾಗ ದಕ್ಷಿಣ ಭಾರತೀಯ ಶೈಲಿಯೇ ಪ್ರಾರಂಭವಾಯಿತು. ಗ್ರಾನೈಟಿನಲ್ಲಿ ಕೆತ್ತನೆ ಮಾಡ್ತಾ ಇದ್ದ ಚೋಳ ಶೈಲಿಯ ಶಿಲ್ಪಿಗಳು ಅವರದ್ದೇ ಒಂದು ವಿಶಿಷ್ಟ ಶೈಲಿಯನ್ನ ಹುಟ್ಟುಹಾಕಿದ್ರು. ನಮ್ಮಲ್ಲಿ ಆರಂಭದ ಚಾಳುಕ್ಯರು ಕೇವಲ ಮರಳುಗಲ್ಲನ್ನು (ಸ್ಯಾಂಡ್ ಸ್ಟೋನ್) ಮಾತ್ರ ಬಳಸ್ತಾ ಇದ್ರು. ಅವರು ಬೇರೆ ಯಾವುದನ್ನೂ ಉಪಯೋಗಿಸ್ತಿರಲಿಲ್ಲ. ಚಾಳುಕ್ಯರು ಮತ್ತು ಹೊಯ್ಸಳರು ಬರೀ ನುಣುಪುಗಲ್ಲನ್ನು (ಸಾಫ್ಟ್ ಸ್ಟೋನ್) ಮಾತ್ರ ಬಳಸುತ್ತಿದ್ದರು. ಹೊಯ್ಸಳರ ನಂತರ ಗ್ರಾನೈಟ್ ಪ್ರಮುಖ ಮಾಧ್ಯಮವಾಗಿ ಉಪಯೋಗಿಸಲ್ಪಟ್ಟಿತು.

**ಕಣವಿ :** ಈ ತಂಜಾವೂರಿನ ಬೃಹದೇಶ್ವರ ಟೆಂಪಲ್ ಇದೆಯಲ್ಲ ಅದು ಗ್ರಾನೈಟು ಅಲ್ಲವೇ?

**ಶೆಟ್ಟರ :** ತಮಿಳುನಾಡಿನಲ್ಲಿ ಏನೇನು ಶಿಲ್ಪಗಾರಿಕೆ ಇದೆಯೋ ಅದೆಲ್ಲವೂ ಗ್ರಾನೈಟ್‌ನಿಂದ ಮಾಡಲ್ಪಟ್ಟಿರುವುದು. ವಿಜಯನಗರ ಅರಸರ ಆಳ್ವಿಕೆಯಲ್ಲಿ ಅದು ಒಂದು ರೀತಿಯಿಂದ ಸಾರ್ವತ್ರಿಕವಾಯಿತು. ಅಂದರೆ ದಕ್ಷಿಣ ಭಾರತದ ಶಿಲ್ಪಗಾರಿಕೆ ಕುಟುಂಬಗಳು ಪೂರ್ತಿ ಅವರ ಮಾದರಿಯನ್ನೇ ಅನುಸರಿಸಿದರು. ಅದಕ್ಕೂ ಮೊದಲು ಇದು ಪಾಂಡ್ಯರದ್ದು, ಇದು ಚೋಳರದ್ದು, ಅಂತ ಪ್ರತ್ಯೇಕಿಸಿ ಹೇಳಬಹುದಾಗಿತ್ತು. ಅವರು ಬಳಸುತ್ತಿದ್ದ ತಂತ್ರಗಾರಿಕೆ, ಉಪಕರಣಗಳು ಇವೆಲ್ಲಕ್ಕೂ ಇದು ಅನ್ವಯವಾಗುತ್ತದೆ. ಹೆಚ್ಚಿನ ಶಿಲ್ಪಿಗಳು ಒಂದು ಕೈಪಿಡಿಯನ್ನು ಆಧಾರವಾಗಿಟ್ಟುಕೊಂಡು, ತಮ್ಮ ತಂದೆಯ ಅಥವಾ ಪಂಗಡದ ಮುಖ್ಯಸ್ಥನ ನಿರ್ದೇಶನದಲ್ಲಿ, ಮಾರ್ಗದರ್ಶನದಲ್ಲಿ ಶಿಲ್ಪಕಲೆಯನ್ನು ಕಲಿತರು ಎಂದು ಹೇಳಬಹುದು.

**ಕಣವಿ :** ಅವರಿಗೆ ಅಕ್ಷರ ಜ್ಞಾನ ಇತ್ತಾ?

**ಶೆಟ್ಟರ :** ಅಕ್ಷರಾಭ್ಯಾಸ ಮಾಡಿರಲಿಲ್ಲ. ಅಂದರೆ ಅವರಲ್ಲಿ ಕೆಲವು ಶಿಲ್ಪಿಗಳಿಗೆ ತಮ್ಮ ಹೆಸರನ್ನು ಬರೆದುಕೊಳ್ಳುವಷ್ಟು ಅಕ್ಷರಜ್ಞಾನ ಇತ್ತು. ಇನ್ನು ಉಳಿದವರಿಗೆ ತಮ್ಮ ಹೆಸರನ್ನು ಬರೆದುಕೊಳ್ಳುವಷ್ಟು ಕೂಡ ಸರಿಯಾದ ಅಕ್ಷರಜ್ಞಾನ ಇರಲಿಲ್ಲ. ತಪ್ಪು ಮಾಡುತ್ತಿದ್ದರು.

**ಕಣವಿ :** ಹಂಗಂದ್ರ ಈ ಕಿರಾತಾರ್ಜುನ ಮುಂತಾದ ಪೌರಾಣಿಕ ಸನ್ನಿವೇಶಗಳನ್ನ ಅವರು ಹೆಂಗ ಸಾಕ್ಷಾತ್ಕರಿಸುತ್ತಿದ್ದರು?

**ಶೆಟ್ಟರ :** ಓದಾಕ ಬರಿಯಾಕ ಬರ್ತಿರಲಿಲ್ಲ ಅಂದ್ರೂನೂ, ಕತೆಗಳ ಮೂಲಕ ಅಂತ ಹೇಳಬಹುದು. ಕಥಾಸಮಯ ಅನ್ನುವುದು ಎಲ್ಲ ಕಾಲದಲ್ಲೂ ಸಾಮಾನ್ಯವಾಗಿ ಕಾಣುವಂಥದ್ದೇ. ಆ ಶಿಲ್ಪಗಳು ಪಠ್ಯಗಳಿಂದಲೇ ಆವಿರ್ಭವಿಸಿದವು ಅಂತಲ್ಲ. ಕಲ್ಲಿನಲ್ಲಿ ಕಥೆಗಳು ಅಂತ ಏನು ಹೇಳ್ತೀವಿ ಅವು ಎರಡು ವಿಧ. ತನ್ನ ಕೌಶಲ್ಯವನ್ನ ಅಭಿವ್ಯಕ್ತಗೊಳಿಸುವದಕ್ಕೆ ನರೆಟಿವ್ ಅನ್ನುವುದನ್ನು ಆತ ಬಳಸಿಕೊಳ್ಳುತ್ತಿದ್ದ. ಒಮ್ಮೊಮ್ಮೆ ಕಥೆ ಒಂದು ಪೂರ್ತಿ ಪ್ಯಾನೆಲ್‌ನಲ್ಲಿ ಇರ್ತದೆ. ಆದರೆ ಕೆಲವೊಮ್ಮೆ ಒಂದೇ ಚೌಕಟ್ಟಿನೊಳಗೆ ಸ್ಥಗಿತವಾಗಿರ್ತದೆ. ಉದಾಹರಣೆಗೆ ರಾವಣ ಕೈಲಾಸವನ್ನ ಎತ್ತಿದ್ದು. ಸಮುದ್ರಮಥನ ಅಥವಾ ಮಹಿಷಾಸುರ ಮರ್ದನ ಇತ್ಯಾದಿ. ಇಡೀ ಪೌರಾಣಿಕ ಸನ್ನಿವೇಶವನ್ನ ಒಂದೇ ಕಲ್ಲಿನೊಳಗೆ ಕೆತ್ತಿಡೂದು ಅಂದ್ರೆ ಅದು ಒಂದು ಸವಾಲೇ. ಹೀಗಾಗಿ, ಈ ಏಕಶಿಲಾ ಕೆತ್ತನೆಗಳಾಗಿರಬಹುದು ಅಥವಾ ಕಥಾನಕಗಳು ಆಗಿರಬಹುದು. ಇವೆಲ್ಲ ಅವರಿಗೆ ತಮ್ಮ ಕೌಶಲ್ಯವನ್ನ ವ್ಯಕ್ತಪಡಿಸಲಿಕ್ಕೆ ಸಾಕಷ್ಟು ಅವಕಾಶ ಕಲ್ಪಿಸಿಕೊಡುತ್ತಿದ್ದವು. ಭೀಮ ವಿಜಯದ ಕಥೆಯಲ್ಲಿ ಅಂತೂ, ಆ ಸಂಭ್ರಮವನ್ನ ಪ್ರಕಟಪಡಿಸ್ತಾ ಇರೋ, ಮೇಳದವರು, ನಗಾರಿ ಬಾರಿಸೋವ್ರು, ಹಾಡು, ನೃತ್ಯ ಮಾಡಿಕೊಂಡು ಬರ್ತಾ ಇರೋರು, ಇವೆಲ್ಲವನ್ನ ತೋರಿಸ್ತಾರೆ. ಒಂದು ರೀತಿಯಿಂದ ಖಾಲೀ ಜಾಗೆಯನ್ನು ಹೇಗೆ ತುಂಬುತ್ತಿದ್ದರು ಎನ್ನುವದನ್ನು ನಾವು

ನೋಡಬಹುದು. ಅದೂ ಅವರ ಕೌಶಲ್ಯವನ್ನು ತೋರಿಸುತ್ತಿತ್ತು. ಕೆಲವೊಮ್ಮೆ ಅದು ಅದ್ಭುತವಾಗಿ ಕಲಾತ್ಮಕವಾಗಿರುತ್ತಿತ್ತು, ಕೆಲವೊಮ್ಮೆ ಸಾಧಾರಣವಾಗಿ ಇರುತ್ತಿತ್ತು.

**ಕಣವಿ :** ಕೆಲವೊಂದು ಪಠ್ಯಗಳು ಪಂಥಾಭಿಮಾನಿಯಾಗಿ ಸೆಕ್ಟೇರಿಯನ್ ಆಗಿ ಇರ್ತಾವ. ಆದರೆ ಶಿಲ್ಪಿ ಅವೆಲ್ಲವನ್ನ ಅನುಸರಿಸದೇನೇ ಇರಬಹುದು. ಅವನಿಗೆ ಶಿವಾ ಅಂದ್ರೂ ಅಷ್ಟ, ವಿಷ್ಣು ಅಂದ್ರೂನೂ ಅಷ್ಟ. ಅವಾಗ ಹೆಂಗ?

**ಶೆಟ್ಟರ :** ಹೌದು, ಒಬ್ಬ ಶಿಲ್ಪಿ ತನ್ನ ಕೆತ್ತನೆ ಕೆಲಸದಲ್ಲಿ ಮಗ್ನ ಆಗಿರುವಾಗ, ಅವನ ಮೇಲಿನವ ಒಬ್ಬ ಪುರೋಹಿತ ಬಂದು ಮಾರ್ಗದರ್ಶನ ಮಾಡುವಂಥ ಸನ್ನಿವೇಶಗಳಲ್ಲಿ, ಇಲ್ಲಿ ನಾಮಾ ಕೆತ್ತು, ಇಲ್ಲಿ ಇದನ್ನ ಮಾಡು, ಅದನ್ನ ಮಾಡು ಎಂದೆನ್ನುವ ಹೊತ್ತಿನಲ್ಲಿ ಪಾಪ, ಆ ಶಿಲ್ಪಿಗಳು ಹಾಗೇ ಮಾಡಿರಬಹುದಾದ ಸಾಧ್ಯತೆಗಳಿವೆ. ಅವರಿಗೇನು ಒಟ್ಟ ತಮಗೆ ಆಶ್ರಯ ನೀಡಿದವರ ಮಾತುಗಳನ್ನ ಕೇಳುವುದು ಮತ್ತು ಪಾಲಿಸುವುದು ಗೊತ್ತಿತ್ತು. ಆದರೆ ಅವರು ತಮ್ಮನ್ನು ತಾವು ಸಂಪೂರ್ಣವಾಗಿ ಆಶ್ರಯದಾತರಿಗೆ ಒಪ್ಪಿಸಿಕೊಳ್ಳಲಿಲ್ಲ, ಶರಣಾಗತಿಯ ಭಾವನೆ ತೋರಿಸಲಿಲ್ಲ. ತಮಗೆ ಸರಿ ಅನಿಸಿದ್ದನ್ನ ಎಷ್ಟೋ ಕಡೆ ಅವರು ಮಾಡಿದರು.

ವಿಜಯನಗರ ಅರಸರ ಆಳ್ವಿಕೆಯೊಳಗ ಮತ್ತು ನಂತರ, ಈ ಕೌಶಲ್ಯಕ್ಕೆ ಭಂಗ ಬಂದದ್ದನ್ನ ನಾವು ಗಮನಿಸಬಹುದು. ಶೈವ–ವೈಷ್ಣವ ಪಂಥಾಭಿಮಾನ ಇವೆಲ್ಲ ಹೆಚ್ಚಾದವು. ಆದರೆ ಕೌಶಲ್ಯ ಮಾತ್ರ ಶಿಲ್ಪಿಯದೇ.

**ಕಣವಿ :** ಆಗ ಶಿಲ್ಪಿಗಳು ಅವರ ಕಲ್ಪನೆಯನ್ನ ಕಲ್ಲಿಗೆ ಇಳಿಸಿ ಅದ್ಭುತ ಅನ್ನುವಂತಹ ಶಿಲ್ಪಗಾರಿಕೆ ಮಾಡಿದ್ರು ಸರಿ. ಆದರ, ಆವಾಗ, ಅವರಿಗೆ ಒಂದು ರೂಪುರೇಷೆ, ಪ್ಲಾನ್ ಅಥವಾ ಪೂರ್ತಿ ಡಿಸೈನ್ ಹಾಕಿಕೊಡಾಕ ಆರ್ಕಿಟೆಕ್ಟ್ಸ್, ವಾಸ್ತುಶಿಲ್ಪಿಗಳು ಇದ್ದರಾ?

**ಶೆಟ್ಟರ :** ಹೌದು, ಆರ್ಕಿಟೆಕ್ಟ್ಸ್ ಇರ್ತಿದ್ರು ಅವಾಗೂನೂ. ಸಾಧಾರಣ ಶಿಲ್ಪಿಗಳಿಗೆ ತಾವೇನು ಕೆತ್ತಲಿದ್ದೇವೆ ಅನ್ನೂದರ ಪೂರ್ಣ ಅಂದಾಜು ಇರ್ತಿರಲಿಲ್ಲ. ಆದರೆ ಒಂದು ದೇವಸ್ಥಾನವನ್ನು ಕಟ್ಟತಾ ಇದ್ದಾರೆ ಅಂದ್ರೆ, ಅದಕ್ಕೆ ವಿಪರೀತ ಶ್ರಮ, ವಿನ್ಯಾಸ, ರೂಪುರೇಷೆ, ಸಮಯ ಎಲ್ಲಾ ಒಟ್ಟುಗೂಡಿಸಿಕೊಂಡು ಕೆಲಸ ಮಾಡ್ತಿದ್ರು. ಬೃಹದೇಶ್ವರ, ಕೈಲಾಸ ಇವೆಲ್ಲಾ ಬಹಳಾ ಮುತುವರ್ಜಿಯಿಂದ ಮಾಡಿದಂಥಾ ಕೆಲಸಗಳು. ಸಾಟಿಯಿಲ್ಲದಂತಹ ತಾಂತ್ರಿಕ ಕುಶಲಗಾರಿಕೆಯನ್ನ ನಾವು ಆಗಿನ ಕೆತ್ತನೆಗಳಲ್ಲಿ ಕಾಣಬಹುದು. ಅವರು ಸಿಮೆಂಟ ಮುಂತಾದವನ್ನು ಬಳಸ್ತಿರಲಿಲ್ಲ. ಮತ್ತೆ ಎಷ್ಟೋ ಸಾರಿ ಅವರು ಒಂದೇ ಕಲ್ಲಿನೊಳಗ ಕೆತ್ತುತ್ತಾನೂ ಇರಲಿಲ್ಲ. ಎರಡೆರಡು ಕಲ್ಲುಗಳನ್ನು ಸೇರಿಸಿ ಕಟ್ಟುವ ಅವರ ಕ್ರಮ ಬಹಳ ಮೆಚ್ಚುವಂಥದ್ದು. ಅದೊಂದು ಅಪೂರ್ವವಾದ, ಅದ್ಭುತ ನೈಪುಣ್ಯತೆ ಅಂತಲೇ ಹೇಳಬಹುದು. ಈಗ ಸ್ಟ್ರಕ್ಚರಲ್ ಇಂಜಿನೀಯರಿಂಗ ಅಂತ ನಾವೇನು ಹೇಳ್ತೀವಿ, ಅವೆಲ್ಲ ಆಗಲೂ ಇದ್ದವು.

**ಕಣವಿ :** ಇದರ ಬಗ್ಗೆ ಲಿಖಿತ ರೂಪದೊಳಗ ಏನಾದ್ರೂ ದಸ್ತಾವೇಜುಗಳು ಸಿಕ್ಕಿವೆಯಾ; ಅವರು ಉಪಯೋಗಿಸುತ್ತಿದ್ದಂತಹ ಸಲಕರಣೆಗಳು, ಉಪಕರಣಗಳು, ತಂತ್ರಜ್ಞಾನ ಇತ್ಯಾದಿಗಳ ಬಗ್ಗೆ ?

**ಶೆಟ್ಟರ :** ಈಗಿನವರ ಬಗ್ಗೆ ನಾವು ಸಂಗ್ರಹ ಮಾಡ್ತಾ ಇದೀವಿ. ಹಿಂದ ಬಹುಶಃ ತಾಳೆಗರಿಗಳನ್ನ ಉಪಯೋಗಿಸಿಕೊಂಡು ಈ ಕೌಶಲ್ಯಗಳನ್ನ ಲಿಖಿತ ರೂಪದೊಳಗೆ ಸಂಗ್ರಹಿಸಿರಬಹುದು. ಒರಿಸ್ಸಾದೊಳಗೆ ಒಂದು ಸಿಕ್ಕಿದೆ. ಎಷ್ಟು ಚೆನ್ನಾಗಿ ಅವರು ದೇವಸ್ಥಾನವನ್ನು ಕಟ್ಟುವ ಬಗ್ಗೆ ಸಂಕೀರ್ಣ ಕೌಶಲಗಳನ್ನ ಒಂದು ತಾಳೆಗರಿಯಲ್ಲಿ ಸಂಗ್ರಹಿಸಿ ಇಟ್ಟಿದ್ದಾರೆ ಮತ್ತು ಅದನ್ನು ಅವರು ಅನುಸರಿಸುತ್ತಾರೆ ಕೂಡ. ಆದರೆ, ಇಲ್ಲಿ ನಮ್ಮಲ್ಲಿ ಅಂಥಾವು ಸಿಕ್ಕಿಲ್ಲ. ನಮ್ಮವರು ಬರವಣಿಗೆಕಿಂತಾ ಕೆತ್ತನೆ ಕೆಲಸ ಹೆಚ್ಚು ಮಾಡಿದ್ದಾರೆ.

**ಕಣವಿ :** ಆಗಮ ಶಾಸ್ತ್ರದೊಳಗ, ದೇವಸ್ಥಾನಗಳ ಬಗ್ಗೆ ಹೆಚ್ಚು ಉಲ್ಲೇಖ ಇವೆ ಅಂತಾರೆ. ಅದು ಕೇವಲ ಪೂಜೆ ಪುನಸ್ಕಾರಗಳ ಬಗ್ಗೆನಾ ಅಥವಾ ವಾಸ್ತುಶಿಲ್ಪ, ವಿನ್ಯಾಸ ಇದೆಲ್ಲದರ ಬಗ್ಗೆಯೂ ಪ್ರಸ್ತಾಪವಿದೆಯಾ?

**ಶೆಟ್ಟರ :** ಪೂಜೆ ಇತ್ಯಾದಿ ಸಂಪ್ರದಾಯಗಳ ಬಗ್ಗೆ ಅವರು ಹೆಚ್ಚು ಉಲ್ಲೇಖ ಮಾಡ್ತಾರೆ. ಆದರೆ ಅದರಲ್ಲಿ ಯಾವ ಜಾಗೆ ಆಯ್ಕೆ ಮಾಡಿಕೊಳ್ಳಬೇಕು, ಯಾವ ರೀತಿ ದೇವಸ್ಥಾನ ನಿರ್ಮಾಣಾ ಆಗಬೇಕು ಅವೆಲ್ಲಾನೂ ಬರ್ತಾವು. ಆಮೇಲೆ ಪ್ಲಂಬ್ ಲೈನ್ಸ್ ಹ್ಯಾಗೆ ತಯಾರಿಸಬೇಕು, ಕಲ್ಲಿನ ಆಯ್ಕೆ, ಇವೂ ಭಾಳ ಮುಖ್ಯ. ಆದರೆ ನನಗನ್ನಿಸುತ್ತೆ, ಹೆಚ್ಚಾಗಿ ಇದೆಲ್ಲಾ ಅವರಿಗೆ ಅವರ ಸ್ವಂತ ಅನುಭವದಿಂದ ಬಂದಿರೂದು, ಗ್ರಂಥಗಳನ್ನು ನೋಡಿ, ಕಲಿತು ಅನುಸರಿಸಿ ಅಲ್ಲ ಅಂತ.

ದೇವಸ್ಥಾನಗಳ ನಿರ್ಮಾಣದೊಳಗ ಸ್ಕೇಲ್, ಪ್ರಮಾಣ ಅನ್ನುವುದು ಇರ್ತದೆ. ಕೆಲವೊಮ್ಮೆ ಈ ಸ್ಕೇಲ್ ಅನ್ನುವುದನ್ನು ಕೂಡಾ ದೇವಸ್ಥಾನದೊಳಗೇನೆ ಬರೆದು, ಕಟ್ಟಿರುವಂಥದ್ದು ಇದೆ; ದೇವಕೊಳ, ದೇವಕೋಲು ಎಂದೆನ್ನುತ್ತಾರೆ. ಒಮ್ಮೆ ಒಬ್ಬ ಆಶ್ರಯದಾತ, ಯಜಮಾನನ ಎತ್ತರದ ಮೇಲೆ, ಅವನ ಅಂಗಾಂಗಗಳ ಮೇಲೆ ಸ್ಕೇಲು ತಯಾರು ಮಾಡ್ತಿದ್ದರು. ನಮಗೆ ಇಂಥ ಸಾಕಷ್ಟು ಉಲ್ಲೇಖಗಳು, ಸಿಗ್ತಾವ.

**ಕಣವಿ :** ಈ ಎಲ್ಲ ಜ್ಞಾನ ಹೆಚ್ಚಾಗಿ ಮೌಖಿಕವಾಗಿ ಇತ್ತಾ?

**ಶೆಟ್ಟರ :** ಇಲ್ಲ, ಜ್ಞಾನ ಹೆಚ್ಚಾಗಿ ರೂಢಿಯಿಂದ, ಸ್ವತಃ ಮಾಡುವುದರಿಂದ ಬಂದದ್ದು. ನಂತರ ಅದನ್ನ ಮೌಖಿಕವಾಗಿ ಇನ್ನೊಬ್ಬರಿಗೆ ವರ್ಗಾಯಿಸತಿದ್ದರು. ಶಿಷ್ಯರು ಗುರುಗಳಿಂದ ಕಲಿತಿದ್ದರು. ಗಮನಿಸಬೇಕಾದ ಮತ್ತೊಂದು ಅಂಶ ಅಂದರೆ, ಹೆಚ್ಚಿನ ಶಿಲ್ಪಗಳಿಗೆ ಯಾವ ಶಿಲ್ಪಿಯ ಹೆಸರನ್ನೂ



ನೀಡಲಾಗಿಲ್ಲ. ಯಾಕಂದ್ರ, ಒಂದು ಅದು ಕೂಡಿ ಜೋಡಿಸಿ ಮಾಡಿದ್ದು, ಒಂದೆ ಕಲ್ಲಿನೊಳಗ ಮಾಡಿದ್ದಲ್ಲ. ಆದರೆ ಅವರಿಗೆ ಒಬ್ಬ ನಾಯಕ, ಮಾಸ್ಟರ್ ಅಂತ ಇರ್ತಿದ್ದ. ಈಗ ಕರ್ನಾಟಕ ಕಲಾ ಇತಿಹಾಸವನ್ನ ಗಮನಿಸೋದಾದ್ರ, ಅದರ ರೂವಾರಿ ಅಥವಾ ಮಾಸ್ಟರ್ ಅಂತ ಮಲ್ಲಿತಮ್ಮನನ್ನ ಗುರುತಿಸಲಾಗ್ತದೆ. ಅವನು ಹರಿಹರದಿಂದ ಸೋಮನಾಥಪುರತನಕ ಬಂದಿದ್ದನ್ನ ನಾನು ಚಾರ್ಟ್ ಮಾಡಿ ಕೊಟ್ಟಿದೀನಿ. ಅವನು ಪ್ರತಿ ನಾಲ್ಕು ವರ್ಷಗಳಿಗೊಮ್ಮೆ ತನ್ನ ಸ್ಥಾನವನ್ನ ಬಿಟ್ಟು ಬೇರೆ ಪ್ರದೇಶಕ್ಕೆ ಹೋಗುವುದು ಉಲ್ಲೇಖಿತವಾಗಿದೆ. ಇದು ಒಂದು ರೀತಿಯಿಂದ ದೇವಸ್ಥಾನವನ್ನ ನಿರ್ಮಾಣ ಮಾಡಲಿಕ್ಕೆ ಸಾಧಾರಣ ಎಷ್ಟು ಸಮಯ ಹಿಡಿದಿರಬಹುದು ಅನ್ನುವುದನ್ನ ಪತ್ತೆ ಮಾಡಲಿಕ್ಕೆ ನನಗೆ ಸಹಾಯ ಮಾಡ್ತು. ಕೆಲವರು ಹೇಳ್ತಾರ, ಇದು ನಿರ್ಮಾಣ ಆಗಲಿಕ್ಕೆ ನೂರು ವರ್ಷ ಹಿಡಿದಿರಬೇಕು, ಅಂತ. ಅದು ನಿಜ ಅಲ್ಲ. ನಾಲ್ಕು ಅಥವಾ ಐದು ವರ್ಷಗಳಿಗಿಂತ ಅದು ಯಾವತ್ತೂ ಹೆಚ್ಚಿಗೆ ಇರಲಿಲ್ಲ. ಯಾವುದೇ ಕಾರಣದಿಂದ ಅವರಿಗೆ ಆ ಕಾಲಾವಧಿಯೊಳಗ ಅದನ್ನ ಮುಗಿಸಲಿಕ್ಕೆ ಆಗಲಿಲ್ಲ ಅಂದುಕೊಳ್ಳಿ, ಅಂಥದು ಯಾವತ್ತೂ ಮುಗೀಲೇ ಇಲ್ಲ. ಶಿಲ್ಪಿಗಳು ವಲಸೆ ಹೋಗ್ತಾ ಇದ್ದಂತಹ ಪ್ರಕ್ರಿಯೆ ಒಂದು ನಿರ್ಮಾಣದ ಯೋಜನೆಗೆ ಎಷ್ಟು ಸಮಯ ತಗುಲ್ತಾ ಇತ್ತು ಅನ್ನುವುದನ್ನ ತಿಳಿಲಿಕ್ಕೆ ಸಹಾಯವಾಯ್ತು. ಅವರು ಸೆಕ್ಟೇರಿಯನ್ ಇದ್ರೋ ಇಲ್ಲೋ, ಬರೀ ವೈಷ್ಣವ ದೇಗುಲಗಳನ್ನಷ್ಟ ನಿರ್ಮಿಸಿದರೋ ಅಥವಾ ಶೈವ ದೇಗುಲಗಳನ್ನೂ ನಿರ್ಮಿಸಿದರೋ ಈ ಎಲ್ಲ ಅಂಶಗಳು ಗೊತ್ತಾಗ್ತವೆ.

ಯಾಕಂದರೆ ಕೆಲವು ಶಿಲ್ಪಿಗಳು, ಅವರ ಕುಶಲತೆಯ ಆಧಾರದ ಮೇಲೆ ಒಂದು ನಿರ್ದಿಷ್ಟ ಪಂಗಡದ ಮೇಲಷ್ಟೇ ಕೆಲಸ ಮಾಡಿದ್ರು. ಶ್ರೀವೈಷ್ಣವ ಪಂಗಡ ಬಂದ ಮೇಲೆ, ಒಂದು ಹೊಸ ರೀತಿ, ವಿನ್ಯಾಸ, ಪಠ್ಯ, ಚಲನೆ, ಹೊಸತನ, ವೈಷ್ಣವ ಶಿಲ್ಪಗಳಿಗೆ ಬಂತು. ಒಂದೇ ಶೈಲಿಯೊಳಗ ನುರಿತಂತ ಕಲಾವಿದ ಒಬ್ಬ ಸಾಮಾನ್ಯ ಶಿಲ್ಪಿಗಿಂತ ಹೆಚ್ಚು ಕುಶಲತೆಯಿಂದ ಶಿಲ್ಪಗಾರಿಕೆ ಮಾಡ್ತಿದ್ದ.

ಅದರೊಳಗ ಶೈವರೂ ಇದ್ರು. ಆದರೆ ಒಟ್ಟಾರೆ ಹೇಳೋದಾದರೆ, ಈ ಶಿಲ್ಪಿಗಳು ಒಂದು ನಮೂನಿ



ಕಾರಿನ ಚಾಲಕರಿದ್ದಂಗ. ಕಾರು ಕಲಿತವರು ಯಾವ ಕಾರಾದರೂ ಓಡಿಸಬಹುದು. ವರ್ಸಟೈಲ್ ಆಗಿದ್ರು.

**ಕಣವಿ :** ಅಂದ್ರ ಅವರು ಸೆಕ್ಯುಲರ್ ಅಥವಾ ವ್ಯವಸಾಯಿಕ ಶಿಲ್ಪಿಗಳು ಇದ್ರು ಅಂತೀರಿ ?

**ಶೆಟ್ಟರ :** ಈಗ ನೋಡ್ರಿ. ಅದ್ರಲ್ಲಿ ಸಹಾ ಎರಡು ಅಭಿಪ್ರಾಯಗಳು ಇದ್ವು. ಅಲ್ಲಿ ಯಾವುದೇ ಒಂದು ಅಭಿಪ್ರಾಯ ಇತ್ತು ಅಂತಿಲ್ಲ. ಅವರು ಸೆಕ್ಟೇರಿಯನ್ ಇದ್ರು ಅಂತಲೂ ಅಲ್ಲ, ಇಲ್ಲ ಅಂತಾನೂ ಹೇಳಲಿಕ್ಕೆ ಆಗುವುದಿಲ್ಲ. ಅವ್ರು ಶೈವ ಅಥವಾ ವೈಷ್ಣವ ಭಕ್ತರಾಗಿದ್ದರಾ ಅಂತ ಕೇಳಿಕೊಂಡರ ಅದಕ್ಕ ತಕ್ಕ ಉತ್ತರ ಸಿಗೂದಿಲ್ಲ. ಆನಂದ ಕುಮಾರಸ್ವಾಮಿ ಅವರು ಮತ್ತು ಅದಕೂ ಮೊದಲು ಈ. ಬಿ. ಹೆವೆಲ್ ಅವರು ಕಲಾಶಿಲ್ಪಿಗಳು ಅನಾಮಧೇಯರಾಗಿರಲಿಕ್ಕೆ ಬಯಸಿದ್ರು ಅಂತ ಹೇಳಿದರು. ಅವರ ಪ್ರಕಾರ ತಮ್ಮ ಕಲಾವಂತಿಕೆಯನ್ನ ವ್ಯಕ್ತಪಡಿಸೋದೇ, ದೇವರ ಮೂರ್ತಿಗಳನ್ನು ಮರುಸೃಷ್ಟಿ ಮಾಡುವುದೇ ಅವರಿಗೆ ಒಂದು ರೀತಿಯ ಆರಾಧನಾಭಾವವನ್ನು ತಂದುಕೊಡ್ತಿತ್ತು.

ಆದರೆ ನಾನು ಅದಕ್ಕ ವ್ಯತಿರಿಕ್ತವಾಗಿ ಬರೆದೀನಿ. ಯಾಕಂದ್ರೆ ಅಂಥಾ ಒಂದು ಸನ್ನಿವೇಶ ಆಗ್ಲಿ, ಭಾವನೆ ಆಗ್ಲಿ ಅಲ್ಲಿ ಇರಲೇ ಇಲ್ಲ. ಮಾಡಿದ ಕೆಲಸಕ್ಕೆ ಸಂಭಾವನೆ ಸಿಕ್ಕಿತಾ, ಅದು ಮುಗಿದ ಮೇಲೆ ಅವರು ಹೊರಡತಿದ್ರು. ಪ್ರತಿಫಲ ಇಲ್ಲದ ಕಡೆ ಅವರು ನಿಂತಿದ್ದನ್ನ ನಾವು ಕಾಣೋದೇ ಇಲ್ಲ. ಹಂಗಾಗಿಯೇ ಸಾಕಷ್ಟು ದೇವಾಲಯಗಳ ನಿರ್ಮಾಣ ಅರ್ಧಕ್ಕೇ ನಿಂತಿರುವುದನ್ನ ನಾವು ಇವತ್ತಿಗೂ ಕಾಣ್ತೀವಿ. ಭಕ್ತಿ ಅದೂ, ಇದೂ, ಎಲ್ಲಾ ನಾವು ಊಹೆ ಮಾಡಿ ಹೇಳೋದು ಅಷ್ಟೇ. ಅವರು ತಮ್ಮ ಹೊಟ್ಟೆಗಾಗಿನೇ ಇದನ್ನೆಲ್ಲಾ ಮಾಡತಿದ್ರು. ಯಾವಾಗ ಒಂದು ಜಾಗದೊಳಗ ಕೂಲಿ ಸಿಗಲಿಲ್ಲೋ ಅವರು ತಮ್ಮ ಕಾರ್ಯಕ್ಷೇತ್ರವನ್ನ ಬದಲಾಯಿಸಿಕೊಂಡುಬಿಡತಿದ್ರು. ಅದರೊಳಗೂ ಕೆಲವು ಜನ ಮಾತ್ರ ನಮ್ಮೂರಿನಲ್ಲಿ ಕಟ್ಟುವ ದೇಗುಲಕ್ಕೆ ಮಾತ್ರ ನಾನು ಕೆಲಸಾ ಮಾಡತೀನಿ, ಬೇರೆ ಊರಿಗೆ ನಾನು ಹೋಗುವುದಿಲ್ಲ ಅಂತ ಹೇಳತಿದ್ರು. ಹಿಂಗಾಗಿ ಅವರ ಹೆಸರುಗಳು ಸ್ಥಳೀಯವಾಗಿ ಮಾತ್ರ ನಮಗ ನೋಡಲಿಕ್ಕೆ ಸಿಗ್ತವೆ.

ನಮ್ಮ ಬೇಲೂರಿನ ದೇವಸ್ಥಾನವನ್ನ ಕಟ್ಟಿರುವ ಎಲ್ಲಾ ಶಿಲ್ಪಿಗಳು ಲಕ್ಕುಂಡಿ, ಲಕ್ಷ್ಮೇಶ್ವರ, ಗದಗನಿಂದ ಬಂದವರೇ ಆಗಿದ್ರು. ಅವರ ಕೆಲಸಗಳಲ್ಲಿ ಅವರೇ ಆ ಊರುಗಳ ಹೆಸರುಗಳನ್ನು ಹೇಳಿಕೊಂಡಿದ್ದಾರೆ. ಯಾಕಂದ್ರೆ ಬೇಲೂರಿನಲ್ಲಿ ಆಗ ಯಾವ ಶಿಲ್ಪಿಗಳೂ ಇರಲಿಲ್ಲ. ಇಡೀ ಬೇಲೂರಿನ ದೇವಸ್ಥಾನ ನಿರ್ಮಾಣ ಆಗಿರೋದೇ ಉತ್ತರ ಕರ್ನಾಟಕದ ಶಿಲ್ಪಿಗಳಿಂದ. ಅವರ ಹೆಸರುಗಳನ್ನು ಸಹ ಅವರು ಬರೆದುಕೊಂಡಿದಾರೆ. ತಾಳಗುಂದ, ಗದಗ, ಲಕ್ಕುಂಡಿ, ಲಕ್ಷ್ಮೇಶ್ವರ. ಇವತ್ತಿಗೂನೂ ಅವು ಶಿಲ್ಪದ ಕೇಂದ್ರಗಳು. ಅದರಲ್ಲೂ ಗದಗ ಅತ್ಯಂತ ಪ್ರಖ್ಯಾತ ಕೇಂದ್ರವಾಗಿತ್ತು. ಹೊಯ್ಸಳ ವಿಷ್ಣುವರ್ಧನ ದೇಗುಲ ನಿರ್ಮಾಣ ಮಾಡಬೇಕು ಅಂದಾಗ, ಮಾದರಿ ಅಂದ್ರ ಚಾಳುಕ್ಯ ದೇಗುಲಗಳೇ ಆಗಿದ್ವು. ಅವನ ದೃಷ್ಟಿಯೊಳಗೂನೂ ಶಿಲ್ಪಿಗಳು ಅಂದ್ರ ಚಾಳುಕ್ಯ ಶಿಲ್ಪಿಗಳೇ ಆಗಿದ್ರು. ಆಗ ಬೇಲೂರಿನಲ್ಲಿ ಶಿಲ್ಪಿಗಳೇ ಇರಲಿಲ್ಲ.

**ಕಣವಿ :** ಎಷ್ಟು ಕಾಲ ಹಿಂದಕ್ಕೆ ಚಾಚಿಕೊಂಡಿದೆ ಅಂತೀರಿ ಈ ದೇಗುಲ ನಿರ್ಮಾಣದ ಐತಿಹ್ಯ ?

**ಶೆಟ್ಟರ :** ನೋಡಿ, ಈಗ ಗುಡಿ ಮತ್ತು ದೇಗುಲಗಳಿಗೆ ವ್ಯತ್ಯಾಸ ಇದೆ. ಗುಡಿಗೆ ಭಿನ್ನವಾದ ಕಟ್ಟಡದ ಮಾದರಿ. ಇದಕ್ಕೆ ಯಾವದೇ ರೀತಿಯ ವಿಶೇಷ ವಾಸ್ತು ವಿನ್ಯಾಸ ಬೇಕಾಗುವುದಿಲ್ಲ. ಇಲ್ಲಿ ಭಕ್ತರಿಗೆ ಮಧ್ಯವರ್ತಿಯ ಅಗತ್ಯವೂ ಇರಲಿಲ್ಲ. ಮಾನವ ಇತಿಹಾಸದ ಉದ್ದಕ್ಕೂ ನಾವು ಗುಡಿಗಳ ಇರುವಿಕೆಯನ್ನ, ಐತಿಹ್ಯವನ್ನ ಗಮನಿಸಬಹುದು. ಇವತ್ತಿಗೂ ಮರದ ಕೆಳಗ ಒಂದು ಸಣ್ಣ ಗುಡಿ ಮಾಡಿ, ಪೂಜಿಸೋದನ್ನ ನಾವು ನೋಡ್ತೀವಿ. ದೇಗುಲ, ಮಂದಿರ ಇದಕ್ಕಿಂತ ಭಿನ್ನವಾದದ್ದು.

ಬೌದ್ಧ ಮಂದಿರಗಳು ಬೇರೆ ಒಂದು ರೀತಿ ಮೊನಾಸ್ಟಿಕ್ ಕ್ರಿಯೇಶನ್ಸ್. ಹಿಂದು ದೇವಸ್ಥಾನಗಳು ಬೌದ್ಧ ದೇಗುಲಗಳ ನಿರ್ಮಾಣದಿಂದ ಪ್ರಭಾವಿತಗೊಂಡಿದ್ವು ಅಂತಲೇ ಹೇಳಬಹುದು. ಸ್ಥೂಲವಾಗಿ ಹೇಳೊದಾದರೆ, ಕ್ರಿ. ಶ. ೩ನೇ ಶತಮಾನಕ್ಕಿಂತ ಮುಂಚೆ ನಮಗೆ ಹಿಂದು ದೇವಸ್ಥಾನಗಳು ಸಿಗುವುದೇ ಇಲ್ಲ. ಗುಡಿಗಳು ಇದ್ವು. ಸಣ್ಣ ಸಣ್ಣ ಮಣ್ಣಿನ ಮಂದಿರಗಳು, ಒಂದು ಸಣ್ಣ ಕಲ್ಲಿಟ್ಟು ಪೂಜೆ ಮಾಡುವುದು, ಇವತ್ತಿಗೂ ಮಾರೆಮ್ಮ, ಇಂಥಾ ದೇವರುಗಳ ಪೂಜೆ ಆಗ್ತಿದ್ದನ್ನ ನಾವು ನೋಡಬಹುದು. ಆದರೆ, ಗುಡಿಗೂ, ದೇಗುಲಕ್ಕೂ ಇರುವ ಮುಖ್ಯ ವ್ಯತ್ಯಾಸ ಅಂದ್ರ, ವಿನ್ಯಾಸದ ವಿಷಯದಲ್ಲಿ ವ್ಯತ್ಯಾಸ ಇರೋದು ಬೇರೆ, ಅದರ ಜೊತೆಜೊತೆಗೆ ಇದ್ದುದ್ದು ಏನು ಅಂದ್ರ ದೇಗುಲಕ್ಕ ತನ್ನದೇ ಆದ ಬಹುಮುಖ್ಯವಾದ ವಿನ್ಯಾಸ, ಯೋಜನೆ ಇರ್ತಿತ್ತು. ಅದರೊಳಗ, ಅರ್ಚಕರು, ಭಕ್ತರು, ಕಲಾವಿದರು ಎಲ್ಲರೂ ಕೂಡಿ ಇರಬಹುದಾಗಿತ್ತು. ಅವರು ಭಾಗಗಳನ್ನ ಮಾಡಿಕೊಂತ ಬಂದ್ರು. ಉದಾಹರಣೆಗೆ, ಅಂಗಭೋಗದೊಳಗಿದ್ದವರು, ದೇಗುಲಕ್ಕ ಸಂಬಂಧಿಸಿದ ಪೂಜಾಕಾರ್ಯಗಳಿಗೇನೇ ಅಂದರೆ ಪೌರೋಹಿತ್ಯಕ್ಕೆ ತಮ್ಮನ್ನು ತಾವು ಸೀಮಿತಗೊಳಿಸಿಕೊಂಡುಬಿಟ್ಟಿದ್ರು. ನಾವೇನು ಬ್ರಾಹ್ಮಣರು ಅಂತ ಹೇಳ್ತೀವಿ. ರಂಗಭೋಗದೊಳಗೆ ಇದ್ದಂಥವರು, ನವರಂಗದೊಳಗ ಇದ್ದಂಥವರು, ಕಸಗುಡಿಸುವವರು, ಸ್ವಚ್ಛತೆಯ ಕೆಲಸ ಮಾಡುವವರು, ವಾದ್ಯ, ಮೇಳದವರು, ನೃತ್ಯ ಮಾಡುವಂಥವರು ಮುಂತಾದವರು. ಇವರಿಗೆ ಅಂಗಭೋಗದೊಳಗ ಪ್ರವೇಶ ಇರ್ತಿರಲಿಲ್ಲ. ಇವೆಲ್ಲ ಪ್ರವೇಶ ಪಡ್ಕೊಂಡದ್ದು ಆಗಮಗಳ ಮೂಲಕ. ಮತ್ತ ಇದರ ಜೊತೆಗೆ ಭಾಳಾ ವಿಶೇಷ ಅಂದ್ರ ಗುಡಿಗಳಿಗೆ ಆಸ್ತಿ ಇರೂದಿಲ್ಲ. ಆನಂತರ ಬಂದ ಸಂಗತಿ ದೇವಸ್ಥಾನಗಳಿಗೆ, ಅದನ್ನು ನಿಭಾಯಿಸಲಿಕ್ಕೆ ಭೂದತ್ತಿ ಇಂಥಾವು ಇರತಿದ್ವು. ಅರ್ಚಕರಿಗೆ ವೇತನ ಕೊಟ್ಟು ಇಟ್ಟುಕೊಳ್ಳಲಾಗ್ತಿತ್ತು. ಗುಡಿಗಳಲ್ಲಿ ಕೂಡಾ ಅದರ ಆದಾಯದ ಆಧಾರದ ಮೇಲೆ ಇತ್ತೀಚೆಗೆ ಆ ವ್ಯವಸ್ಥೆ ಪ್ರಾರಂಭವಾಗಿದೆ. ಕ್ರಿ.ಶ. ೩ನೇ ಶತಮಾನಕ್ಕಿಂತ ಮೊದಲು ನಾವದನ್ನು ಕಾಣೂದಿಲ್ಲ.

**ಕಣವಿ :** ಹಂಗಾದ್ರ ಈ ಅರ್ಚಕರು ಒಂದು ನಿರ್ದಿಷ್ಟ ಪಂಗಡದ ನೌಕರರಂತೆ ಕೆಲಸ ಮಾಡ್ತಾ ಇದ್ದರೋ ಅಥವಾ?

**ಶೆಟ್ಟರ :** ದಾನಿಗಳು ತಮ್ಮ ಆಯ್ಕೆಯ ಅರ್ಚಕರುಗಳನ್ನ ನಿಯಮಿಸುತ್ತಿದ್ದರು. ಸಾಮಾನ್ಯವಾಗಿ ಇದು ದೇಗುಲ ಸ್ಥಾಪಿಸುವ ಸಂದರ್ಭಗಳಲ್ಲಿ ಇರತಿತ್ತು. ಅವರು ಹೇಳಿದವರಿಗೆ ಪೌರೋಹಿತ್ಯ ವಹಿಸುವ ಸನ್ನಿವೇಶಗಳೂ ಇರತಿದ್ವು. ಆದರೆ, ಅಗ್ರಹಾರದಲ್ಲಿ ಇರತಿದ್ದ ದೇವಸ್ಥಾನಗಳಿಗೂನೂ, ಅಗ್ರಹಾರೇತರ ದೇವಸ್ಥಾನಗಳಿಗೂನೂ ಸ್ವಲ್ಪ ವ್ಯತ್ಯಾಸ ಇದೆ. ಅಗ್ರಹಾರದಲ್ಲಿ ಇರತಿದ್ದ ಕುಟುಂಬಗಳವರಿಗೆ ಭೂದತ್ತಿಗಳು ಇರತಿದ್ವು. ಅರ್ಚಕ ವೃತ್ತಿ ಇರತಿತ್ತು. ಜೀವನ ನಡೀತಿತ್ತು. ಅದರೊಳಗೂ ಅವರವರ ನಡುವೆ ಪಾಳಿಗಳು ಇರತಿದ್ದವು. ನನ್ನ ಸೋಮನಾಥಪುರದ ಬಗೆಗಿನ ಕೃತಿಯನ್ನ ಗಮನಿಸಿರುವುದಾದರೆ ಈ ಎಲ್ಲ ವಿವರಗಳೂ ಸಿಕ್ಕುಬಿಡ್ತವೆ. ಯಾರು ಯಾರು ರಂಗಭೋಗದೊಳಗೆ ಇರತಾ ಇದ್ರು, ಯಾರು ಯಾರು ಅಂಗಭೋಗದೊಳಗ ಇರತಾ ಇದ್ರು, ಹೋಮಹವನಾದಿಗಳಿಗೆ ಕಾಷ್ಠವನ್ನು ತರತಾ ಇದ್ದವರು ಯಾರು, ಅಕ್ಕಿ, ಎಣ್ಣೆಯನ್ನ ತರತಾ ಇದ್ದವರು ಯಾರು ಯಾರು ಅದನ್ನೆಲ್ಲ ಅದರಲ್ಲಿ ನಾನು ಹೇಳಿದೀನಿ. ಸೋಮನಾಥಪುರ ದೇವಸ್ಥಾನವಂತೂ ತುಂಬ ವಿಶಿಷ್ಟವಾದುದು. ಸಾಕಷ್ಟು ಮಾಹಿತಿಯನ್ನು ಕೊಟ್ಟಿದೀನಿ ಅದರ ಬಗ್ಗೆ. ಆ ರೀತಿಯ ಮಾಹಿತಿ ಎಲ್ಲ ದೇವಸ್ಥಾನಗಳಲ್ಲೂ ಸಿಗುವುದಿಲ್ಲ. ನೀವು ಇದನ್ನ ಕೇವಲ ಊಹೆ ಮಾಡಿಬಿಡಬಹುದು. ಪ್ರಧಾನ ಅರ್ಚಕರ ವೇತನ, ಜೀವನ ವಿಧಾನಗಳೇ ಬೇರೆ ಇರ್ತಿದ್ವು. ಉಪ ಅರ್ಚಕರ ವೇತನ, ಜೀವನ ವಿಧಾನಗಳೇ ಬೇರೆ ಇರ್ತಿದ್ವು. ಅವರ

ವೇತನಗಳನ್ನ ನಿಗದಿಪಡಿಸುವಾಗಲೇ ನಿಮಗೆ ಗೊತ್ತಾಗಿ ಬಿಡ್ತದೆ. ಎಂಥ ಸೌಕರ್ಯಗಳನ್ನ, ಸವಲತ್ತುಗಳನ್ನ ಅವರು ಸಮಾಜದಲ್ಲಿ ಅನುಭವಿಸಿದರು ಅಂತ. ಪ್ರಧಾನ ಅರ್ಚಕರ ವೇತನ ಇಂತಿಷ್ಟು ಅಂತ ಇರ್ತಿತ್ತು. ಸಹಾಯಕರಿರತಾರ, ಮಾಣಿ ಅಂತ ಅವನಿಗಿಷ್ಟು, ನೀರು ತರೋವ್ರಿಗಿಷ್ಟು, ಎಣ್ಣಿ ತರೋವ್ರಿಗಿಷ್ಟು, ಹೂಹಣ್ಣು ತರೋವ್ರಿಗಿಷ್ಟು, ನೈವೇದ್ಯ ಮಾಡೋವ್ರಿಗಿಷ್ಟು. ಅದರಲ್ಲಿ ಈ ಎಲ್ಲಾ ವಿವರಗಳ್ನ ಕೊಟ್ಟಿದೀನಿ.

ಗುಡಿಗಳೇನು ಇದಾವೆ, ಅವು ನ್ಯಾಚುರಲ್ ಮತ್ತು ಗ್ರಾಮೀಣ ಪ್ರದೇಶದೊಳಗ ಏನು ಅವರ ಭಕ್ತಿ ಅಥವಾ ನಂಬಿಕಿ ಇತ್ತೋ, ಅದರ ಪ್ರಕಾರ. ಅವ್ರಿಗೆಲ್ಲಾ ಮೂರ್ತಿಲಕ್ಷಣಗಳು ಇರೂದಿಲ್ಲ. ಸಾಮಾನ್ಯವಾಗಿ ಒಂದು ಕಲ್ಲಿಟ್ಟು ಅದಕ್ಕ ದುರ್ಗಮ್ಮ ಅಂತ ಕರೀತಾರ. ಅದನ್ನ ಬ್ಯಾರೇದವ್ರು ಮಾರೆಮ್ಮ ಅಂತ ಕರೀತಾರ. ಅಥವಾ ಇನ್ನೊಂದೇನೋ ಹೆಸರು. ಒಂದಿಷ್ಟು ಎಣ್ಣಿ ಹಾಕಿರ್ತಾರ. ಇವು ಒಂದು ಥರದ್ದು. ಎರಡನೆಯ ಥರದ್ದು ದೇವಸ್ಥಾನಗಳು. ಇದು ಸ್ವಲ್ಪ ಖರ್ಚಿನ ಕೆಲಸ. ದೇವಸ್ಥಾನಗಳಿಗೆ ಪೋಷಕರು, ದಾನಿಗಳು ಬೇಕು. ಈ ಖರ್ಚುವೆಚ್ಚಾ ಎಲ್ಲಾ ಈ ದಾನಿಗಳೇ ನೋಡಿಕೋಬೇಕಾಗುತಿತ್ತು.

**ಕಣವಿ :** ನನಗೊಂದು ಕುತೂಹಲ ಸದಾ ಇದೆ. ಈಗ ಎಲ್ಲಾ ಹಳ್ಳೀಗೆ ಹೋದ್ರೂನೂ ಒಂದು ಹಣಮಪ್ಪನ ಗುಡಿ ಇರ್ತದ, ಎಷ್ಟೋಕಡೆ ಒಂದು ಶಂಕರಲಿಂಗನ ಗುಡಿ ಇರ್ತದ, ಕೆಲವೊಂದು ಕಡೆ ದೇವಿ ಗುಡಿ ಇರ್ತದ... ಇವೇ ಇಷ್ಟು ಏಕೆ ಸಾರ್ವತ್ರಿಕವಾದವು. ಅವು ಕೆಲವು ಪ್ರಾಚೀನ ಕಲ್ಪ ಅಥವಾ ಆರಾಧನೆಗಳಾ? ರಾಮನ ಗುಡಿಗಳಿಗಿಂತ ಹಣಮಪ್ಪನ ಗುಡಿಗಳೇ ಹೆಚ್ಚೇಕೆ? ಇದು ಉತ್ತರ ಮತ್ತು ದಕ್ಷಿಣ ಭಾರತ ಎರಡರೊಳಗೂ ಎದ್ದು ಕಾಣುತ್ತಲ್ಲ?

**ಶೆಟ್ಟರ :** ದಕ್ಷಿಣ ಭಾರತದಲ್ಲಿ ಇರೂವಷ್ಟು ಉತ್ತರದಲ್ಲಿಲ್ಲ ಇದು. ದಕ್ಷಿಣದಲ್ಲಿ ಇದು ಮೊದಲಿಂದ

# ನೆಲದ ಬೆನ್ನು




**ನನ್ನ** ಮಟ್ಟಿಗೆ ನಾನಿದ್ದೆ
ಒಡಲುರಿಯ ದನಿಯೊಂದು
ಕೈ ಚಾಚಿತು
ನನ್ನದೇನಿದೆ
ನಾನೋ ಮೌನದ ಗೋಡೆಯ
ಭಾವಬಿಂದುವಿನ ಹೆಗಲ ಹಕ್ಕಿ

ಹಾರಿ ಕೂತೆ ಬೆರಳ ಮೇಲೆ
ಕಣ್ಣೀರು ಕಣ್ಣಾಗದ ಎದೆಯೊಳಗೆ
ಬಲೆ ನೆಯ್ದ ದಾರಿ ಕಂಡಿತು
ನನಗೋ ಅದು ಕಪ್ಪು ಕಾಡಿಗೆ

ಬೆಳಕಿಗಾಗಿ ಕಾದು ತವರಿಯಾಗಿದ್ದ
ದನಿಯ ಚಡಪಡಿಕೆ
ಗಂಟಲಲ್ಲೇ ಸೋತು ಕೈ ಚಲ್ಲಿ
ನೋವನು ಮೈ ತುಂಬಿಕೊಂಡು
ನಿಂತ ನೆಲವೇ ಬೆಂಕಿಯ ಬಲೆ

ಸೋತ ರೆಕ್ಕೆಯ ಮೇಲೆ ಕೂತ ಬೆವರ ಹನಿ
ಬೆಳಕಿನ ದಾರಿ ತೋರಿತು
ಅದು ನಡೆಯಲೂ ಆಗದ
ಮಾತಿಗೂ ಸಿಗದ
ಕಡಲ ಬೆನ್ನ ಹಾದಿ...

ಚಲನಾ ಶಕ್ತಿಯ ಬೆರಳ ತುದಿಯಲಿ
ಮಿಂಚೊಂದು ಮೂಡಿ
ಕಣ್ಣಲ್ಲಿ ತುಳುಕಿದ ಬೆಳಕ ಹಾದಿಯಲಿ
ಚಿಗುರಿದ ಕನಸು
ಮೌನದ ಕಡಲ ಮಾತಾಗಿ
ಬೆವರಿದ ಬದುಕಿನ ರಂಗೋಲಿಗೆ
ತೆಪ್ಪ ಹೊರುವ ಕೂಸಿನ ಹೆಗಲು

ದನಿಗೆ ಬಾಗಿದ ನನ್ನ ಬಾಹುಗಳು
ಬೆದರಿದ್ದು ಬದುಕಿಗಲ್ಲ
ಒಡಲ ಹಸಿವಿಗೆ
ಕಾಣದ ದಾರಿಗೆ
ತೊಗಲು ಬಿಚ್ಚಿದ ಕಣ್ಣ ಕುಣಿಕಿಗೆ...

ಹಸಿರಾಗುವ ನೆಲದ ಬೆನ್ನಿಗೆ
ನೇತಾಕಿದ ಮನಸುಗಳೇ
ನನ್ನುಸಿರ ಮೇಲೆ ಹೆಜ್ಜೆ ಊರುವ
ಬೆಳಕ ಕೊಡಿ
ದನಿಗೆ ದನಿಯಾಗುವೆ...

ಇರಲಿಲ್ಲ. ವಿಜಯನಗರ ಅರಸರ ಕಾಲದಿಂದ ಹುಟ್ಟಿಕೊಳ್ತು. ಊರಿಗೊಂದು ಹಣಮಪ್ಪನ ಗುಡಿ ಇರಬೇಕು ಅದು ವಿಜಯನಗರ ಅರಸರ ಕಾಲದಿಂದ ಬಂತು. ಅದಕ್ಕಿಂತ ಮುಂಚಿತವಾಗಿ ಇರಲಿಲ್ಲ. ಅದು ಮಾಧ್ವರಿಂದ ಬಂದ ಕಾನ್ಸೆಪ್ಟ್. ಅದಕ್ಕ ಒಂದು ಹಿನ್ನೆಲೆ ಇದೆ. ಒಬ್ಬರು ಮಾಧ್ವ ಗುರುಗಳು ಇದ್ರು ವಿಜಯನಗರ ಕಾಲದಲ್ಲೇನೆ. ಈಗ ಈ ಮಾಧ್ವರೊಳಗ ಎಲ್ರೂ ಅದನ್ನೇ ಪಂಚಮುಖಿ ಆಂಜನೇಯ ಆರಾಧನೆ ಮಾಡೂದು. ಇದು ಪುರಾಣಗಳಿಂದ ಬಂದದ್ದೇನಲ್ಲ. ಆಗ ಊರ ಹೊರಗ ಹಣಮಂತನ ದೇವಸ್ಥಾನ ಕಟ್ಟಿಸಬೇಕು ಅನ್ನೂದು. ಅದೂ ಒಂದು ಸಾವಿರದಾ ಒಂದು ದೇವಸ್ಥಾನಗಳನ್ನ ಕಟ್ಟಿಸಬೇಕು ಅನ್ನೂ ಐತಿಹ್ಯ ಅದೆ. ಅದು ವಾಸ್ತವವೋ, ಕಲ್ಪನೆಯೋ ಅಂತೂ ಆ ಸಮಯದೊಳಗ ಇದು ಕಾಣಿಸಿಕೊಂಡಿತು. ಎಲ್ಲಾ ದೇವಸ್ಥಾನಗಳೂ ಸಾಮಾನ್ಯವಾಗಿ ಗಡಿ ಹೊರಗೇ ಇರ್ತಾವು. ಊರ ಹೊರಗ ಹಣಮಪ್ಪ ಅನ್ನೂದು ಹಂಗ ಬಂತು. ಇದು ಒಂದು ಐತಿಹ್ಯ.

ಎರಡನೇದು ಏನು ಅಂತಂದ್ರ, ಸಾಂಪ್ರದಾಯಿಕ ಹಿನ್ನೆಲೆಯೊಳಗ ಕ್ಷೇತ್ರಪಾಲ ಅನ್ನುವ ಇನ್ನೊಂದು ಕೂಡ ಇತ್ತು. ಆ ಕ್ಷೇತ್ರಪಾಲಂದು ಒಂದು ಮುಖ್ಯವಾದ ಶಕ್ತಿ ಅಂತಂದ್ರ, ಕ್ಷೇತ್ರಗಳ ರಕ್ಷಣೆ ಮಾಡೋದು. ಗ್ರಾಮಕ್ಷೇತ್ರಗಳನ್ನ ಕೂಡ ರಕ್ಷಣೆ ಮಾಡೋದು ಅವನ ಕರ್ತವ್ಯ ಆಗಿತ್ತು. ಈ ಕ್ಷೇತ್ರಪಾಲರು, ಸಾಮಾನ್ಯವಾಗಿ ಯಕ್ಷರು. ಅದು ಮೊದಲಿನಿಂದಾನೂ ಇದೆ. ೧೪ನೇ ಶತಮಾನದ ನಂತರ, ಈ ಪಾತ್ರವನ್ನು ಹಣಮಪ್ಪ ವಹಿಸಿದ. ಅವನು ಪಂಚಮುಖಿ ಅನ್ನುವ ಆಗಿನ ಜನರ ಪರಿಕಲ್ಪನೆಯ ನಿರೀಕ್ಷೆಗಳನ್ನು ಈಡೇರಿಸುತ್ತಾನೆ ಕೂಡ ಹೀಗಾಗಿ ಹಣಮಂತ ಜನಪ್ರಿಯನಾದ.

**ಕಣವಿ :** ಆಮೇಲೆ, ಈ ನಾನ್–ಆಂತ್ರೋಪೋಮಾರ್ಫಿಕ್, ಮನುಷ್ಯಾಕಾರವಲ್ಲದ ಶಂಕರಲಿಂಗ. ಇನ್ನೂ ಹಳೆಯದು ಆಗಿರಬಹುದು ?

**ಶೆಟ್ಟರ :** ಹೌದು.

**ಕಣವಿ :** ಅನೇಕ ಪಾಶ್ಚಾತ್ಯರು ಲಿಂಗಕ್ಕೆ ಅಥವಾ ಯೋನಿಪೀಠದಲ್ಲಿರುವ ಲಿಂಗಕ್ಕೆ ಸೃಷ್ಟಿ ಕ್ರಿಯೆಯ ಪ್ರತೀಕ ಅಂದಿದ್ದಾರೆ ನೀವೇನಂತೀರಿ ?

**ಶೆಟ್ಟರ :** ಇರಬಹುದು ಅದರಲ್ಲಿ ತಪ್ಪೇನಿಲ್ಲ. ಫರ್ಟಿಲಿಟಿ ಕಲ್ಟ್ಸ್ ವಿಶ್ವದಲ್ಲೆಲ್ಲಾ ನಾವು ಕಾಣುತ್ತೇವೆ. ಅಷ್ಟೇ ಅಲ್ಲ ನಮ್ಮಲ್ಲಿ ಲಜ್ಜಾಗೌರಿ ಅಂತ ಒಂದು ಮೂರ್ತಿ ಅದ, ನೀವು ನೋಡಿರಬೇಕು ಅದನ್ನ. ನಮ್ಮ ಕರ್ನಾಟಕದಲ್ಲಿ ಬಹಳಷ್ಟು ಕಡೆ ಇದೆ. ಕುಶಾನರ ಕಾಲದಿಂದಲೇನೇ ಇದು ಪ್ರಾರಂಭ ವಾಗಿರೋದನ್ನ ನಾವು ಕಾಣ್ತೇವಿ.

**ಕಣವಿ :** ಈಗ ನಿಮ್ಮ ಹಳಗನ್ನಡ ಲಿಪಿ, ಲಿಪಿಕಾರರು, ಲಿಪಿ ವ್ಯವಸಾಯ ಬಗ್ಗೆ ಬರೆದ ಪುಸ್ತಕಕ್ಕೆ ಬರೋಣ. ಲಿಪಿಯ ವಿಕಾಸದ ಬಗ್ಗೆ ಮಾತಾಡುವಾಗ, ತಾವು ಆಕರಗಳನ್ನೆಲ್ಲಾ ಶಿಲಾ ಶಾಸನದಲ್ಲಿಯೇ ನೋಡಿದ್ದೀರಿ. ಆದರೆ ಲೇಖನ ಕೇವಲ ಶಿಲಾಶಾಸನಗಳಲ್ಲಷ್ಟೇ ಅಲ್ಲವಲ್ಲ. ತಾಡೋಲೆ ಇರ್ಬಹುದು, ಪ್ಯಾಪಿರಸ್ ಇರ್ಬಹುದು, ಇದೆಲ್ಲ ನಮ್ಮಲ್ಲಿ ಯಾವಾಗ ಶುರುವಾಯಿತು? ನಮಗೆ ಸಿಕ್ಕ ಅತ್ಯಂತ ಪ್ರಾಚೀನ ಹಸ್ತಪ್ರತಿ ಯಾವದು? ಅಕ್ಷರ ಕಲಸೋವ್ರು ಉಸುಗಿನ ಮ್ಯಾಲ, ಪಾಟೀ ಮ್ಯಾಲ ಎಲ್ಲಾ ಬರೀತಿದ್ದರು ಆದ್ದರಿಂದ ಶಾಸನಗಳಿಂದನೇ ಲಿಪಿ ಬೆಳಿತಂತ ಹೇಗೆ ಹೇಳೂದು?

**ಶೆಟ್ಟರ :** ಅದು ಸರಿ, ಹಂಗ ಹೇಳಲಿಕ್ಕೆ ಬರೂದಿಲ್ಲ. ಮೌಖಿಕ ಸಂಸ್ಕೃತಿ ಇದ್ದಾಗ ಕೂಡಾನೂ, ನೀವು ಹೇಳಿದ ಹಾಗೆ ನೀರಿನ ಮೇಲೆ ಅಥವಾ ಉಸುಗಿನ ಮ್ಯಾಲೆ ಅಥವಾ ಇನ್ನೊಂದು ಯಾವದಾದರೂ ಅಳಿಸಬಲ್ಲ ಸಾಧನದ ಮ್ಯಾಲೆ ಅದನ್ನ ಅವ್ರು ಮಾಡಿರುವ ಸಾಧ್ಯತೆ ಇದೆ. ಆದರ, ಅವುಗಳ ಅವಶೇಷ ಸಿಗಲ್ಲವಲ್ಲ. ಶಾಸನಗಳು ಕ್ರಿಸ್ತಪೂರ್ವ ಮೂರನೇ ಶತಮಾನದಿಂದ ಇಕಡೆ ಸಿಗತಾವು. ಬೌದ್ಧರಿಂದ ಮತ್ತು ಜೈನರಿಂದ ನಮ್ಮಲ್ಲಿ ಲೇಖನ ಪ್ರಾರಂಭವಾಯಿತು. ನಮಗ ಬ್ರಾಹ್ಮೀ ಶಾಸನಗಳು ೧೯ನೆಯ ಶತಮಾನದವರೆಗೂ ಓದಾಕ ಬರ್ತಿರಲಿಲ್ಲ. ನಮಗೆ ವಿಸ್ಮೃತಿಯಾಗಿತ್ತು. ಜೇಮ್ಸ್ ಪ್ರಿನ್ಸೆಪ ಎನ್ನುವ ಪಾಶ್ಚಾತ್ಯನೊಬ್ಬ ಒಂದು ದ್ವಿಭಾಷಾ ಶಾಸನ (ಗ್ರೀಕ ಮತ್ತು ಬ್ರಾಹ್ಮಿ ಲಿಪಿಗಳಲ್ಲಿ ಬರೆದದ್ದು) ತೆಗೆದುಕೊಂಡು ಬ್ರಾಹ್ಮೀ ಅಕ್ಷರಗಳನ್ನು ಒಂದೊಂದಾಗಿ ಗುರುತಿಸಿದ. ನಮ್ಮ ಯಾವ ಪಂಡಿತರ ಕಡೆನೂ ಆಗಲಿಲ್ಲ. ಔರಂಗಜೇಬನ ಕಾಲದಾಗೂ ಯಾರಿಗೂ ಓದಾಕ ಆಗಲಿಲ್ಲ. ನಾವೆಲ್ಲ ಮರೆತುಬಿಟ್ಟಿದ್ದೆವು.

**ಕಣವಿ :** ಆಮೇಲೆ, ನಾಗರೀನೂ ಇದರಿಂದ ಬಂತ್ರೀ?

**ಶೆಟ್ಟರ :** ನಾಗರೀ ಬಂದದ್ದು ಬಹಳ ನಂತರ, ೭ನೆಯ ಶತಮಾನದಲ್ಲಿ. ಕ್ರಿ. ಪೂ. ೩ನೆಯ ಶತಮಾನದಿಂದ ಕ್ರಿ. ಶ. ೩ನೆಯ ಶತಮಾನದ ವರೆಗೆ ಬ್ರಾಹ್ಮಿ ಒಂದೇ ಲಿಪಿಯಾಗಿತ್ತು ಎಲ್ಲ ಭಾಷೆಗಳಿಗೂ. ನಂತರ ಸಾವಕಾಶ ಇತರ ಲಿಪಿಗಳು ಬಂದವು. ಬ್ರಾಹ್ಮಿ ಕೇವಲ ಲಿಪಿಯಾಗಿತ್ತು, ಭಾಷೆ ಅಲ್ಲ. ಬ್ರಾಹ್ಮೀಯಿಂದ ಕನ್ನಡ ಬಂದಿದ್ದು.

ಅಫ್ಘಾನಿಸ್ತಾನದ ಗಾಂಧಾರ ಪ್ರದೇಶದಲ್ಲಿ ಅಶೋಕನಿಗೆ ಖರೋಷ್ಟಿ ಮತ್ತು ಅಮಹಾರಿಕ್ ಬರೆಯಬಲ್ಲ ಲಿಪಿಕಾರರು ಸಿಕ್ಕರು. ಅವನು ಅಲ್ಲಿ ಹೋಗಿ ಅವರ ಬರವಣಿಗೆಯನ್ನು ಅಭ್ಯಸಿಸಿ ತನ್ನ ಆದೇಶಗಳನ್ನು ಶಿಲಾಶಾಸನಗಳ ಮೂಲಕ ಮೂಡಿಸಲು ಕರೆತಂದ.

ಅಶೋಕನ ಬಗ್ಗೆ ನಾವು ಏನೇನೆಲ್ಲಾ ಹೇಳತೀವಿ. ಆದರೆ ಇದೆಲ್ಲಾ ಮುಖ್ಯ ಅಲ್ಲವೇ ಅಲ್ಲ. ನಾವು ಅವನನ್ನು ನೆನೆಸಬೇಕಾದದ್ದು ನಮ್ಮ ಲಿಪಿಗಳ ವಿಕಾಸಕ್ಕೆ ಕಾರಣೀಭೂತನಾದ ಎನ್ನುವದಕ್ಕಾಗಿ. ನಮ್ಮ ಸಂಸ್ಕೃತಿಗೆ ಎಲ್ಲದಕ್ಕೂ ಹೆಚ್ಚಿನ ಅವನ ಶಾಶ್ವತ ದೇಣಿಗೆ ಎಂದರೆ ಲಿಪಿ ಎನ್ನಬಹುದು.

**ಕಣವಿ :** ನಿಮ್ಮ ಇತ್ತೀಚಿನ ಭಾಷೆಯ ಇತಿಹಾಸದ ಬಗೆಗಿನ ಬರಹಗಳನ್ನು ಬಹಳ ಉತ್ಸಾಹ ಮತ್ತು ಕುತೂಹಲದಿಂದ ನಾನು ಓದಿದ್ದೇನೆ. ನಿಮ್ಮ ಅಮೂಲ್ಯ ಸಮಯ ಮತ್ತು ಒಳನೋಟಗಳಿಗಾಗಿ ಕೃತಜ್ಞ. ನಮಸ್ಕಾರ.

*(ಈ ಮಿಶ್ರ ಭಾಷಾ ಸಂಭಾಷಣೆಯನ್ನು ಕನ್ನಡಕ್ಕೆ ಇಳಿಸಲು ಸಹಾಯ ಮಾಡಿದ ಶ್ರೀಮತಿ ಛಾಯಾ ಭಗವತಿ ಅವರಿಗೆ ಋಣಿ)*

**ಶಿವಾನಂದ ಕಣವಿ**
**skanavi@gmail.com**

## ಗಜಲ್

ಸಹಸ್ರ ಶತಮಾನಗಳಿಂ ರಂಗಿನ
ಹೆಣಗಳು ಓಡಾಡುತಿವೆ ॥
ತಿನ್ನಲುಬಂದ ಜಿದ್ದಿನ ಪ್ರಾಣಿಗಳ
ಗುಂಪುಗಳು ಕಚ್ಚಾಡುತಿವೆ ॥

ತಿರುಗುವ ಗೋಳದಲಿ ಸಂಸ್ಕೃತಿ
ಸಂಸ್ಕಾರಗಳ ಸಗ್ಗಗಳವೆ...
ಶಾಂತಿ ಸಾರುತಿರುವ ಮಾನವನ
ಸಂಘಗಳು ಕಾಯಕದಲ್ಲಿವೆ ॥

ಸೈತಾನರು ಸೈತಾನರ ಛೇಲಗಳು
ಅಂದಿನಿಂದಿಂದಿಗೂ ಇವೆ...
ಅವರ ಹುಟ್ಟಡಗಿಸುವ ದೂತರ
ಸೈನ್ಯಗಳು ಗೋಳದಲ್ಲಿವೆ ॥

ಧನ, ಕನಕ, ತೈಲಗಳ ರೂಪದಲಿ
ಈ ವಿಚಿತ್ರ ಹೆಣಗಳವೆ ಸಾಕಿ...
ಅಸುರ ದುರಾಸೆಗಳಿಂ ವಿನಾಶದ
ಜ್ವಾಲೆಗಳು ಹರಡುತಿವೆ ॥

ನರಕವಾಸಿಗಳಿಗೆ ಸ್ವರ್ಗದ ಆಸೆ
ತೋರಿ ಹೆಣಗಳು ನಗುತಿವೆ...
ನೋಡು ಸಿರಾಜ್ ಸೌಹಾರ್ದದ
ಸಿರಿಗಳು ಅಪಾಯದಲ್ಲಿವೆ ॥

**ಯು. ಸಿರಾಜ್ ಅಹಮದ್ ಸೊರಬ**
ಕೇರಾಫ್ ಅಶ್ವಿನಿ ಮೆಡಿಕಲ್ಸ್, ಶ್ರೀನಿವಾಸ ಕಾಂಪ್ಲೆಕ್ಸ್
ಸೊಂಡೇಕೊಪ್ಪ ರಸ್ತೆ, ನೆಲಮಂಗಲ–೫೬೨ ೧೨೩

# ಒಕ್ಕೂಟ ವ್ಯವಸ್ಥೆಯ ರೂಪ ಸಂವಿಧಾನದಲ್ಲಿದೆ
# ಅದು ಕಲ್ಯಾಣ ರಾಜ್ಯ

ಪಿ. ಷಣ್ಮುಖಸ್ವಾಮಿ

ಮುಕ್ತ ಆರ್ಥಿಕ ನೀತಿಯ ಆಕ್ರಮಣಶೀಲತೆ ಎಷ್ಟು ಜಾಗರೂಕವಾಗಿದೆ ಎಂದರೆ, ಬಂಡವಾಳಶಾಹಿ ಶಕ್ತಿಗಳು, ಮತಾಂಧ ಶಕ್ತಿಗಳನ್ನು ಮುಂದಿಟ್ಟುಕೊಂಡು, ಪ್ರಭುತ್ವವನ್ನು ಖಾಸಗೀ ವ್ಯವಸ್ಥೆಯ ನಿಯಂತ್ರಣದಲ್ಲಿಡುವ ಕೆಲಸವನ್ನು ನಿರಂತರವಾಗಿ ನಡೆಸಿವೆ. ಅದರಲ್ಲಿ ಯಶಸ್ಸನ್ನು ಕಂಡಿವೆ. ಇದರ ವಿರುದ್ಧ ಧ್ವನಿ ಎತ್ತಬೇಕಾಗಿರುವ ರಾಷ್ಟ್ರದ ಬಹುಸಂಖ್ಯಾತ ಜನರನ್ನು ಧರ್ಮದ, ಅಭಿವೃದ್ಧಿಯ ಹುಸಿಕಲ್ಪನೆಯ ಅಫೀಮಿನಲ್ಲಿ ನಿದ್ದೆಯಿಂದ ಮಲಗಿಸಿದ್ದಾರೆ. ಇವರನ್ನು ಎಚ್ಚಿಸುವುದೇ ಮೊದಲ ಮಹತ್ತರವಾದ ಕೆಲಸವಾಗಬೇಕಿದೆ. ಅದಕ್ಕಾಗಿ ಇದನ್ನು ಯೋಚಿಸುವವರು ಎಷ್ಟರಮಟ್ಟಿಗೆ ಒಂದಾಗುತ್ತಾರೆ ಎನ್ನುವುದು ಎಲ್ಲರೂ ಮಾತನಾಡುವ ಬಗೆಹರಿಯಲಾರದ ಪ್ರಶ್ನೆಯಾಗಿದೆ.

ಹತ್ತಾರು ಧರ್ಮಗಳು, ನೂರಾರು ಭಾಷೆಗಳು, ಸಾವಿರಾರು ಜಾತಿಗಳು ಇರುವ, ಧರ್ಮ ಜಾತಿಗಳು ಇಲ್ಲದೇ ಇರುವ ಕೋಟ್ಯಂತರ ಜನರಿರುವ ಈ ದೇಶದಲ್ಲಿ, ಇವೆಲ್ಲವುಗಳ ಐಕ್ಯತೆಯಿಂದ ಕೂಡಿದ ಬಹುತ್ವ ಭಾರತವನ್ನು ಬಯಸುವುದು, ಇಲ್ಲಿನ ಬಹುಸಂಖ್ಯಾತ ಮನಸುಗಳ ಆಶಯವಾಗಿದೆ. ಬಹುತ್ವ ಭಾರತದ ವಾಸ್ತವವನ್ನು ವಿವರಿಸುವುದೇ ಒಂದು ಸೌಂದರ್ಯ. ಇದರ ನೆಲೆಗಳು ಅನೇಕ, ಇದಕ್ಕೆ ಸಾಂಸ್ಕೃತಿಕ ನೆಲೆ ಇದೆ, ಆರ್ಥಿಕ ನೆಲೆ ಇದೆ, ಧಾರ್ಮಿಕ ನೆಲೆ ಸಾಮಾಜಿಕ ನೆಲೆ ಇದೆ, ರಾಜಕೀಯ ನೆಲೆಯೂ ಇದೆ. ಈಗಾಗಲೆ ಬಂಡವಳಿಗರ ಜಾಗತಿಕ ಮಾರುಕಟ್ಟೆ, ಈ ಮೇಲಿನ ಎಲ್ಲಾ ನೆಲೆಗಳ ಮೇಲೂ ದಾಳಿ ಮಾಡಿ ತನ್ನ ಕಬಂಧ ಬಾಹುಗಳಲ್ಲಿ ಬಂಧಿಸಿಯಾಗಿದೆ. ಅವುಗಳನ್ನು ಈ ಬಂಧನದಿಂದ ಬಿಡಿಸಬಲ್ಲವೆ? ಎಂಬುದು ನಮ್ಮೆದುರಿ ಗಿರುವ ಬಗೆಹರಿಯಲಾರದ ಸಮಸ್ಯೆಯಾಗಿದೆ. ಏಕೆಂದರೆ, ದೇಶದ ಯಾವ ಜನಸಾಮಾನ್ಯರು ಇದರ ಬಗ್ಗೆ ಚಿಂತಿಸಬೇಕಿತ್ತು, ಮಾತನಾಡಬೇಕಿತ್ತು, ಮತ್ತು ಪ್ರಶ್ನಿಸಬೇಕಿತ್ತು, ಅವರೆಲ್ಲರ ಆಲೋಚನಾ ಕ್ರಮವನ್ನೇ ಬದಲಿಸುವ ಕೆಲಸ ಬಂಡವಳಿಗರ ಮಾರುಕಟ್ಟೆಯು ಪ್ರಾಥಮಿಕ ಹಂತದಲ್ಲಿ ಮಾಡಿ ಯಶಸ್ವಿಯಾಗಿದೆ.

ಬಹುತ್ವ ಭಾರತದ ಈ ಎಲ್ಲಾ ನೆಲೆಗಳು ಸಂವಿಧಾನದ ಆಶಯಗಳಾಗಿವೆ ಎನ್ನುವುದು ಬಹುಮುಖ್ಯ ಸಂಗತಿಯಾಗಿರುವುದರಿಂದ, ಪ್ರಸ್ತುತತೆಯ ಆಚೆಗೆ ಬಹುತ್ವ ಭಾರತದ ಉಳಿವಿಗಾಗಿ ಸಂವಿಧಾನದ ತಾತ್ವಿಕ ಆಶಯಗಳನ್ನು ಎಷ್ಟರಮಟ್ಟಿಗೆ ಈ ದೇಶದ ಸರ್ಕಾರಗಳು ಅಳವಡಿಸಿಕೊಂಡು ನಡೆದಿವೆ ಎನ್ನುವುದು ನಮ್ಮ ಪ್ರಶ್ನೆಯಾಗಬೇಕಿದೆ ಮತ್ತು ಎಷ್ಟರಮಟ್ಟಿಗೆ ಸಂವಿಧಾನವನ್ನು ಅನುಷ್ಠಾನಗೊಳಿಸಲಾಗಿದೆ ಎನ್ನುವುದನ್ನು ಅವಲೋಕಿಸಿದಾಗ ಸಂವಿಧಾನವನ್ನು ಎಷ್ಟರಮಟ್ಟಿಗೆ ಜೀವಂತ ಇಟ್ಟಿದ್ದೇವೆ ಎಂಬುದು ತಿಳಿಯುತ್ತದೆ. ಸಂವಿಧಾನಕ್ಕೆ ಸವಾಲುಗಳಿರುವ ಈ ಸಂದರ್ಭದಲ್ಲಿ ಮೇಲಿನ ಪ್ರಶ್ನೆಗಳು ನಮಗೆ ಪ್ರಸ್ತುತವಾಗಬೇಕಿದೆ.

ಭಾರತ ಒಂದು ಒಕ್ಕೂಟ ವ್ಯವಸ್ಥೆ ಎನ್ನುವುದನ್ನು ನಾವು ಸಂವಿಧಾನ ಸ್ವೀಕರಿಸುವ ಸಂದರ್ಭದಲ್ಲೇ ಒಪ್ಪಿಕೊಂಡಿದ್ದೇವೆ. ರಕ್ಷಣೆ, ವಿದೇಶಾಂಗ ನೀತಿ, ವೈಜ್ಞಾನಿಕ ಸಂಶೋಧನೆಯಂತಹ ಕೆಲವು ವಿಷಯಗಳನ್ನು ಹೊರತುಪಡಿಸಿದರೆ ಉಳಿದ ವಿಷಯಗಳಲ್ಲಿ

ರಾಜ್ಯಗಳಿಗೆ ಸ್ವಾಯತ್ತತೆ ನೀಡಬೇಕು, ಆಗಲೆ ಒಕ್ಕೂಟ ವ್ಯವಸ್ಥೆ ಅಂದರೆ ಸಂಯುಕ್ತ ರಾಜ್ಯ ಅಥವಾ ಕಲ್ಯಾಣ ರಾಜ್ಯದ ಕಲ್ಪನೆ ಅನುಷ್ಠಾನಕ್ಕೆ ಬರುವುದು. ರಾಜ್ಯಗಳಿಗೆ ಬೇಕಾದ ಸ್ವಾಯತ್ತತೆಯನ್ನು ಕೇಂದ್ರ ಸರ್ಕಾರ ನೀಡಲೂ ಇಲ್ಲ. ಬೇಕಾದ ಸ್ವಾಯತ್ತತೆಯನ್ನು ರಾಜ್ಯಗಳು ಕೇಳಲೂ ಇಲ್ಲ. ಬದಲಾಗಿ ಸ್ವಾಯತ್ತತೆಯನ್ನು ಕೊಡಬೇಕಾದ ಕೇಂದ್ರ ಸರ್ಕಾರ ರಾಜ್ಯಗಳಿಂದ ಕಿತ್ತುಕೊಂಡಿತು, ಕೇಳಬೇಕಾದ ರಾಜ್ಯಗಳು ಕೇಂದ್ರಕ್ಕೆ ಬಿಟ್ಟುಕೊಟ್ಟವು. ಅದರ ತಾಜಾ ಉದಾಹರಣೆ ನಮ್ಮೆದುರಿಗಿವೆ, ನಿನ್ನೆ ಮೊನ್ನೆಯಷ್ಟೆ ಕೇಂದ್ರ ಸರ್ಕಾರ ಗ್ರಾಹಕ ರಕ್ಷಣ ಕಾಯ್ದೆಗೆ ಇದ್ದ ಸ್ವಾಯತ್ತತೆಯನ್ನು ರಾಜ್ಯಗಳಿಂದ ಕಿತ್ತುಕೊಂಡಿದೆ. ರಾಜ್ಯಗಳ ಒಂದು ಜಿಲ್ಲೆಯ ಗ್ರಾಹಕ ನ್ಯಾಯಾಲಯದ ಅಧ್ಯಕ್ಷರ ನೇಮಕವನ್ನು ಇನ್ನು ಮುಂದೆ ಕೇಂದ್ರವೇ ಮಾಡುತ್ತಿದೆ. ಇದರ ಹಿಂದಿನ ಹುನ್ನಾರ ದೇಶದ ಎಲ್ಲೆಡೆ ಖಾಸಗಿ ವ್ಯವಸ್ಥೆ ಅನುಷ್ಠಾನ ಗೊಳ್ಳುತ್ತಿದೆ. ಅದನ್ನೆ ಪ್ರಶ್ನೆ ಮಾಡುವ ಗ್ರಾಹಕನಿಗೆ ನ್ಯಾಯ ಕೊಡುವ ಗ್ರಾಹಕ ವೇದಿಕೆ ಕೇಂದ್ರದ ಹಿಡಿತದಲ್ಲಿರುತ್ತದೆ. ಗ್ರಾಹಕ ವಿರೋಧಿ ಯಾಗಿರುತ್ತದೆ. ಜಿಎಸ್‌ಟಿ, ನೀಟ್, ನೀಟ್ ಪರೀಕ್ಷೆ ನಡೆಸುವುದು, ಈ ಎಲ್ಲವುಗಳ ಮೇಲೆ ಕೇಂದ್ರ ಹಿಡಿತ ಸಾಧಿಸಿದೆ ಎಂದರೆ ರಾಜ್ಯಗಳು ತಕರಾರಿಲ್ಲದೆ ಬಿಟ್ಟುಕೊಟ್ಟಿವೆ.

ಜಿಎಸ್‌ಟಿ ತೆರಿಗೆಯನ್ನು ಅನುಷ್ಠಾನಕ್ಕೆ ತರುವಾಗ ತೆರಿಗೆಯ ಸರಳೀಕರಣ ಎಂದು ಬಿಂಬಿಸಲಾಯಿತು. ಆದರೆ ಅದು ಈಗ ತೆರಿಗೆಯ ಕೇಂದ್ರೀಕರಣವಾಗಿರುವುದು ನಮ್ಮೆದುರಿಗಿದೆ. ದೇಶಕ್ಕೆ ಮಾದರಿಯಾದ ಸಿ.ಇ.ಟಿ.ಯನ್ನೇ ಕರ್ನಾಟಕ ನಡೆಸುತ್ತಾ ಇತ್ತು. ಆದರೆ ಕೇಂದ್ರ ಸರ್ಕಾರ ನೀಟ್ ಎನ್ನುವ ಪರೀಕ್ಷೆಯನ್ನು ಜಾರಿಗೊಳಿಸಿತು. ಶಿಕ್ಷಣದಲ್ಲಿ ಸ್ವಾಯತ್ತತೆ ಇಲ್ಲ, ಕೊನೆ ಪಕ್ಷ ಪ್ರೌಢ ಶಿಕ್ಷಣ ಹೇಗಿರಬೇಕೆಂದು ರಾಜ್ಯಗಳು ತೀರ್ಮಾನಿಸುವ ಹಾಗಿಲ್ಲ. ಅದಕ್ಕೂ NCERTಯನ್ನು ಕಾಯಬೇಕು. ಇದರ ಪರಿಣಾಮ ಪ್ರಾದೇಶಿಕವಾಗಿರುವ ಅಭ್ಯರ್ಥಿಗಳ ಬದುಕಿನ ಮೇಲೆ ಗಧಾ ಪ್ರಹಾರವೇ ಆಗಿದೆ. ಪ್ರಾದೇಶಿಕ ಅಸಮಾನತೆ ಹೆಚ್ಚಾಗುತ್ತದೆ. ನಿರುದ್ಯೋಗ ಹೆಚ್ಚಾಗುತ್ತದೆ, ಜನರ ಬದುಕು ಅಲೆಮಾರಿಗಳ ಬದುಕಾಗುತ್ತದೆ. ಇದರ ವಿರುದ್ಧ ತಮಿಳುನಾಡಿನ ಮುಖ್ಯಮಂತ್ರಿಯಾಗಿದ್ದ ಜಯಲಲಿತಾ ಒಬ್ಬರನ್ನು ಬಿಟ್ಟರೆ ರಾಷ್ಟ್ರದ ಯಾವ ರಾಜ್ಯದ ಮುಖ್ಯಮಂತ್ರಿಗಳೂ ಮಾತನಾಡಲೇ ಇಲ್ಲ.

ಹೀಗೆ ಒಕ್ಕೂಟ ವ್ಯವಸ್ಥೆಯಲ್ಲಿನ ಅಧಿಕಾರ ವಿಕೇಂದ್ರೀಕರಣವನ್ನು ಕೇಂದ್ರ ಸರ್ಕಾರ ಅಭಿವೃದ್ಧಿಯ ಹೆಸರಿನಲ್ಲಿ ರಾಜ್ಯಗಳ ಅಧಿಕಾರವನ್ನು ಕಸಿದು ಕೇಂದ್ರೀಕರಿಸುತ್ತಿರುವುದು ಒಕ್ಕೂಟ ವ್ಯವಸ್ಥೆಯ ನಾಶದ ಮುನ್ಸೂಚನೆಯಾಗಿದೆ. ಒಕ್ಕೂಟ ವ್ಯವಸ್ಥೆಯಲ್ಲಿ (ಸಂಯುಕ್ತ ರಾಜ್ಯಗಳ ಒಕ್ಕೂಟ) ಕಲ್ಯಾಣ ರಾಜ್ಯದ ಕಲ್ಪನೆ ಇದೆ ಎಂಬುದು ಇಂದು ನಿನ್ನೆಯದಲ್ಲ. ೧೯೫೨ರಲ್ಲೇ ರಾಜಾಜಿಯವರು ಕೇಂದ್ರ ಮತ್ತು ರಾಜ್ಯಗಳ ನಡುವಿನ ಸಂಬಂಧ ಕಂಡು ರಾಜ್ಯಗಳು ವೈಭವೀಕೃತ ಮುನಿಸಿಪಾಲಿಟಿಗಳಾಗಿವೆ. ಯಾವ ಸ್ವಾತಂತ್ರ್ಯ ನಿರ್ಧಾರ ತೆಗೆದುಕೊಳ್ಳುವ ಅಧಿಕಾರವೂ ಇಲ್ಲ ಎಂದಿದ್ದರು. ೧೯೫೭ರಲ್ಲಿ ಕಮುನಿಸ್ಟ್ ನಾಯಕ ನಂಬೂದಿರಿ ಪಾದ ಅವರು, ೧೯೭೦ರಲ್ಲಿ ಜ್ಯೋತಿಬಸು ಅವರು ಮತ್ತು ಕರ್ನಾಟಕದಲ್ಲಿ ಕ್ಷೀಣಿಸಿದ ಸ್ವರದಲ್ಲಿ ರಾಮಕೃಷ್ಣ ಹೆಗ್ಗಡೆಯವರು ಒಕ್ಕೂಟ ವ್ಯವಸ್ಥೆಯ ಪರವಾದ ಧ್ವನಿ ಎತ್ತಿದವರು. ಉಳಿದ ಯಾವ ರಾಜ್ಯದ ನಾಯಕರುಗಳು ಇದರ ಬಗ್ಗೆ ಮಾತನಾಡಿಯೇ ಇಲ್ಲ. ಇದರ ಅರ್ಥ ಎಲ್ಲರೂ ಬಂಡವಾಳ ಮತ್ತು ಖಾಸಗಿವ್ಯವಸ್ಥೆಯ ವೈಭವೀಕರಣಕ್ಕೆ ಆಸಕ್ತಿ ತೋರಿಸುತ್ತಿದ್ದಾರೆ ಎಂದಾಯಿತಲ್ಲವೆ?

ಬಹು ಮುಖ್ಯವಾದ ಇನ್ನೊಂದು ವಿಷಯ ಈ ಸಂದರ್ಭದಲ್ಲಿ ಪ್ರಸ್ತಾಪಿಸ ಬೇಕಾದದ್ದು. ೧೯೬೮ರಲ್ಲಿ ರಾಷ್ಟ್ರೀಯ ಭಾವೈಕ್ಯತಾ ಪರಿಷತ್ತು ಎನ್ನುವ ಸಂಸ್ಥೆ ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ ಉದ್ಯೋಗದಲ್ಲಿ ಒಂದು ರಾಷ್ಟ್ರೀಯ ನೀತಿ ಇರಬೇಕು. ಸ್ಥಳೀಯರಿಗೆ ಉದ್ಯೋಗ ಕೊಡುವ ಅವಕಾಶ ರಾಜ್ಯಗಳಿಗೆ ಇರಬೇಕು. ಇಲ್ಲವಾದಲ್ಲಿ ನಿರುದ್ಯೋಗ ಹೆಚ್ಚುತ್ತದೆ. ಇದರಿಂದ ಅತೃಪ್ತಿ ಬೆಳೆಯುತ್ತದೆ. ಅತೃಪ್ತಿ ಹೆಚ್ಚಾದಾಗ ಪ್ರತ್ಯೇಕತೆಯ ಕೂಗು ಹುಟ್ಟುತ್ತದೆ ಎಂದು ೧೯೬೮ ಜೂನ್




೨೮ರಂದೇ ಹೇಳುತ್ತದೆ. ಇದನ್ನು ನೆನೆಪಿಸಿಕೊಳ್ಳುವ ಅಗತ್ಯವೇನೆಂದರೆ, ಇತ್ತೀಚೆಗೆ ಮಧ್ಯಪ್ರದೇಶದ ಮುಖ್ಯಮಂತ್ರಿ ಕಮಲನಾಥ್ ಅವರು ಉದ್ಯೋಗದಲ್ಲಿ ಶೇ. ೭೦ರಷ್ಟು ಮೀಸಲಾತಿ ಸ್ಥಳೀಯರಿಗೆ ಇರಬೇಕೆಂಬ ಕಾನೂನು ಇರಬೇಕು ಎಂದು ಹೇಳಿರುವುದು, ಇದು ಸ್ವಾಗತಾರ್ಹ. ಹೀಗೆ ಗುಜರಾತಿನಲ್ಲಿ ಶೇ. ೭೦, ಮಹಾರಾಷ್ಟ್ರದಲ್ಲಿ ಶೇ. ೮೦, ಕರ್ನಾಟಕದಲ್ಲಿ ಶೇ. ೭೦ ಸ್ಥಳೀಯರಿಗೆ ಉದ್ಯೋಗ ಕೊಡುವ ಕಾನೂನು ಇದೆ. ಈ ರೀತಿಯ ಕಾನೂನುಗಳನ್ನು ರಾಜ್ಯಗಳು ಜಾರಿಗೆ ತರದೆ ಹೋದರೆ ರಾಷ್ಟ್ರೀಯ ಭಾವೈಕ್ಯತೆ ಪರಿಷತ್ತಿನ ಅಭಿಪ್ರಾಯ ನಿಜವಾಗುತ್ತದೆ. ಇದು ಒಕ್ಕೂಟ ವ್ಯವಸ್ಥೆಗೆ ಕೊಡಲಿ ಪೆಟ್ಟಾಗುತ್ತದೆ. ಇದಕ್ಕೆ ವಿರೋಧವೂ ವ್ಯಕ್ತವಾಯಿತು, ವಿರೋಧಿಸಿದವರು ಯಾರು ಎಂದರೆ, ಗುಜರಾತ್ ಮತ್ತು ಮಹಾರಾಷ್ಟ್ರದಲ್ಲಿ ಶೇ. ೭೦–೮೦ ಮೀಸಲಾತಿ ನೀಡಿದ ಬಿಜೆಪಿಯವರು, ಅಂದರೆ ಇವರು ಯಾವ ಕಾರಣಕ್ಕೆ ವಿರೋಧಿಸಿದರು?

ಸಂಯುಕ್ತ ರಾಜ್ಯ ಕಲ್ಪನೆ ಇದ್ದರೆ ಮಾತ್ರ ದೇಶ ಒಂದು ರಾಷ್ಟ್ರವಾಗಿ ಉಳಿಯಲು ಸಾಧ್ಯ. ಆ ಕಾರಣಕ್ಕಾಗಿಯೇ ಸಂವಿಧಾನದಲ್ಲಿ, ಒಕ್ಕೂಟ ವ್ಯವಸ್ಥೆ, ಜಾತ್ಯತೀತತೆ, ಸಮಾಜವಾದ, ಸ್ವಾತಂತ್ರ್ಯ ಸಮಾನತೆಯನ್ನು ಪ್ರತಿಪಾದಿಸಲಾಗಿದೆ ಮತ್ತು ಒಪ್ಪಿಕೊಂಡಿದ್ದೇವೆ. ಇಂಥ ಸಂವಿಧಾನವನ್ನು ಕಳೆದ ಆಗಸ್ಟ್‌ನಲ್ಲಿ ದೆಹಲಿಯ ಜಂತರ್ ಮಂತರ್ ಬಳಿ ಸುಡಲಾಗುತ್ತದೆ. ಅಲ್ಲಿ ಸುಟ್ಟದ್ದು ಕೇವಲ ಸಂವಿಧಾನದ ಪ್ರತಿಯನ್ನಲ್ಲ ಬದಲಾಗಿ, ಈ ದೇಶದ, ಜಾತ್ಯತೀತತೆಯ ನಿಲುವುಗಳನ್ನು, ಸಮಾನತೆಯ ತತ್ವವನ್ನು ಬಹುತ್ವ ಭಾರತ ಪರಿಕಲ್ಪನೆಯನ್ನು ಬಹುಧರ್ಮದ ನಾಡಿನ ಜನರ ಮನಸುಗಳನ್ನು, ಬಹು ಸಂಸ್ಕೃತಿಯ ಆಶಯಗಳನ್ನು ಸುಟ್ಟುಹಾಕಿದ್ದು ಎನ್ನುವುದು ನಮಗೆ ಗೊತ್ತಾಗಬೇಕು.

ಇಂದು ಮುಕ್ತ ಆರ್ಥಿಕತೆಯ ಹೆಸರಿನಲ್ಲಿ ದೇಶದ ಎಲ್ಲಾ ರೀತಿಯ ಸ್ವಾತಂತ್ರ್ಯ ಸಮಾನತೆಯನ್ನು ಕೊಂದುಹಾಕಲಾಗುತ್ತಿದೆ. ನಮ್ಮಲ್ಲಿ ರಾಜಕೀಯ ಪ್ರಜಾಪ್ರಭುತ್ವ, ಆರ್ಥಿಕ ಪ್ರಜಾಪ್ರಭುತ್ವ, ಸಾಮಾಜಿಕ ಪ್ರಜಾಪ್ರಭುತ್ವಗಳಿವೆ. ಇವುಗಳನ್ನು ಉಳಿಸಿಕೊಳ್ಳುವ ಜವಾಬ್ದಾರಿ ಭಾರತೀಯರಾದ ನಮ್ಮೆಲ್ಲರ ಮೇಲಿದೆ. ಇಲ್ಲಿ ನಮಗೆ ಇಬ್ಬರು ಶತ್ರುಗಳಿದ್ದಾರೆ. ಒಂದು ಧರ್ಮಾಂಧರು ಇನ್ನೊಂದು ಬಂಡವಾಳ ಶಾಹಿಗಳು. ಧರ್ಮಾಂಧರ ಪ್ರಕಾರ ಒಂದು ದೇಶದಲ್ಲಿ ಒಂದೇ ಧರ್ಮವಿರಬೇಕು, ಒಂದು ದೇಶ, ಒಂದು ಸಂಸ್ಕೃತಿ, ಭಾಷೆ ಇರಬೇಕು. ಬಂಡವಳಿಗರ ಪ್ರಕಾರ ಒಂದು ದೇಶ, ಒಂದು ಆಡಳಿತ, ಒಂದು ತೆರಿಗೆ ಇರಬೇಕು. ಇಲ್ಲಿ ಗಮನಿಸಬೇಕಾದ ವಿಷಯವೊಂದಿದೆ. ಇವೆರಡರಲ್ಲಿ ಯಾವುದು ಹೆಚ್ಚು ಮಾರಕ? ಸಮಾಜವಾದ ಜಾತ್ಯತೀತತೆ, ಸ್ವಾತಂತ್ರ್ಯ ಸಮಾನತೆಯೆನ್ನುವ ಸಂವಿಧಾನದ ಪರಿಕಲ್ಪನೆಗೆ ಇಬ್ಬರೂ ಸಮಾನ ಶತ್ರುಗಳೇ. ಧರ್ಮಾಂಧರು, ಬಂಡವಾಳಶಾಹಿಗಳು ಬೆಳೆಯಬಹುದಾದ ಎಲ್ಲಾ ವೇದಿಕೆಗಳನ್ನು ಮಾಡಿಕೊಡುತ್ತಿದ್ದಾರೆ ಎನ್ನುವುದು ಅತ್ಯಂತ ಆತಂಕದ ವಿಚಾರ. ಆ ಕಾರಣದಿಂದಾಗಿ ಧರ್ಮವನ್ನು ಮುಂದಿಟ್ಟುಕೊಂಡೆ ಬಂಡವಳ ಬೆಳೆಯುತ್ತಿದೆ. [ಬಂಡವಾಳಕ್ಕೊಂದು ನೀತಿಯಿದೆ, ಬಂಡವಾಳ ಬಂಡವಳಿಗನಿಗೆ ಹೇಳುತ್ತದೆಯಂತೆ; ನೀನು ನಿನ್ನ ಸ್ಥಾನವನ್ನು ಉಳಿಸಬೇಕೆಂದರೆ ಓಡುತ್ತಲೇ ಇರಬೇಕು, ಓಡುವಾಗ ಯಾರೇ ಕಾಲಿಗೆ ಸಿಕ್ಕು ಸತ್ತರೂ ನೋಡಬೇಡ ಎಂದು, ಈ ನೀತಿಯನ್ನು ಬಂಡವಳಿಗರು ಚಾಚೂ ತಪ್ಪದೆ ಪಾಲಿಸುತ್ತಾರೆ.] ಇದರ ಮೂಲ ಆಶಯಗಳನ್ನು ಅರಿತಿದ್ದು ನಮ್ಮ ರಾಷ್ಟ್ರೀಯ ನಾಯಕರುಗಳು, ಡಾ॥ ಬಿ. ಆರ್. ಅಂಬೇಡ್ಕರ್‌ರವರು ಹಿಂದು ಧರ್ಮದ ವಿರೋಧಿಯಾಗಿದ್ದು. ಒಂದು ಧರ್ಮ ದೇಶದ ಆಧಿಪತ್ಯ ವಹಿಸಬಾರದು. ಇದು ಬಹು ಧರ್ಮೀಯರ ದೇಶವಾಗಬೇಕು ಎಂದರು. ಹಿಂದೂ ಧರ್ಮವನ್ನು ನಂಬಿದ್ದ ಡಾ॥ ಎಸ್. ರಾಧಾಕೃಷ್ಣನ್ ಇದು ಒಂದು ಧರ್ಮದವರಿಗೆ ಸೇರಿದ ದೇಶವಲ್ಲ ಬಹು ಧರ್ಮಗಳ ದೇಶ ಎಂದರು. ಗಾಂಧೀಜಿ ಹಿಂದೂ ಧರ್ಮದವರಾದರೂ, ಸದಾ ರಾಮನ ಭಜನೆಯನ್ನು ಮಾಡಿದರೂ ಎಂದೂ ಧಾರ್ಮಿಕ ಸಂಕೇತಗಳನ್ನು ಸ್ವಾತಂತ್ರ್ಯ ಚಳುವಳಿಗೆ ಬಳಸಲಿಲ್ಲ. ಇಂದು ನಾವು ಇವೆಲ್ಲವನ್ನೂ ಗಮನದಲ್ಲಿಟ್ಟುಕೊಂಡು ಮತ್ತು

ಸಂವಿಧಾನ ನಮ್ಮದಾಗಿಯೇ ಉಳಿದು ಒಕ್ಕೂಟ ವ್ಯವಸ್ಥೆ ಜಾರಿಯಾಗಬೇಕೆನ್ನುವುದಾದರೆ, ಆಡಳಿತ, ಶೈಕ್ಷಣಿಕ, ಸಾಂಸ್ಕೃತಿಕ ಸ್ವಾಯತ್ತತೆಗಾಗಿ ಮತ್ತು ಸಾಮಾಜಿಕ ಸ್ವಾಸ್ಥ್ಯಕ್ಕಾಗಿ ಎಲ್ಲಾ ರಾಜ್ಯಗಳು ಹೋರಾಟ ರೂಪಿಸಬೇಕಿದೆ. ಇದು ರಾಷ್ಟ್ರದ ಒಕ್ಕೂಟ ವ್ಯವಸ್ಥೆಯಲ್ಲಿನ ರಾಜ್ಯಗಳ ಸ್ವಾಯತ್ತತೆಯ ಅಳಿವು ಉಳಿವಿನ ಪ್ರಶ್ನೆಯಾಗಿದೆ.

ಕಳೆದ ೭೦... ವರ್ಷಗಳಲ್ಲಿ ಈ ದೇಶವನ್ನು ಆಳಿದ ಎಲ್ಲಾ ರಾಜಕೀಯ ಪಕ್ಷಗಳ ಸರ್ಕಾರಗಳು ಸಂವಿಧಾನದ ತಾತ್ವಿಕ ನೆಲೆಯನ್ನು ಮರೆಯುತ್ತಲೇ ಬಂದಿವೆ. ೧೯೪೯ ನವೆಂಬರ್ ೨೬ರಂದು ಸಂವಿಧಾನವನ್ನು ಒಪ್ಪಿಕೊಂಡ ದಿನದಂದು ಅದರ ತಾತ್ವಿಕತೆಯನ್ನು ಒಪ್ಪದ ಮನಸುಗಳೂ ಇದ್ದವು ಮತ್ತು ಅಂದಿನಿಂದ ಇಂದಿನವರೆಗೆ ಅಂತಹ ಮನಸುಗಳ ಸಂಖ್ಯೆ ದ್ವಿಗುಣವಾಗುತ್ತಾ ಬಂದಿದೆ. ಭಾರತದ ಪ್ರಜೆಗಳಾದ ನಾವುಗಳು ವ್ಯವಸ್ಥೆಯನ್ನು ಪ್ರಶ್ನೆ ಮಾಡದೆ, ದೂರ ಉಳಿದರೆ, ಸಂವಿಧಾನದ ಶಬ್ದಗಳು, ಪರಿಚ್ಛೇದಗಳು, ವಿಭಾಗಗಳು ಹಾಗೆಯೇ ಇರುತ್ತವೆ. ಆದರೆ ಅದರ ತಾತ್ವಿಕತೆ ನಾಶವಾಗಿರುತ್ತದೆ. ಸಂವಿಧಾನದ ಆಶಯಗಳಾದ, ಒಕ್ಕೂಟ ವ್ಯವಸ್ಥೆ ಜಾತ್ಯತೀತತೆ, ಸಮಾಜವಾದ, ಸ್ವಾತಂತ್ರ್ಯ, ಸಮಾನತೆ ಸಂಸದೀಯ ಪ್ರಜಾಪ್ರಭುತ್ವ ಎಷ್ಟರಮಟ್ಟಿಗೆ ಪಾಲಿಸಲಾಗಿದೆ ಎನ್ನುವುದು ನಮ್ಮ ಅರಿವಿಗೆ ಬಾರದೆ ಹೋದರೆ, ನಮ್ಮನ್ನಾಳುವ ದುಷ್ಟಶಕ್ತಿಗಳ ಕೂಟ ನಮ್ಮನ್ನು ಗುಲಾಮ ವ್ಯವಸ್ಥೆಗೆ ನೂಕುತ್ತದೆ.

ಒಕ್ಕೂಟ ವ್ಯವಸ್ಥೆಯನ್ನು ವಿರೋಧಿಸಿ, ಎಲ್ಲವನ್ನು ಕೇಂದ್ರೀಕೃತಗೊಳಿಸುವ ಧ್ವನಿ, ಸಂವಿಧಾನವನ್ನು ಈ ದೇಶದ ಜನರೆದುರು ಇಟ್ಟಾಗಲೇ ಪ್ರಾರಂಭವಾಗಿದೆ ಎಂದ ಮೇಲೆಯೇ ಹೇಳಿದೆ, ಅದರ ಒಂದು ತುಣುಕನ್ನು ವಿವರಿಸುತ್ತೇನೆ. ಸಂವಿಧಾನ ಕರಡನ್ನು ರಚಿಸಿ ಸಂವಿಧಾನ ರಚನಾ ಸಮಿತಿಯ ಮುಂದಿಟ್ಟಾಗಲೇ ಗೋಳ್ವಲಕರ್ ಅವರು ಇದನ್ನು ಒಪ್ಪುವುದಿಲ್ಲ. ಒಕ್ಕೂಟದ ವ್ಯವಸ್ಥೆಯನ್ನು ನಾವು ಮಾನ್ಯ ಮಾಡುವುದಿಲ್ಲ, ದೇಶದ ಎಲ್ಲಾ ರಾಜ್ಯಗಳ ವಿಧಾನ ಸಭೆಗಳು, ಅನೇಕ ರಾಜ್ಯಗಳು ಬೇಡ, ಒಂದು ಕಾರ್ಯಾಂಗ ಒಂದೇ ಪಾರ್ಲಿಮೆಂಟ್, ಒಂದು ದೇಶ ಇರಬೇಕು ಎಂದರು. ಮುಂದುವರಿದು ಇನ್ನೊಂದು ಮಾತನ್ನು ಹೇಳುತ್ತಾರೆ ಹಿಂದಿ, ಹಿಂದು, ಹಿಂದೂಸ್ತಾನ್, ಅಷ್ಟೇ ಇರಬೇಕು ನಾವು ಈ ಸಂವಿಧಾನವನ್ನು ಮಾನ್ಯ ಮಾಡೋದಿಲ್ಲ ಎಂದು. ಈ ಎಲ್ಲಾ ಚಿಂತನೆಗಳನ್ನು ಅವರು ಬಳುವಳಿಯಾಗಿ ಪಡೆದದ್ದು ಹಿಟ್ಲರ್‌ನಿಂದ. ೧೯೩೩ರಲ್ಲಿ ಹಿಟ್ಲರ್ ಅಧಿಕಾರಕ್ಕೆ ಬಂದಾಗ, ಒಬ್ಬ ನಾಯಕ ಒಂದು ದೇಶದ ಘೋಷಣೆಯನ್ನು ಕೊಟ್ಟ. ಅವನು ಅಧಿಕಾರಕ್ಕೆ ಬಂದಾಗ ರಾಷ್ಟ್ರಾಧ್ಯಕ್ಷರನ್ನು ಕಿತ್ತು ಹಾಕಿ ತಾನು ಆಧಿಪತ್ಯವನ್ನು ವಹಿಸಿಕೊಂಡವನು ಮಾಡಿದ್ದೇನು ಎಂದು ಇತಿಹಾಸ ನಮ್ಮೆಲ್ಲರಿಗೂ ಹೇಳಿದೆ. ಅವನ ನೀತಿಯನ್ನು ಅತ್ಯಂತ ಜಾಗರೂಕವಾಗಿ ಕಾಪಾಡುವಂತಹ ಮತ್ತು ದೇಶದ ಜನತೆಯ ಮೇಲೆ ಹೇರುವಂತಹ ಕೆಲಸವನ್ನು ಈ ದೇಶದ ಸನಾತನಿಗಳು ಸಂವಿಧಾನ ರಚನೆಯಾದ ದಿನದಿಂದಲೇ ಪ್ರಾರಂಭಿಸಿದ್ದರು. ಒಕ್ಕೂಟ ವ್ಯವಸ್ಥೆಯನ್ನು ಮಾನ್ಯ ಮಾಡದ ಅವರ ಮನೋಧರ್ಮ ಅಂದು ಪಾರ್ಲಿಮೆಂಟಿನ ಸಮೀಪವೂ ಇರಲಿಲ್ಲ. ಆದರೆ ಇಂದು ಪಾರ್ಲಿಮೆಂಟಿನ ಒಳಗಡೆ ಅಧಿಕಾರದ ಗದ್ದುಗೆಯಲ್ಲಿದ್ದಾರೆ. ಬಂಡವಾಳಶಾಹಿಗಳು ಧರ್ಮಾಂಧರನ್ನೇ ಚಾಲಕ ಶಕ್ತಿಯನ್ನಾಗಿಸಿಕೊಂಡು ವ್ಯವಸ್ಥೆಯನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳುತ್ತಿದ್ದಾರೆ. ಇಲ್ಲಿ ನಾವು ಈ ಹಿತಶತ್ರುಗಳ ವಿರುದ್ಧ ಧ್ವನಿ ಎತ್ತುವಾಗ ಅವರ ಆಳವನ್ನು ಅರಿಯಲಾರದೆ ಮುಂದು ವರಿಯಬಾರದು. ಮುಕ್ತ ಆರ್ಥಿಕ ನೀತಿಯ ಆಕ್ರಮಣಶೀಲತೆ ಎಷ್ಟು ಜಾಗರೂಕವಾಗಿದೆ ಎಂದರೆ, ಬಂಡವಾಳಶಾಹಿ ಶಕ್ತಿಗಳು, ಮತಾಂಧ ಶಕ್ತಿಗಳನ್ನು ಮುಂದಿಟ್ಟುಕೊಂಡು, ಪ್ರಭುತ್ವವನ್ನು ಖಾಸಗೀ ವ್ಯವಸ್ಥೆಯ ನಿಯಂತ್ರಣದಲ್ಲಿಡುವ ಕೆಲಸವನ್ನು ನಿರತರವಾಗಿ ನಡೆಸಿವೆ. ಅದರಲ್ಲಿ ಯಶಸ್ಸನ್ನು ಕಂಡಿವೆ. ಇದರ ವಿರುದ್ಧ ಧ್ವನಿ ಎತ್ತಬೇಕಾಗಿರುವ ರಾಷ್ಟ್ರದ ಬಹುಸಂಖ್ಯಾತ ಜನರನ್ನು ಧರ್ಮದ, ಅಭಿವೃದ್ಧಿಯ ಹುಸಿ ಕಲ್ಪನೆಯ ಅಫೀಮಿನಲ್ಲಿ ನಿದ್ದೆಯಿಂದ ಮಲಗಿಸಿದ್ದಾರೆ. ಇವರನ್ನು ಎಬ್ಬಿಸುವುದೇ ಮೊದಲ ಮಹತ್ತರವಾದ ಕೆಲಸವಾಗ ಬೇಕಿದೆ. ಅದಕ್ಕಾಗಿ ಇದನ್ನು ಯೋಚಿಸುವವರು ಎಷ್ಟರಮಟ್ಟಿಗೆ ಒಂದಾಗುತ್ತಾರೆ ಎನ್ನುವುದು ಎಲ್ಲರೂ ಮಾತನಾಡುವ ಬಗೆಹರಿಯಲಾರದ ಪ್ರಶ್ನೆಯಾಗಿದೆ.


**ಪಿ ಷಣ್ಮುಖಸ್ವಾಮಿ**
ಕುಕ್ಕುವಾಡ, ದಾವಣಗೆರೆ


# ಸ್ಫೋಟ

**ಭೂಮಿ** ಬಿಸಿಯಾಗಿದೆ
ಹವಾ ಹದಗೆಟ್ಟಿದೆ
ಮನುಷ್ಯ ಕೂಡ....
ಬೆಂಕಿಯಾಗಿ
ಸುಡುವಂತೆ ಕಾದಿದ್ದಾನೆ

ಒಳ್ಳೆಯ ಮಳೆಯಾಗಬೇಕು
ತಂಪಾಗಬೇಕು ಆವರಣ
ಗಿಡ ಮರಗಳು ನೆಂದು
ಕೆರೆ ಕಟ್ಟೆಗಳು ತುಂಬಿ
ಪಶು ಪಕ್ಷಿಗಳು ತಣಿಯಬೇಕು

ಕೆರಳದಂತೆ ಕೋಪಾಗ್ನಿ
ನೀರು ಹುಯ್ಯಬೇಕು
ಹಬ್ಬದಂತೆ ಕಾಳ್ಗಿಚ್ಚು–ರೊಚ್ಚು.

ತಪ್ಪೆಣಿಸಬಾರದು
ಉಪ್ಪು ಸವರಬಾರದು
ಇಲ್ಲವಾದರೆ....
ಸಜ್ಜನರಿಗೂ ಇಲ್ಲ ಬದುಕು


**ಸವಿತಾ ನಾಗಭೂಷಣ**
ಹಿಗ್–೫, ಕಲ್ಲಹಳ್ಳಿ ವಿನೋಬ ನಗರ, ಶಿವಮೊಗ್ಗ – ೦೪

## ಶ್ರೀಲಂಕ: ಉಗ್ರರ ದಾಳಿಗೆ ತತ್ತರಿಸಿದ ನಾಡು

**ಉ**ಗ್ರರು ಎಲ್ಲಿ ಯಾವಾಗ ಬೇಕಾದರೂ ದಾಳಿ ನಡೆಸಬಹುದು ಎನ್ನುವುದಕ್ಕೆ ಇತ್ತೀಚೆಗೆ ಶ್ರೀಲಂಕ ಮತ್ತು ನ್ಯೂಜಿಲೆಂಡ್‌ಗಳಲ್ಲಿ ಸಂಭವಿಸಿದ ದುರಂತಗಳೇ ಸಾಕ್ಷಿ. ಇಂಥ ಉಪಟಳಗಳಲ್ಲಿ ಅಸುನೀಗುವವರು ಅಮಾಯಕರೇ ಹೆಚ್ಚು. ಇಪ್ಪತ್ತೊಂದನೆ ಶತಮಾನದಲ್ಲಿ ವಿಶ್ವವ್ಯಾಪಿಯಾಗಿಬಿಟ್ಟಿದೆ ಉಗ್ರರ ದಾಳಿ. ೨೦೧೧ರಲ್ಲಿ ನ್ಯೂಯಾರ್ಕ್‌ನ ವರ್ಲ್ಡ್ ಟ್ರೇಡ್ ಸೆಂಟರ್ ಮೇಲೆ ಅಪ್ಪಳಿಸಿದ ವಿಮಾನ, ಸಂಭವಿಸಿದ ಅನಾಹುತ ದಾಳಿಯ ವ್ಯಾಪ್ತಿಗೆ ಉದಾಹರಣೆ. ಅಮೆರಿಕ ಪ್ರತೀಕಾರಕ್ಕಾಗಿ ಸಾರಿದ ಸಮರದಿಂದ ಇದುವರೆಗೆ ಏನೂ ಪ್ರಯೋಜನವಾಗಿಲ್ಲ. ಉಗ್ರರ ಅಟ್ಟಹಾಸ ಹೆಚ್ಚಾಗಿದೆ. ಉಗ್ರರು ಮುಸಲ್ಮಾನರು, ಕ್ರಿಶ್ಚಿಯನ್ನರು, ಹಿಂದೂ ಯಾರೇ ಆಗಲಿ ಅವರು ನಡೆಸುವ ದುಷ್ಕೃತ್ಯ ಖಂಡನೀಯ. ಇದರಲ್ಲಿ ಮುಸಲ್ಮಾನರೇ ಅಧಿಕವಾಗಿರುವುದರಿಂದ ಅವರಿಗೆ ಉಗ್ರರ ಹಣೆಪಟ್ಟಿ ಬಂದಿದೆ. ಪಶ್ಚಿಮ ಏಶಿಯದಲ್ಲಿ 'ಇಸ್ಲಾಮಿಕ್ ಸ್ಟೇಟ್' ಪರಿಕಲ್ಪನೆ ಬಂದು ಎಲ್ಲ ಕಡೆಯಿಂದ ಮುಸಲ್ಮಾನ ಯುವಕರು ಆಕರ್ಷಿತರಾಗುತ್ತಿರುವುದೀಗ ಆತಂಕಕಾರಿ.

ನ್ಯೂಝಿಲೆಂಡ್‌ನ ಕ್ರೈಸ್ಟ್ ಚರ್ಚ್, ಮಸೀದಿಯಲ್ಲಿ ಜರುಗಿದ ಗುಂಡಿನ ದಾಳಿಗೆ ಪ್ರತೀಕಾರವಾಗಿ ಶ್ರೀಲಂಕ ಸರಣಿ ಬಾಂಬ್ ಪ್ರಕರಣ ನಡೆದಿದೆ. ೩೨೦ ಮಂದಿ ಸಾವಿಗೀಡಾಗಿದ್ದಾರೆ. ಶ್ರೀಲಂಕದ ಇಸ್ಲಾಮಿಕ್ ರ್‍ಯಾಡಿಕಲ್ ಸಂಘಟನೆ ಈ ದಾಳಿಯ ಹೊಣೆ ಹೊತ್ತಿದೆ. ಅದು ಅಂತರರಾಷ್ಟ್ರೀಯ ಉಗ್ರಪಂಥದ ಜೊತೆ ಸಂಬಂಧ ಹೊಂದಿದೆ. ಇದು ಶ್ರೀಲಂಕ ಸರಕಾರದ ಅಭಿಮತ. ಈಗಾಗಲೇ ಸರಕಾರ ಹಲವು ಸಂದೇಹಿಗಳನ್ನು ಸೆರೆ ಹಿಡಿದಿದೆ. ಭಾರತದಲ್ಲೂ ಉಗ್ರರು ದಾಳಿ ನಡೆಸಬಹುದು ಯಾರು ಎಂಬ ಶಂಕೆಯ ಮೇಲೆ ಬಿಗಿ ಭದ್ರತೆ ವಹಿಸಲಾಗಿದೆ. ಶಂಕಿತರನ್ನು ಬಂಧಿಸಲಾಗಿದೆ. ಸದ್ಯಕ್ಕೆ ಶ್ರೀಲಂಕದಲ್ಲಿ ವಾತಾವರಣ ಹೊಗೆ ಮುಚ್ಚಿದ ಕೆಂಡದಂತಿದೆ. ಯಾವುದೇ ಸಮಯದಲ್ಲಿ ವಿವಿಧ ಕೋಮುಗಳ ನಡುವೆ ಘರ್ಷಣೆಗಳು ಆಗುವ ಸೂಚನೆ ಇದೆ. ದೇಶದಲ್ಲಿ ಈಚೆಗೆ ಜರುಗಿದ ರಾಜಕೀಯ ವಿದ್ಯಮಾನಗಳನ್ನು ಗಮನಿಸಿದ್ದೇವೆ. ದಶಕಗಳ ಅಂತರ್ಯುದ್ಧದಿಂದ ದೇಶ ಇನ್ನೂ ಚೇತರಿಸಿಕೊಂಡಿಲ್ಲ. ತಮಿಳರ ಸಮಸ್ಯೆ ಇನ್ನೂ ಬಗೆಹರಿದಿಲ್ಲ. ಸ್ವತಂತ್ರ ರಾಷ್ಟ್ರವಾದ ಮೇಲೆ ಭಾರತ ಸಂಜಾತರ ಪ್ರಶ್ನೆ ಉದ್ಭವಿಸಿತು. ಅವರ ಪೈಕಿ ತಮಿಳುನಾಡಿನಿಂದ ವಲಸೆ ಹೋದವರೇ ಹೆಚ್ಚು. ಅನಾದಿಕಾಲದಿಂದ ವಾಸಿಸುತ್ತ ಬಂದಿರುವ ತಮಿಳು ಮಾತನಾಡುವವರು ಒಂದು ಬಗೆಯಾದರೆ, ಬ್ರಿಟಿಷ್ ಪ್ಲಾಂಟೇಶನ್ನುಗಳಲ್ಲಿ ದುಡಿಯಲು ಹೋದವರು ಇನ್ನೊಂದು ಬಗೆ. ಶ್ರೀಲಂಕ ನಾಗರಿಕತ್ವ ದೊರೆಯದವರು ಭಾರತಕ್ಕೆ ವಾಪಸ್ಸಾದರು. ಉಳಿದವರ ಮೇಲೆ ಸರಕಾರ ತೋರಿದ ಭೇದಭಾವವೇ ಅಂತರ್ಯುದ್ಧಕ್ಕೆ ಕಾರಣ. ತಮಿಳು ಪ್ರತ್ಯೇಕವಾದಿಗಳು ಸುದೀರ್ಘ ಕಾಲ ನಡೆಸಿದ ಸಮರ ವಿಫಲಗೊಂಡು ಹಲವು ವರ್ಷಗಳೇ ಕಳೆದಿದ್ದರೂ ಸಮಸ್ಯೆ ಮಾತ್ರ ಹಾಗೇ ಉಳಿದಿದೆ. ಇದಲ್ಲದೆ ಶ್ರೀಲಂಕದ ಬೌದ್ಧರು, ಸಿನ್ಹಾಲಿಯರು, ಮುಸ್ಲಿಮರು, ಕ್ರೈಸ್ತರು, ತಮಿಳರು ಇವರ ಮಧ್ಯೆ ಸಾಮರಸ್ಯ ಕಡಿಮೆ, ಘರ್ಷಣೆಗಳು ಅಪರೂಪವೇನಲ್ಲ. ಹಾಗಾಗಿ ಏಪ್ರಿಲ್ ತಿಂಗಳಲ್ಲಿ ಈಸ್ಟರ್ ಭಾನುವಾರದಂದು ಸಂಭವಿಸಿದ ಆತ್ಮಾಹುತಿ ದಾಳಿ ಹಾಗೂ ಇತರೆಡೆಗಳಲ್ಲಿ ಸಂಭವಿಸಿದ ಸ್ಫೋಟ ಅನಿರೀಕ್ಷಿತವೇನಲ್ಲ. ಸಂಭವನೀಯ ಉಗ್ರರ ದಾಳಿಯ ಮುನ್ಸೂಚನೆ ಇದ್ದಾಗ್ಯೂ ಶ್ರೀಲಂಕ ಸರಕಾರ ಎಚ್ಚರ ವಹಿಸಲಿಲ್ಲ. ಎಂಥದೇ ಕಟ್ಟೆಚ್ಚರವಿದ್ದರೂ ಅಪಾಯ ಇದ್ದದ್ದೆ. ಬಹುತೇಕ ಉಗ್ರರ ದಾಳಿಯಲ್ಲಿ



ಇದನ್ನು ಕಂಡಿದ್ದೇವೆ. ದೇಶದ ಜನಸಂಖ್ಯೆಯಲ್ಲಿ ಶೇ. ೧೦ರಷ್ಟಿರುವ ಮುಸಲ್ಮಾನರು ಹೆಚ್ಚಾಗಿ ವಾಸಿಸುತ್ತಿರುವುದು ಪೂರ್ವ ಪ್ರಾಂತವಾದ ಟ್ರಿಕೋಮಲಿ, ಒಟ್ಟಿಕೊಲ ಮತ್ತು ಅಂಪಾರ ಜಿಲ್ಲೆಗಳಲ್ಲಿ. ಇದು ತಮಿಳು ಮಾತನಾಡುವ ಜನ ಅಧಿಕವಾಗಿರುವ ಪ್ರದೇಶವೂ ಹೌದು. ಈ ಸಂದರ್ಭದಲ್ಲಿ ಶ್ರೀಲಂಕ ಸರಕಾರದ ಹೊಣೆ ಕೋಮು ಸೌಹಾರ್ದ ಕಾಪಾಡುವುದಾಗಿದೆ.



## ಭಾರತಕ್ಕೆ ಸಂದ ರಾಜತಾಂತ್ರಿಕ ಗೆಲುವೆ?

**ಪಾ**ಕಿಸ್ತಾನದಲ್ಲಿರುವ ಜೈಷೆ ಮೊಹಮ್ಮದ್ ಸಂಘಟನೆಯ ನಾಯಕ ಮಸೂದ್ ಅಝರ್‌ಗೆ ಈಗ ಅಂತರರಾಷ್ಟ್ರೀಯ ಉಗ್ರನ ಪಟ್ಟ. ಹಲವು ವರ್ಷಗಳಿಂದ ನೆನೆಗುದಿಗೆ ಬಿದ್ದಿದ್ದ ಉಗ್ರ ಮಸೂದ್‌ನನ್ನು ವಿಶ್ವಸಂಸ್ಥೆ ೨೦೧೯ ಮೇ ೧ರಂದು ಕೊನೆಗೂ ಉಗ್ರ ಎಂದು ಸಾರಿದೆ. ಭದ್ರತಾ ಮಂಡಳಿಯ ಈ ನಿರ್ಧಾರ ಸ್ವಾಗತಾರ್ಹ. ಅಲ್‌ಖೈದಾ ಉಗ್ರ ಪಂಥಕ್ಕೆ ಸೇರಿರುವ ಈತ ಹಲವು ದುಷ್ಕೃತ್ಯಗಳ ಸರದಾರ. ಭಾರತ ಈತನನ್ನು ಜಾಗತಿಕ ಭಯೋತ್ಪಾದಕ ಎಂದು ಘೋಷಿಸಬೇಕೆಂದು ವಿಶ್ವಸಂಸ್ಥೆಯ ಭದ್ರತಾ ಮಂಡಳಿಗೆ ಬೇಡಿಕೆ ಸಲ್ಲಿಸಿ ವರ್ಷಗಳೇ ಉರುಳಿವೆ. ಭದ್ರತಾ ಮಂಡಳಿಯ ಖಾಯಂ ಸದಸ್ಯ ರಾಷ್ಟ್ರ ಚೀಣಾ ಗಣರಾಜ್ಯದ ಆಕ್ಷೇಪ ಇದ್ದುದರಿಂದ ಮಸೂದ್ ಅಝರ್‌ನನ್ನು 'ಜಾಗತಿಕ ಉಗ್ರ' ಪಟ್ಟಿಗೆ ಸೇರಲು ತಡೆ. ಉಳಿದ ಸದಸ್ಯ ರಾಷ್ಟ್ರಗಳ ಬೆಂಬಲ ಇದ್ದರೂ ಪ್ರಯೋಜನವಾಗಿರಲಿಲ್ಲ. ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ನಿಯಮಾವಳಿ ಪ್ರಕಾರ ಬಹುಮತವಿದ್ದರೂ ಖಾಯಂ ಸದಸ್ಯ ರಾಷ್ಟ್ರವೊಂದು ಅಸಮ್ಮತಿ ಸೂಚಿಸಿದರೆ ನಿರ್ಣಯ ಅಂಗೀಕಾರವಾಗುವುದಿಲ್ಲ. ಹಾಗಾಗಿ ಚೀಣಾ ಮಸೂದ್‌ಗೆ ರಕ್ಷೆಯಾಗಿತ್ತು ಇದುವರೆಗೆ. ಕಾಶ್ಮೀರದ ಪುಲ್ವಾಮಾದಲ್ಲಿ ಜರುಗಿದ ಉಗ್ರರ ಅಟ್ಟಹಾಸದ ನಂತರ ಭಾರತ ವಿಶ್ವಸಂಸ್ಥೆಯ ಮೇಲೆ ಒತ್ತಡ ಹೆಚ್ಚಿಸಿತ್ತು. ಚೀಣಾ ಕೋರಿದ ಮೆದು ಧೋರಣೆಯಿಂದಾಗಿ ಈಗ ಮಸೂದ್ ಜಾಗತಿಕ ಉಗ್ರ. ಇದು ಒಂದು ಬಗೆಯಲ್ಲಿ ಭಾರತದ ರಾಜತಾಂತ್ರಿಕಕ್ಕೆ ದೊರೆತ ವಿಜಯ. ಪಾರ್ಲಿಮೆಂಟ್‌ಗೆ ಚುನಾವಣೆಗಳು ಜರುಗುತ್ತಿರುವ ಸಂದರ್ಭದಲ್ಲಿ ಭಾಜಪ ಇದನ್ನು ಬೀಗುತ್ತಿದೆ. ಭದ್ರತಾಮಂಡಳಿಯ ನಿರ್ಣಯದ ತಕ್ಷಣದ ಪರಿಣಾಮ ಎಂದರೆ ಮಸೂದ್‌ಗೆ ಹಣಕಾಸಿನ ಮುಗ್ಗಟ್ಟಿನಿಂದಾಗಿ ಉಗ್ರರ ಜಮಾವಣೆ ಕಷ್ಟವಾದೀತು. ಎಲ್ಲ ದೇಶಗಳೂ ಮಸೂದ್‌ನ ಹಣಕಾಸಿನ ವ್ಯವಹಾರವನ್ನು ಸ್ಥಗಿತಗೊಳಿಸುವುದು ಕಡ್ಡಾಯ.



ಭಾಜಪ ಅಧಿಕಾರದಲ್ಲಿದ್ದಾಗ, ಅಂದು ವಾಜಪೇಯಿ ಪ್ರಧಾನಿಯಾಗಿದ್ದಾಗ ಮಸೂದ್ ಅಝರ್ ಸಿಕ್ಕಿ ಬಿದ್ದಿದ್ದು ಕಾರಾಗೃಹದಲ್ಲಿದ್ದ. ಇಂಡಿಯನ್ ಏರ್‌ಲೈನ್ಸ್ ಅಪಹರಣದ ಪ್ರಕರಣದಲ್ಲಿ ಸರಕಾರ ಆತನನ್ನು ಬಿಡುಗಡೆ ಮಾಡಿ ಪಾಕಿಸ್ತಾನಕ್ಕೆ ರವಾನಿಸಿತು. ಕಾಂದಹಾರ್ ಪ್ರಕರಣ ಎಂದೇ ಅದು ಪ್ರಸಿದ್ಧಿ. ಮಸೂದ್ ಜೈಷೆ ಮಹಮ್ಮದ್ ಸಂಘಟನೆ ಸ್ಥಾಪಿಸಿದ್ದು ಕೂಡ ಬಿಡುಗಡೆಯಾದ ಮೇಲೆಯೆ. ಇದನ್ನು ನೆನಪಿಸಿಕೊಳ್ಳುವುದು ಸೂಕ್ತ. ಹಾಗಾಗಿ ಭಾಜಪ ಪ್ರತಾಪ ಕೊಚ್ಚಿಕೊಳ್ಳುವುದು ಬೇಡ. ಇದೆಲ್ಲ ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಹೊಂದಿಕೆ ಸಾಮಾನ್ಯ. ಚೀಣಾದ ವಿಷಯದಲ್ಲೂ ಇದು ನಿಜ.

**ಸೀಯಾರ್ಕೆ**
'ಸೂರ್ಯ ರೆಸಿಡೆನ್ಸಿ', ಫ್ಲಾಟ್ ನಂ. ೧, ೩೧೩೩, ೩ನೇ ಅಡ್ಡರಸ್ತೆ
ಗಿರಿನಗರ ೪ನೇ ಫೇಸ್, ಬೆಂಗಳೂರು – ೫೬೦ ೦೮೫

# ಯಾರಿಗೆ ಬೇಕೀ ಯುದ್ಧ

ಪ್ರೊ ॥ ಶಿವರಾಮಯ್ಯ

ಅದು ೧೯೬೦ರ ದಶಕ. ನಾನಾಗ ತುಮಕೂರಿನಲ್ಲಿ ಬಿ.ಎ. ಓದುತ್ತಿದ್ದೆ. ನಮ್ಮ ಊರು ಮಧುಗಿರಿ ತಾಲೂಕಿನ ಆವಿನಮಡುಗು ಎಂಬ ಕುಗ್ರಾಮ. ಕಾಲೇಜಿಗೆ ರಜೆ ಇದ್ದಾಗ ಊರಿಗೆ ಹೋಗಿಬರುತ್ತಿದ್ದೆ. ಆಗ ನಮ್ಮ ತಾತ, 'ಪಾಪ! ಎಲ್ಲಾದರೂ ಯುದ್ಧ ನಡೆಯುತ್ತಿದೆಯಾ? ಏರೋಪ್ಲೇನ್‌ಗಳು ಬಹಳ ಹಾರಾಡುತ್ತಿವೆ?' ಎಂದು ಕೇಳುತ್ತಿದ್ದರು. ನನಗೆ ತಿಳಿದ ಮಟ್ಟಿಗೆ ಆಗ ನಮ್ಮ ದೇಶದಲ್ಲಿ ಎಲ್ಲೂ ಯುದ್ಧ ಇರಲಿಲ್ಲ. ಆದರೂ ನಮ್ಮ ತಾತನಿಗೆ ಯುದ್ಧದ ಬಗ್ಗೆ ಭಯ, ಆತಂಕ. ಅವರಿಗೆ ಸ್ವಾತಂತ್ರ್ಯ, ದೇಶಭಕ್ತಿ, ಭಾವೈಕ್ಯತೆ, ರಾಷ್ಟ್ರೀಯತೆ ಮುಂತಾಗಿ ಏನೇನೂ ತಿಳಿಯದು. ಗಾಂಧೀಜಿಯ ಹೆಸರು ಮಾತ್ರ ಗೊತ್ತಿತ್ತು. ಆದರೆ ಯುದ್ಧ ಎಂದರೆ ಮಾತ್ರ ಹೆದರುತ್ತಿದ್ದರು. ಯಾಕೆಂದರೆ, ಯುದ್ಧದಲ್ಲಿ ಹೋರಾಡುವ ಸೈನಿಕರಿಗೆ ಆಹಾರ ಸರಬರಾಜು ಮಾಡಲು ಹಳ್ಳಿಗೆ ಬರುತ್ತಿದ್ದ ಅಧಿಕಾರಿಗಳು ಮನೆಗಳನ್ನು ಜಪ್ತಿ ಮಾಡಿ ಇದ್ದ ಬದ್ದ ದವಸಧಾನ್ಯಗಳನ್ನೆಲ್ಲ ಕೊಂಡೊಯ್ಯುತ್ತಿದ್ದರಂತೆ. ಆಗ ಜನ ಅನ್ನ ನೀರಿಲ್ಲದೆ ಸಾಯಬೇಕಾಗುತ್ತಿತ್ತು. ಅಲ್ಲದೆ ಸೈನ್ಯ ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗುವಾಗ ದಾರಿಯಲ್ಲಿ ಸಿಕ್ಕ ಗ್ರಾಮಗಳಿಂದ ಹೆಣ್ಣು ಮಕ್ಕಳನ್ನು ಅಪಹರಿಸಿಕೊಂಡು ಹೋಗಿ ಮಾನಭಂಗ ಮಾಡಿ ತಂದುಬಿಡುತ್ತಿದ್ದುದೂ ಉಂಟೆಂದು ಊರ ಹಿರಿಯರು ಮಾತಾಡಿಕೊಳ್ಳುತ್ತಿದ್ದರು. ಹೀಗಾಗಿ ಹಳ್ಳಿ ಮಂದಿ ಯಾರು ರಾಜ್ಯ ಆಳಿದರೇನು ನಮಗೆ ರಾಗಿ ಬೀಸೋದು ತಪ್ಪೀತೆ? ಯಾರಿಗೆ ಬೇಕೀ ಯುದ್ಧ ಎಂದು ಹೆದರಿಕೊಳ್ಳುತ್ತಿದ್ದರು.

ಆಂಗ್ಲ ಭಾಷೆಯಲ್ಲಿ ಸೌದೆ ಎಂಬ ಕವಿಯ ಬ್ಲೆನ್‌ಹೀಮ್ ಕದನ ಎಂಬ ಒಂದು ಕಥನ ಕವನ ಇದೆ. ಅದರ ಸಾರಾಂಶ ಇಷ್ಟು: ನದಿತೀರದ ಒಂದು ಊರು. ಆ ಊರಿನ ರೈತನೊಬ್ಬ ಹೊಲ ಉಳಲು ಹೋಗಿದ್ದಾಗ ಅವನ ಮಗ ಹಿಂದೆ ಹೋಗಿದ್ದಾನೆ. ರೈತ ಉಳುತ್ತಿದ್ದಾಗ ನೇಗಿಲ ಕುಳಕ್ಕೆ ಒಂದು ತಲೆ ಬುರುಡೆ ಸಿಕ್ಕುತ್ತದೆ. ಅದನ್ನು ಆ ಹುಡುಗ ಒಂದು ಕೋಲಿಗೆ ಸಿಕ್ಕಿಸಿಕೊಂಡು ಓಡುತ್ತಾ ಮನೆಗೆ ಬಂದು ಅಂಗಳದಲ್ಲಿದ್ದ ಅಜ್ಜನಿಗೆ ತೋರಿಸಿ ಇದೇನೆಂದು ಕೇಳುತ್ತಾನೆ. ಅಜ್ಜ, ಇದಾವುದೊ ಸೈನಿಕನ ತಲೆಯೋಡು. ಇಂಥ ಎಷ್ಟೋ ನಮ್ಮ ತೋಟದಲ್ಲಿ ನೋಡಿರುವೆನು. ಆ ದೊಡ್ಡ ಕಾಳಗದಲ್ಲಿ ಸಾವಿರಗಟ್ಟಲೆ ಜನ ಸತ್ತರಂತೆ ಎಂದು ಹೇಳುತ್ತಾನೆ. ಇದನ್ನು ಕೇಳಿ ಆ ಹುಡುಗ ಮತ್ತು ಅವನ ತಂಗಿಗೆ ಕಿವಿ ನಿಮಿರಿದವು. ಅದೇನು ಕಥೆ ಹೇಳಜ್ಜ ಎಂದು ಗಂಟುಬಿದ್ದರು. ಅಜ್ಜ, ಇಂಗ್ಲಿಷರಿಗೂ ಫ್ರೆಂಚರಿಗೂ ನಡೆದ ಜನಜನಿತ 'ಬ್ಲೆನ್‌ಹೀಮ್ ಕದನ'ದ ಕಥೆ ಹೇಳುತ್ತಾ ಅದೊಂದು ದೊಡ್ಡ ಜಯದ ಕಥೆ. ಸಾವಿರಗಟ್ಟಲೆ ಜನ ಕೊಲೆಯಾಗಿ ಬಿದ್ದರು. ಹೆಂಗಸರು ಮಕ್ಕಳು ಹಾಲು ಹಸುಳೆಗಳು ಸತ್ತುದಕ್ಕೆ ಲೆಕ್ಕವೇ ಇಲ್ಲ. ಯಾರನ್ನೇ ಕೇಳಿ ಲೋಕಪ್ರಸಿದ್ಧಿಯ ಯುದ್ಧ ಎಂಬರು. ಆ ಲೋಕಪ್ರಸಿದ್ಧಿಯ ಜಯಕ್ಕಾಗಿ ಇಂಥ ಎಷ್ಟೊ ಬಲಿ ಆಗಬೇಕಲ್ಲ? ದೇಶವೇ ಹೊಗಳಿತು ಗೆದ್ದ ನಾಯಕರನು. ಆಗ ಹೂಮಳೆ ಸುರಿದವು ಎಂದ. ಇದೆಲ್ಲ ಕೇಳುತ್ತಿದ್ದ ಅವನ ಪುಟ್ಟ ಮೊಮ್ಮಗಳು 'ಛೀ, ತೆಗೆ, ಏನಿದು ಬಲು ಕೆಟ್ಟ ಕೆಲಸವು?' ಎಂದು ಉದ್ಗರಿಸುವಳು. ಆದರೆ ಅಜ್ಜ ಪುನಃ ಹೇಳುವನು 'ಲೋಕಪ್ರಸಿದ್ಧಿಯ ಜಯವದು' ಎಂದು. ಆಗ ಮೊಮ್ಮಗ 'ಇದರಿಂದ ಒಳ್ಳೆಯದು ಕಡೆಗಾದುದೇನಜ್ಜ?' ಎನ್ನುವನು. 'ಅದ ನಾನು ಬಲ್ಲೆನೆ? ಆದರೆ, ಯಾರನೆ ಕೇಳದು ಲೋಕಪ್ರಸಿದ್ಧಿಯ ಜಯ ಎಂಬರು' ಎಂದು ಅಜ್ಜ ಸುಮ್ಮನಾಗುವನು. ಒಟ್ಟಾರೆ ಯುದ್ಧ ಎಂದರೆ ಸಾವು ನೋವು ಅಷ್ಟೆ. ಅದರಿಂದ ಯಾರಿಗೆ ಒಳ್ಳೆಯದಾಗುವುದು? ಎಂದು ಮಕ್ಕಳು ಕೇಳುವ ಪ್ರಶ್ನೆಗೆ ಇವತ್ತಿಗೂ ಉತ್ತರ ಇಲ್ಲ. ಹಾಗಾದರೆ ಯಾರಿಗೆ ಬೇಕೀ ಯುದ್ಧ?



ಕಳಿಂಗ ಯುದ್ಧದಲ್ಲಿ ಸಂಭವಿಸಿದ ಸಾವು ನೋವನ್ನು ಪ್ರತ್ಯಕ್ಷ ಕಂಡ ಅಶೋಕ ಚಕ್ರವರ್ತಿ ಯುದ್ಧವನ್ನು ನಿಲ್ಲಿಸಿದ್ದು, ಅಹಿಂಸಾ ದೀಕ್ಷೆ ತೊಟ್ಟದ್ದು, ಬೌದ್ಧ ಮತಾವಲಂಬಿಯಾಗಿ ಬೌದ್ಧ ಧರ್ಮ ಪ್ರಚಾರಕ್ಕಾಗಿ ದೇಶ ವಿದೇಶಗಳಿಗೆ ಪ್ರಚಾರಕರನ್ನು ಕಳುಹಿಸಿದ್ದು ಇತ್ಯಾದಿ ಎಲ್ಲವೂ ಯುದ್ಧ ವಿರೋಧಿ ಜಗದ ಹಸಿರು ಇತಿಹಾಸ. ಉಳಿದಂತೆ ಇತಿಹಾಸವೆಲ್ಲವೂ ರಕ್ತ ಚರಿತ್ರೆಯೇ. ನಮ್ಮ ರಾಮಾಯಣ, ಮಹಾಭಾರತ, ಪಾಶ್ಚಾತ್ಯರ ಇಲಿಯಡ್, ಒಡಿಸ್ಸಿ, ಪಂಪರನ್ನರ ಕಾವ್ಯಗಳೂ ಸೇರಿದಂತೆ ಷೇಕ್ಸ್‌ಪಿಯರನ ನಾಟಕಗಳು, ಮಹರ್ಷಿ ಟಾಲ್‌ಸ್ಟಾಯ್ ಅವರ ವಾರ್ ಅಂಡ್ ಪೀಸ್ ಕಾದಂಬರಿವರೆಗೆ ಎಲ್ಲವೂ ರಕ್ತ ಚರಿತ್ರೆಗಳೇ! ಎಲ್ಲವೂ ಹಿಂಸಾರಭಸಮತಿಗಳ ಕದನ ಕೋಲಾಹಲದ ಕಥನಗಳೇ!

ಕುರುಕ್ಷೇತ್ರ ರಣರಂಗದಲ್ಲಿ ಪಾಂಡವರ ೭ ಅಕ್ಷೋಹಿಣಿ, ಕೌರವರ ೧೧ ಅಕ್ಷೋಹಿಣಿ ಒಟ್ಟು ೧೮ ಅಕ್ಷೋಹಿಣಿ ಸೈನ್ಯ ಹಾಗೂ ಲಕ್ಷೋಪಲಕ್ಷ ಆನೆ ಕುದುರೆಗಳು ಸತ್ತುದರಿಂದ ವೈಶಂಪಾಯನ ಸರೋವರ ಪರಿಸರವೆಲ್ಲ ಹೆಣಮಯವಾಗಿ ಯೋಜನಾಂತರದವರೆಗೆ ದುರ್ವಾಸನೆ ಹಬ್ಬಿ ಹರಡಿದೆ. ಆ ಸತ್ತ ಸೈನಿಕರ ಹೆಂಗಸರು ಮಕ್ಕಳು ಅಪ್ಪ ಅಮ್ಮಂದಿರು ಬಂಧು ಬಾಂಧವರಾದಿಯಾಗಿ ಅವರ ಅವಲಂಬಿತರೆಲ್ಲರೂ ನಿರ್ಗತಿಕರಾದರು. ಈ ಸರ್ವನಾಶದ ಸಮಾಧಿಯ ಮೇಲೆ ಧರ್ಮರಾಜ ಪಟ್ಟಾಭಿಷಿಕ್ತನಾದನಂತೆ. ಹಾಗಾದರೆ ಯಾರಿಗೆ ಬೇಕೀ ಯುದ್ಧ?

ಇಪ್ಪತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಜರುಗಿದ ಎರಡು ವಿಶ್ವ ಯುದ್ಧಗಳ ವಿಚಾರಕ್ಕೆ ಬಂದರೆ, ಅವುಗಳಿಂದಾದ ರಕ್ತಪಾತವು ಸಾಗರಗಳ ನೀರನ್ನೇ ಕೆಂಪಾಗಿಸಿತು. ಆ ಸಾವು ನೋವಿನ ಲೆಕ್ಕ ಇಟ್ಟವರಾರು? ಆದರೂ ಹಿಂಸಾರಭಸಮತಿಗಳ ರಕ್ತದಾಹಕ್ಕೆ ತಣಿವು ಎಂಬುದೇ ಇಲ್ಲ. ಇನ್ನು ಜಾಗತಿಕ ಯುದ್ಧಗಳು ಸುರಿದ ಸಿಡಿಮದ್ದು, ಅಣು ಬಾಂಬುಗಳಿಂದಾದ ಅನಾಹುತಕ್ಕೆ ಪಾರವೇ ಇಲ್ಲ. ಭೂ ಗಗನ ಪರ್ಯಂತ ಪರಿಸರ ತುಂಬಿದ ಆ ವಿಷಾನಿಲ ಇನ್ನೂ ನೆಲಜಲದ ಜೀವ ಸಂಕುಲವನ್ನು ಬಲಿ ಬೇಡುತ್ತಲೇ ಸಾಗಿದೆ. ಎಲ್ಲವೂ ನಿಷ್ಪ್ರಯೋಜಕ. ಆದರೂ ಯುದ್ಧಗಳಿಗೆ ನಿಲುಗಡೆಯೇ ಇಲ್ಲ. ಅಂತರರಾಷ್ಟ್ರೀಯ ಗಡಿರೇಖೆಗಳುದ್ದಕ್ಕೂ ಎರಡೂ ದೇಶಗಳ ಸೇನೆ ಜಮಾಯಿಸಿರುತ್ತವೆ. ಸಣ್ಣಪುಟ್ಟ ಕಾರಣಗಳಿಗೆಲ್ಲ ಅತಿಕ್ರಮಣ ಆಯ್ತೆಂದು ಕಾದಾಡುತ್ತಲೆ ಇರುತ್ತವೆ. ಅಣ್ವಸ್ತ್ರಗಳಿಂದ ಕಣಜಗಳನ್ನು, ಅವುಗಳ ಸುತ್ತ ತಮ್ಮ ಪ್ರತಿಷ್ಠೆಯ ಕೋಟೆ ಕಟ್ಟಿ, ಅದರ ಮೇಲೆ ನಿಂತು 'ನಾನು ಕ್ಷೇಮ ನೀನು ಕ್ಷೇಮ' ಎಂಬ ಸುಳ್ಳು ವಿದೇಶಾಂಗ ನೀತಿಯನ್ನು ಬಿತ್ತರಿಸುತ್ತ ಕಾವಲು ಕೂತಿವೆ.

ಅವತಾರ ಪುರುಷ ಯಾಕೆ ಹುಟ್ಟುತ್ತಾನೆ ಎಂಬ ಪ್ರಶ್ನೆಯನ್ನು ಹಾಕಿಕೊಂಡ ಭಗವದ್ಗೀತೆ 'ಧರ್ಮಕ್ಕೆ ಗ್ಲಾನಿ (ಮುಸುಕು) ಉಂಟಾದಾಗ ಅದನ್ನು ನಿವಾರಿಸಿ ಭೂ ಭಾರವನ್ನು ತಗ್ಗಿಸಲು ಭಗವಂತ ಹುಟ್ಟಿ ಬರುತ್ತಾನೆ' ಎಂದು ವ್ಯಾಖ್ಯಾನಿಸುತ್ತದೆ. ಎಂದರೆ ಪ್ರತಿಯೊಂದು ಅವತಾರದ ಕೊನೆಗೂ ಯುದ್ಧ ಸಂಭವಿಸಿ ಭೂ ಭಾರ ಇಳಿಯುತ್ತದೆ. ಆಮೇಲೆ ಅವತಾರ ಪುರುಷ ಅವನ ಲೋಕಕ್ಕೆ ತೆರಳುತ್ತಾನೆ. ಇದೊಂದು ಪುರಾಣ ರೂಪಕವೆಂದು ಭಾವಿಸಬಹುದು. ಇದೇ ಪ್ರಮೇಯವನ್ನು ಜೀವ ವಿಜ್ಞಾನದ ಹಿನ್ನೆಲೆಯಲ್ಲಿ ಸಮೀಕ್ಷಿಸಿದರೆ, ಯಾವುದೇ ಜೈವಿಕ ಸಂತತಿ ಅತಿಯಾಗಿ ವೃದ್ಧಿಗೊಂಡಾಗ ಅದು ತಾನಾಗಿಯೇ ನಾಶವಾಗಿ ಹೋಗುತ್ತದೆ; ಇಲ್ಲವೆ ಕಚ್ಚಾಡಿಕೊಂಡು ಸತ್ತು ಸಮತೋಲನವನ್ನು ಕಾಪಾಡಿಕೊಳ್ಳುತ್ತದೆ ಎನ್ನಬಹುದು. ಸತ್ತವರಿಗೆ ಸ್ವರ್ಗ ಬರುವುದೆಂದು ಸಾಯುವುದಕ್ಕೆ ಪ್ರೋತ್ಸಾಹಿಸಿದ ನೀನು ಮಹಾ ಪಾಪಿಷ್ಠನೆಂದು ಧರ್ಮರಾಜನನ್ನು ಚಾರ್ವಾಕ ಬ್ರಾಹ್ಮಣನೊಬ್ಬ ದೂಷಿಸುತ್ತಾನೆ. ಅನಂತರ ಅಲ್ಲಿದ್ದ ಇತರ ಬ್ರಾಹ್ಮಣರು ಚಾರ್ವಾಕನನ್ನು ಶಾಪದಿಂದ ಕೊಂದು ಬಿಡುತ್ತಾರೆ. ಇದು ಭಾರತದಲ್ಲಿ ಬರುವ ಕಥೆ. ಇದರಿಂದ ಎರಡು ಅಂಶಗಳ ಮೇಲೆ ಬೆಳಕು ಬೀಳುತ್ತದೆ. ಪ್ರಪಂಚವನ್ನು ಸುಖವಾಗಿಟ್ಟುಕೊಂಡು ತಾವೂ ಸುಖವಾಗಿರ ಬೇಕು. ಕೇವಲ ತಮ್ಮ ಸುಖಕ್ಕೋಸ್ಕರವೆ ಪ್ರಪಂಚವನ್ನು ಹಿಂಸಿಸಬಾರದು ಎಂಬ ಪ್ರಪಂಚಾನುಗ್ರಹ ದೃಷ್ಟಿಯೇ ಚಾರ್ವಾಕಮತದ ಮುಖ್ಯ ಧ್ಯೇಯವಾಗಿತ್ತೆಂಬು ದೊಂದು. ಇನ್ನೊಂದು, ಮತೀಯ ಸಹಿಷ್ಣುತೆಗೆ, ವೈಚಾರಿಕ ಸ್ವಾತಂತ್ರ್ಯಕ್ಕೆ ಹೆಸರಾಗಿದ್ದ ಭಾರತೀಯ ಪರಂಪರೆಯಲ್ಲಿಯೂ ವಿರೋಧಾಭಿಪ್ರಾಯಕ್ಕೆ ಅಸಹನೆ, ಅವುಗಳ ದಮನ, ನಾಶಗಳಂಥ ಅವೈಚಾರಿಕ ಕ್ರಮಕ್ಕೆ ಕ್ವಚಿತ್ತಾಗಿಯಾದರೂ ಅವಕಾಶವಿತ್ತೆಂಬುದಕ್ಕೆ ಚಾರ್ವಾಕ ದರ್ಶನದಂಥ ಕೆಲವು ನಿದರ್ಶನಗಳಿದ್ದು ವೆಂಬುದು. (ಕನ್ನಡ ವಿಶ್ವಕೋಶ ಸಂಪುಟ: ಏಳು. ಪುಟ:೩೦೮)

ತಾತ್ಪರ್ಯವೆಂದರೆ ಧರ್ಮಸಮ್ಮತವಾದ ದುಡಿಮೆ ಹಾಗೂ ಧರ್ಮ



ಸಮ್ಮತವಾದ ಕಾಮನೆಗಳ ಉಪಭೋಗ ತಪ್ಪಲ್ಲ. ಚಾರ್ವಾಕ ದರ್ಶನದ ಸಾರವೇ ಇದು. ಬುದ್ಧ, ಏಸು ಬಸವಾದಿಗಳು ಸಾರಿದ ಧರ್ಮ ಸಾರವು ಇಷ್ಟೆ. ಆದರೆ ಸ್ವಾರ್ಥ ಕಾಮನೆಗಳಿಗೆ ಈಡಾದ ಮನುಷ್ಯನಿಗೆ ಮಾತ್ರ ಈ ಮಾತು ಗ್ರಾಹ್ಯವಾಗುವುದಿಲ್ಲ. ಸಂಪತ್ತು ಸಂಗ್ರಹ, ಸರ್ವಾಧಿಕಾರ ಇವುಗಳ ಲಾಲಸೆ ಹಿಂಸೆಗೆ ತೊಡಗಿಕೊಳ್ಳುವಂತೆ ಮಾಡುತ್ತದೆ. ಯಾರು ಯುದ್ಧ ಮಾಡಿ ಸಂಪತ್ತನ್ನು ಸಂಗ್ರಹಿಸಿ ತನ್ನ ವಂದಿಮಾಗಧರಿಗೆ, ಎಂದರೆ ಬ್ರಾಹ್ಮಣ ಪುರೋಹಿತರಿಗೆ ದಾನವೆಂದು ನೀಡುತ್ತಾನೋ ಅವನಿಗೆ ಇಂದ್ರ ಪದವಿ ಗ್ಯಾರಂಟಿ. ಆಗ ರಾಜಾ ಪ್ರತ್ಯಕ್ಷ ದೈವ ಆಗುತ್ತಾನೆ; ಬ್ರಾಹ್ಮಣ ಭೂಲೋಕದ ದೇವತೆ ಆಗುತ್ತಾನೆ. ಆದರೆ ಪ್ರಜಾರಾಜ್ಯದಲ್ಲಿ ಹಿಂಸೆ ಬೇಕಾಗಿಲ್ಲ. ಸಹನೆ, ಸಹಬಾಳ್ವೆ, ಸಮಾನತೆ, ಸ್ವಾತಂತ್ರ್ಯ, ದುಡಿಮೆ ಇಷ್ಟು ಸಾಕು. ಇದೇ ಚಾರ್ವಾಕ ದರ್ಶನ. ಆದರೆ ಚಾರ್ವಾಕನದು ಒಂಟಿದನಿ. ಪರಾವಲಂಬಿ ಪುರೋಹಿತಶಾಹಿಗೆ ಇದು ಸರಿಬೀಳುವುದಿಲ್ಲ. ಅವನನ್ನು ಕೊಂದರು; ಆದರೆ ಅವನ ದನಿಯನ್ನು ಮಾತ್ರ ಕೊಲ್ಲಲಾಗಿಲ್ಲ. ಇದೇ ವಿದ್ಯಮಾನ ಇವತ್ತಿಗೂ ಜರುಗುತ್ತಿದೆ ಎಂಬುದು ಮಾತ್ರ ಕಟುಸತ್ಯ. ಪ್ರಭುತ್ವ ಮತ್ತು ಅದನ್ನು ಬೆಂಬಲಿಸುವ ಧಾರ್ಮಿಕ ಸಂಸ್ಥೆಗಳು ಮಾಡುವ ಹಿಂಸೆಯ ವಿರುದ್ಧ ಯಾರಾದರು ದನಿ ಎತ್ತಿದರೆ ಅದನ್ನು ಉಡುಗಿಸುವ ಯತ್ನ ನಡೆಯುತ್ತಲೇ ಇದೆ.

ಯಾವ ಮತಧರ್ಮವೂ ಹಿಂಸೆಯನ್ನು ಬೋಧಿಸುವುದಿಲ್ಲ. ಎಲ್ಲ ಧರ್ಮಗಳೂ ಸತ್ಯ, ಅಹಿಂಸೆ, ಕರುಣೆಯ ತ್ರಿವೇಣಿ ಸಂಗಮವೇ ಆಗಿವೆ. ಆದರೆ ಅನುಯಾಯಿಗಳು ಅವುಗಳನ್ನು ತಮ್ಮ ಸ್ವಾರ್ಥಕ್ಕಾಗಿ ಅಪಮೌಲ್ಯಗೊಳಿಸಿ ಅಮಾಯಕ ಜನರನ್ನು ತಪ್ಪುದಾರಿಗೆಳೆಯುತ್ತಾರೆ. ಪರ ವಿಚಾರವನ್ನು ಪರಧರ್ಮವನ್ನು ಸಹನೆಯಿಂದ ಕಾಣದ ಧರ್ಮ, ಅದು ಧರ್ಮವೇ ಅಲ್ಲ. ಪ್ರತಿಯೊಂದು ಧರ್ಮವೂ ಮಾನವನ ಒಳಿತಿಗಾಗಿಯೇ ಹುಟ್ಟುವುದು. ಆದರೆ ನಮ್ಮ ಹಿತಾಸಕ್ತಿಗಾಗಿ ಅದನ್ನು ಮಿತಗೊಳಿಸಿ ಬಿಡುತ್ತಾರೆ. ಇದೇ ಧರ್ಮ ದುರಂತ. ಇದಕ್ಕಾಗಿ ಪ್ರಭುತ್ವವನ್ನು ಬಳಸಿಕೊಂಡು ನಿಜದ ನೇರಕ್ಕೆ ನಡೆಯುವವರನ್ನು ಇಲ್ಲವಾಗಿಸಿ ಬಿಡುತ್ತಾರೆ. ಇದು ಧರ್ಮಬಾಹಿರ ನಡೆ. ದೇಶ ವಿದೇಶಗಳ ನಡುವೆ ಸಣ್ಣ ಭಿನ್ನಾಭಿಪ್ರಾಯ ಹುಟ್ಟಿದರೂ ಅದೇ ನೆಪದಲ್ಲಿ ಕದನ ಕೈಗಟ್ಟುತ್ತದೆ. ಉದಾಹರಣೆಗೆ ಭಾರತ ಪಾಕಿಸ್ತಾನ ನಡುವಿನ ನಿರಂತರ ಕಾಳಗಗಳು. ಇದರಿಂದ ಸಾವು ನೋವಿಗೆ ಈಡಾಗುವವರು ಮಾತ್ರ ಎರಡೂ ಕಡೆಯ ಕಾವಲು ಪಹರೆ ಯೋಧರು ಮತ್ತು ಗಡಿ ಪ್ರದೇಶದ ಅಮಾಯಕ ಪ್ರಜೆಗಳು.

ಅಶೋಕನಂಥ ರಾಜನನ್ನು ಹೊರತುಪಡಿಸಿದರೆ ಜಗತ್ತಿನ ಎಲ್ಲ ಸಾಮ್ರಾಟರೂ ಸುಲಿಗೆಕೋರರೇ ಆಕ್ರಮಣಕಾರಿಗಳೇ. ಹಿಂದೆ ಹೆಣ್ಣು, ಹೊನ್ನು, ಮಣ್ಣಿಗಾಗಿ ಯುದ್ಧಗಳು ಸಂಭವಿಸುತ್ತಿದ್ದವು. ಅದು ಮುಕ್ಕಾಲು ಪಾಲು ನಿಜವೂ ಸಹ. ಸೀತೆ ಹುಟ್ಟಿ ಲಂಕೆ ಹಾಳು; ಹೆಲೆನ್ ಹುಟ್ಟಿ ಗ್ರೀಸ್ ಹಾಳು ಎಂಬ ಗಾದೆ ಇದೆ. ಈ ಗಾದೆ ಇಂದಿಗೆ ಪೂರ್ಣ ಅನ್ವಯವಾಗುವುದಿಲ್ಲವಾದರೂ ರಾಜ್ಯ ವಿಸ್ತರಣೆಗಾಗಿ, ಸಂಪತ್ತಿನ ಲೂಟಿಗಾಗಿ ಯುದ್ಧಗಳು ಸಂಭವಿಸುತ್ತಲೇ ಇವೆ. ಇಲ್ಲವಾಗಿದ್ದರೆ, ದ್ವಿತೀಯ ವಿಶ್ವ ಸಮರದ ತರುವಾಯ ವಿಶ್ವಸಂಸ್ಥೆ ವೇದಿಕೆಯಲ್ಲಿ ನಮ್ಮ ಅಂದಿನ ಪ್ರಧಾನಿ ಪಂಡಿತ ನೆಹರು ಮಂಡಿಸಿದ–ಪರಸ್ಪರ ದೇಶಗಳ ನಡುವಿನ ಪ್ರಾದೇಶಿಕ ಐಕ್ಯತೆ ಮತ್ತು ಸಾರ್ವಭೌಮತ್ವ ವನ್ನು ಗೌರವಿಸುವುದು; ಪರಸ್ಪರರು ದಾಳಿ ಮಾಡದಿರುವುದು; ಪರಸ್ಪರರು ಉಭಯ ದೇಶಗಳ ಆಂತರಿಕ ವ್ಯವಹಾರಗಳಲ್ಲಿ ಹಸ್ತಕ್ಷೇಪ ಮಾಡದಿರುವುದು; ಸಮಾನತೆ ಮತ್ತು ಪರಸ್ಪರರ ಅವಕಾಶಗಳು; ಶಾಂತಿಯುತ ಸಹಬಾಳ್ವೆ – ಈ ಪಂಚಶೀಲಗಳ ಪ್ರಸ್ತಾವನೆಯನ್ನು ಅಂಗೀಕರಿಸಿದ ಮೇಲೂ ಸಹ ಸಣ್ಣ ಪುಟ್ಟ ಯುದ್ಧಗಳು ಏಕೆ



ನಡೆಯುತ್ತಿದ್ದವು? ಈ ಸಂದರ್ಭದಲ್ಲಿ ಧರ್ಮ ಯುದ್ಧಗಳ ಬಗ್ಗೆ ಸ್ಮರಿಸುವುದಾದರೆ ಮಧ್ಯಪ್ರಾಚ್ಯ ರಾಷ್ಟ್ರಗಳಲ್ಲಿ ಕುದುರೆಗಳು ಕೆನ್ನೀರಿನ ಕಾಲುವೆಗಳಲ್ಲಿ ಈಜುತ್ತಿದ್ದವು ಎಂಬುದು ಇತಿಹಾಸ. ಇವತ್ತಿಗೂ ಅದೇ ಕುರುಡು ಮತಾಂಧತೆಯಿಂದ ಯುದ್ಧಗಳು ಸಂಭವಿಸುತ್ತಿವೆ ಎಂಬುದು ಸುಳ್ಳಲ್ಲ. ಧರ್ಮಗಳ ಮೇಲಾಟ ಎಂದರೆ ರಕ್ತಪಾತದ ರಂಗೋಲೆ ಆಟ. ಈಗ ಮತ್ತೆ ಮೊದಲಿಗೆ ಬಂದರೆ ಯಾರಿಗೆ ಬೇಕೀ ಯುದ್ಧ? ಈ ಪ್ರಶ್ನೆಗೆ ಉತ್ತರ ನೇರವಾಗಿ ಅಲ್ಲದಿದ್ದರೂ ಅದರ ಫಲಾನುಭವಿಗಳು ಯಾರೆಂಬುದು ಸ್ಪಷ್ಟವಾಗುತ್ತದೆ. ಆದರೆ ಇದನ್ನು ಅಜ್ಜ ತನ್ನ ಮೊಮ್ಮಗನಿಗೆ ತಿಳಿಸಿ ಹೇಳುವುದು ಹೇಗೆ? ಇದು ನಮ್ಮನ್ನು ಕಾಡುವ ಪ್ರಶ್ನೆ.

**ಲೋಕದಲ್ಲಿ ಯುದ್ಧವೆ ಇಲ್ಲವಾಗಿದ್ದರೆ ಹೇಗೆ?**

ಜಗತ್ತು ಯುದ್ಧ ಮುಕ್ತವಾಗಿದ್ದರೆ, ಎಲ್ಲೂ ಯುದ್ಧ ಕದನ ಕಾಳಗ ಕಲಹಗಳೇ ಸಂಭವಿಸದಿದ್ದರೆ, ಮಹಾವೀರ, ಬುದ್ಧ, ಏಸು, ಪೈಗಂಬರ್ ಮುಂತಾದವರ ಬೋಧನೆಯಂತೆ ನಡೆದಿದ್ದರೆ ಪ್ರಪಂಚ ಎಷ್ಟು ಚಂದ ಇರುತ್ತಿತ್ತು? ಯುದ್ಧಾಸ್ತ್ರಗಳಿಗೆ ಹಾಗೂ ಸೈನ್ಯಕ್ಕೆ ವ್ಯಯ ಮಾಡುವ ಹಣವನ್ನು ಆಯಾ ದೇಶಗಳು ತನ್ನ ಪ್ರಜೆಗಳ ಉದ್ಧಾರಕ್ಕೆ ಖರ್ಚು ಮಾಡಿದ್ದಾದರೆ, ಯಾವೊಬ್ಬ ಪ್ರಜೆಯೂ ಅನ್ನಾಹಾರವಿಲ್ಲದೆ ಸಾಯುವ ಪ್ರಮೇಯವೆ ಬರುತ್ತಿರಲಿಲ್ಲ. ಯಾವ ಒಂದು ಮಗುವೂ ಪೌಷ್ಟಿಕಾಂಶದ ಕೊರತೆಯಿಂದ ನರಳಬೇಕಾಗಿರಲಿಲ್ಲ; ಎಲ್ಲ ಮಕ್ಕಳಿಗೂ ಮಾಂಸ ಮೊಟ್ಟೆ ಹಾಲು ಜೇನು ನೀಡಿ ಬೆಳೆಸಬಹುದಾಗಿತ್ತು. ಒಟ್ಟಾರೆ ಎಲ್ಲಾ ದೇಶಗಳೂ ಸಂಪತ್ಸಮೃದ್ಧಿಯನ್ನು ಸಾಧಿಸಬಹುದಾಗಿತ್ತು! ಆದರೆ ಹಾಗಾಗುತ್ತಿಲ್ಲ ಏಕೆ? ಯಾಕೆಂದರೆ ಮನುಷ್ಯನ ಅವಿವೇಕತನದಿಂದ ಯುದ್ಧಗಳಾಗುತ್ತಿವೆ.

ಈ ನಮ್ಮ ಸಮಸ್ಯೆಗೂ ಮಹಾಕಾವ್ಯಗಳೇ ಸಮಜಾಯಿಷಿ ಹೇಳುತ್ತವೆ. ಶ್ರೀರಾಮನಿಗೆ ಮತ್ತು ಧರ್ಮರಾಯನಿಗೆ ಪಟ್ಟವಾದ ಮೇಲೆ ಆ ದೇಶಗಳು ಶಾಂತಿ ಸುಭಿಕ್ಷದಿಂದ ಇದ್ದುವು. ಹಾಗಾದರೆ ರಾಮನಿಗಾಗಲಿ, ಧರ್ಮರಾಯನಿಗಾಗಲಿ ಪುನಃ ಹಿಂಸಾತ್ಮಕವಾದ ಅಶ್ವಮೇಧ ಯಾಗವನ್ನು ಮಾಡುವ ಪ್ರಮೇಯವೇನಿತ್ತು? ಅಶ್ವಮೇಧ ಯಾಗಗಳು ಯಾವತ್ತೂ ಶಾಂತಿ ಸುಭಿಕ್ಷವಾಗಿದ್ದ ಸಂದರ್ಭದಲ್ಲಿಯೇ ಜರುಗುತ್ತವೆ ಏಕೆ? ಈ ಯಾಗಗಳಿಗೆ ಸಲಹೆ ಮಾಡಿದವರು ಯಾರು? ಅದರಿಂದ ಆದ ಪ್ರಯೋಜನವೇನು? ಯಾರಿಗೆ ಲಾಭವಾಯಿತು? ಇವು ಬಹಳ ಸೂಕ್ಷ್ಮ ಪ್ರಶ್ನೆಗಳು.

ಸೀತಾ ಪರಿತ್ಯಾಗದಿಂದ ರಾಮನ ಮನಸ್ಸಿಗಾದ ಆಘಾತದ ಉಪಶಮನಕ್ಕೆ ಹಾಗೂ ಮಹಾಭಾರತ ಯುದ್ಧದಿಂದ ಧರ್ಮರಾಯನ ಮನಸ್ಸಿಗಾದ ಆಘಾತದ ಉಪಶಮನಕ್ಕೆ ಅಶ್ವಮೇಧ ಯಾಗಗಳನ್ನು ಕೈಗೊಂಡರು ಎಂದು ಹೇಳುವುದು ಒಂದು ಸಮಜಾಯಿಷಿ. ಆದರೆ ಶ್ರೀರಾಮ ಮತ್ತು ಧರ್ಮರಾಯನ ಮಾನಸಿಕ ನೆಮ್ಮದಿಗೆ ಅಶ್ವಮೇಧ ಯಾಗಗಳೇ ಬೇಕಾಗಿತ್ತೆ? ಅಥವಾ ಆ ಶಾಂತಿ ಕಾಲದಲ್ಲಿ ಬ್ರಾಹ್ಮಣರಿಗೆ ಯಾವ ಭೂರಿ ಭೋಜನ, ದಾನ ದಕ್ಷಿಣೆ ಇತ್ಯಾದಿ ಇಲ್ಲದೆ ಪರಿತಪಿಸುವಂತಾಯಿತೊ? ತಿಳಿಯದು. ಆದರೆ ಈ ಪ್ರಶ್ನೆಗಳಿಗೆ ಯಾಗಾಂತ್ಯದಲ್ಲಿ ಉತ್ತರ ವಿದಿತವಾಗುತ್ತದೆ. ಅಶ್ವಮೇಧ ದಿಗ್ವಿಜಯ ಸಂದರ್ಭದಲ್ಲಿ ಗೆದ್ದು ತಂದ ಸಂಪತ್ತಿನಲ್ಲಿ ಒಂದಷ್ಟು ಭಾಗವನ್ನು ಯಾಗಕ್ಕೆ ಸುರಿದು ಸುಟ್ಟು ಹಾಕಿ, ಉಳಿದುದರಲ್ಲಿ ಕವಡೆ ಕಾಸೂ ಉಳಿಯದಂತೆ ಬ್ರಾಹ್ಮಣ ಪುರೋಹಿತರಿಗೆ ದಾನ ದಕ್ಷಿಣೆಯಾಗಿ ಕೊಟ್ಟು ಬಿಡುತ್ತಾರೆ. ಎಂದರೆ ಯುದ್ಧಗಳಿಂದ ಯಾರಿಗೆ ಪ್ರಯೋಜನವಾಗುತ್ತಿತ್ತು ಎಂಬುದನ್ನು ಕೊಂಚ ಮಟ್ಟಿಗೆ ತಿಳಿದಂತಾಯಿತು.

ಆದರೆ ಹಾಗೆಂದು ಎಲ್ಲವನ್ನೂ ಬ್ರಾಹ್ಮಣರ ತಲೆಗೆ ಕಟ್ಟುವುದು ಎಷ್ಟರ ಮಟ್ಟಿಗೆ ಉಚಿತ? ಎಂದರೆ ಪೂರ್ಣಯ್ಯ ಮೊದಲು ಮೈಸೂರು ಒಡೆಯರಿಗೂ ಆಮೇಲೆ ಹೈದರ್ ಟಿಪ್ಪು ಸುಲ್ತಾನರಿಗೂ ಟಿಪ್ಪು ಇಂಗ್ಲಿಷರೊಂದಿಗೆ ಹೋರಾಡಿ ಸತ್ತ ನಂತರ ಮೈಸೂರು ಒಡೆಯರಿಗೂ ಪುನಃ ದಿವಾನರಾಗಲಿಲ್ಲವೆ? ಎಂದು ಕೇಳಬಹುದು. ಹಾಗೆಯೇ ಇಂದಿನ ಪ್ರಜಾಪ್ರಭುತ್ವ ಸಂದರ್ಭದಲ್ಲಿಯೂ ಪೂರ್ಣಯ್ಯನ ಈ ತಂತ್ರವೇ ತನ್ನ ಮೇಲುಗೈ ಸಾಧಿಸುತ್ತದೆಯಲ್ಲವೇ? ಅಂಕಿ ಅಂಶ ತೆಗೆದು ನೋಡಿದರೆ ಇವತ್ತಿಗೂ ಶೇಕಡ ಎರಡುವರೆಯಷ್ಟು ಇರುವ ಬ್ರಾಹ್ಮಣ ಜಾತಿಯೆ ರಾಜಧರ್ಮದ ಹೆಸರಿನಲ್ಲಿ ದೇಶದ ಆಗುಹೋಗುಗಳನ್ನು ನಿರ್ಧರಿಸುತ್ತಿದೆಯಲ್ಲವೆ? ಇಂದಿನ ವಿದ್ಯಮಾನಗಳನ್ನು ನೋಡಿದರೆ ಅದೇನು ಸುಳ್ಳಲ್ಲ. ಹಿಂದಿನ ಚಕ್ರವರ್ತಿ ಸಾಮ್ರಾಟರಂತೆ ಇವತ್ತಿನ ಭಾರತೀಯ ಸೈನ್ಯ ಪ್ರಧಾನಿಯದು ಎಂದು ಜನ ಒಪ್ಪಿಕೊಳ್ಳುವಂತೆ ಜಾಹೀರು ಮಾಡುತ್ತಿಲ್ಲವೆ? ಇದರಿಂದ ಲಾಭ ಯಾರಿಗೆಂದು ಪುನಃ ಹೇಳಬೇಕಾಗಿಲ್ಲ. ಇಷ್ಟೆಲ್ಲಾ ಹೇಳಿದುದರ ತಾತ್ಪರ್ಯವೆಂದರೆ ಬೆತ್ಲೆಹೀಮ್ ಕದನದ ಹುಡುಗ ತನ್ನ ಅಜ್ಜನಿಗೆ 'ಯುದ್ಧದಿಂದ ಕಡೆಗೆ ಒಳ್ಳೆಯದು ಏನಾದುದು?' ಎಂಬ ಪ್ರಶ್ನೆಗೆ ಕೊಂಚ ಮಟ್ಟಿಗೆ ಉತ್ತರ ದೊರೆತಂತಾಯಿತು. ಜೊತೆಗೆ ಯುದ್ಧಾಸ್ತ್ರಗಳನ್ನು ಸಂಗ್ರಹಿಸಿಟ್ಟುಕೊಂಡಿರುವ ಲಾಭಕೋರ ರಾಷ್ಟ್ರಗಳಿಗೂ ಈಗ ಯುದ್ಧ ಬೇಕಾಗಿದೆ. ರಾಷ್ಟ್ರ ನಾಯಕನ ಪ್ರತಿಷ್ಠೆಗಾಗಿ ಕೈಗಟ್ಟುವ ಯುದ್ಧದಿಂದ ಆ ದೇಶದ ಅಮಾಯಕ ಪ್ರಜೆಗಳಿಗೆ ಶಾಂತಿ ಸಮೃದ್ಧಿ ದೊರೆಯುತ್ತದೆಂಬುದು ಕೇವಲ ಮರೀಚಿಕೆ. ಹಾಗಿದ್ದರೆ ಆಫ್ರಿಕನ್ ಮುಂತಾದ ರಾಷ್ಟ್ರಗಳಲ್ಲಿ ಈಗಲೂ ಅನ್ನಾಹಾರವಿಲ್ಲದೆ ಜನ ಯಾಕೆ ಸಾಯುತ್ತಿದ್ದರು? ಯಾಕೆ ನಮ್ಮ ಗ್ರಾಮೀಣ ಸಮಾಜ ಯುದ್ಧ ಎಂದರೆ ಈಗಲೂ ಭಯ ಭೀತರಾಗುತ್ತಿದ್ದಾರೆ? ಹಾಗಾದರೆ ಯಾರಿಗೆ ಬೇಕೀ ಯುದ್ಧ?

**ಪ್ರೊ॥ ಶಿವರಾಮಯ್ಯ**
ನಂ. ೧೭೨, ಹೊಂಗೆ ಸಾಲು ಮನೆ, ನಾಗರಬಾವಿ ಗ್ರಾಮ, ಐಸೆಕ್ ರೋಡ್, ಬೆಂಗಳೂರು – ೭೨

## 'ಹೊಸತು' ಪ್ರಾಯೋಜಕರಿಗೆ ಹೃತ್ಪೂರ್ವಕ ಧನ್ಯವಾದಗಳು

ನಾವು ಓದುಗರಲ್ಲಿ ಮಾಡಿಕೊಂಡ ವಿಶೇಷ ಮನವಿಗೆ ಸ್ಪಂದಿಸಿ ಆರ್ಥಿಕ ಬೆಂಬಲ ನೀಡುವ ಮೂಲಕ ಹಾಗೂ ಹೆಚ್ಚಿನ ಸಂಖ್ಯೆಯಲ್ಲಿ ಚಂದಾದಾರರನ್ನು ನೋಂದಾಯಿಸುವ / ಪ್ರಾಯೋಜಿಸುವ ಮೂಲಕ ನೆರವಾದ ಕೆಳಕಂಡ ಆತ್ಮೀಯ ಬಂಧುಗಳಿಗೆ 'ಹೊಸತು' ಬಳಗದ ಕೃತಜ್ಞತೆಗಳು.

1. **ಶ್ರೀಮತಿ ನೇಮಿಚಂದ್ರ,** ಬೆಂಗಳೂರು **ರೂ.10,000/–** (ಆರ್ಥಿಕ ಪ್ರಾಯೋಜಕತ್ವ)
2. **ಶ್ರೀಮತಿ ನಾಗರತ್ನ ಉಮೇಶಬಾಬು,** ಬೆಂಗಳೂರು **ರೂ. 5,000/–** (ಆರ್ಥಿಕ ಪ್ರಾಯೋಜಕತ್ವ)
3. **ಶ್ರೀಮತಿ ಸರಸ್ವತಿ ಶಿಕಾರಿಪುರ,** ಬೆಂಗಳೂರು **ರೂ. 5,000/–** (ಆರ್ಥಿಕ ಪ್ರಾಯೋಜಕತ್ವ)
4. **ಶ್ರೀಮತಿ ಹೇಮಲತ ಮಹಿಷಿ,** ಬೆಂಗಳೂರು **ರೂ. 5,000/–** (ಆರ್ಥಿಕ ಪ್ರಾಯೋಜಕತ್ವ)

'ಹೊಸತು' ಓದುಗರು, ಹಿತೈಷಿಗಳು ಮುಂದೆಯೂ ಇದೇ ರೀತಿ ಸಹಕರಿಸಿ ಪತ್ರಿಕೆಯು ಆರ್ಥಿಕವಾಗಿ ಸದೃಢಗೊಳ್ಳಲು ನೆರವಾಗ ಬೇಕೆಂದು ವಿನಮ್ರವಾಗಿ ಕೋರುತ್ತೇವೆ.

**– ಪ್ರಕಾಶಕ**

ಬಹಳ ಉಮೇದಿನಿಂದ ಬರೆಯುತ್ತಿರುವ ಸಣ್ಣ ಕತೆಗಾರ ಟಿ. ಎಸ್. ಗೊರವರ. ಇಲ್ಲಿ ಉದಾಹರಿಸುತ್ತಿರುವ ಸಂಕಲನ ಕುದರಿ ಮಾಸ್ತರನದು. ಈ ಸಂಕಲನವೀಗ ಎರಡನೇ ಮುದ್ರಣ ಕಂಡಿರುವುದರಿಂದ ಇದರ ಗಮ್ಮತ್ತೆ ಏನೆಂದು ತಿಳಿಯುತ್ತದೆ. ಗ್ರಾಮೀಣ ಪರಿಸರದ ವಿಷಯಗಳೇ ಇಲ್ಲಿನ ಕಥೆಗಳು. ಕುರಿಕಾಯೋ ರಂಗನ ಕಥನ ಆರಂಭವಾಗುವುದೇ ಅವನ ವಾಸ್ತವಿಕ ಜಗತ್ತನ್ನು ನೋಡದೆ ಬದುಕಿರುವುದು. ಕುರಿಗಾಹಿಯಾದ ರಂಗನು ಕುರಿ ಬದುಕಿದ್ದಂತೆ ಬದುಕಿದ್ದು ನಂತರದಲ್ಲಿ ಅವನು ಕಾಯಿಲೆ ಬಿದ್ದಾಗ ವೈದ್ಯರನ್ನು ಕಾಣಲೆಂದು ಬಂದು ಊರೊಳಗಿನ ತನ್ನ ಮನೆಯ ಜಾಗ ಗುರುತಿಸಲಾಗದಷ್ಟು ಮಂಕಾಗಿದ್ದ. ಅವನು ಕಾಯಿಲೆಯಿಂದ ಗುಣವಾಗಿ ಊರಿನ ಸುತ್ತಲಿನ ಚಹರೆಯನ್ನು ಏಕಾಂಗಿಯಾಗಿ ನೋಡುತ್ತಾನೆ. ತನ್ನ ಜೊತೆ ಬೆಳೆದ ಗೆಳೆಯ ಗೆಳತಿಯರ ಆಜುಬಾಜು ಕುಟುಂಬದವರ ಗುರುತು ಹಿಡಿಯಲು ಅಣಿಯಾಗುತ್ತಾನೆ. ಹೆಸರೆಲ್ಲ ನೆನಪಿಗೆ ಬಂದು ತಾನೆತ್ತಿಯಾಡಿಸಿದ ಹುಡುಗಿ ಕಂಡು ಅವಳು ರಂಗನ ಗುರುತಿಸಿದಾದಾಗ ಬೆರಗಾಗುತ್ತಾನೆ. ಶಾಲೆಗೆ ಹೋಗುವ ಕಾಲೇಜಿಗೆ ಹೋಗುವ ವಿದ್ಯಾರ್ಥಿಗಳ ಗುಂಪು ಕಂಡು ಆಲೋಚಿಸುವುದನ್ನು ಕಲಿಯುತ್ತಾನೆ. ತನಗೆ ಹರೆಯ ಬಂದಿದ್ದನ್ನು ಕಂಡು ಸಂಕೋಚಗೊಳ್ಳುತ್ತಾನೆ. ಕಥೆಗಾರ ಸಹಜ ಬದುಕನ್ನು ಚಿತ್ರಿಸಿ ಸೈ ಎನಿಸಿಕೊಂಡಿದ್ದಾನೆ. ಪುಸ್ತಕದ ಶೀರ್ಷಿಕೆಯೇ "ಕುದುರಿ ಮಾಸ್ತರ : ಹುಂಬಪ್ಪ ಮಾಸ್ತರ"ನ ಆಲೋಚನಾ ಕ್ರಮವನ್ನು ಕಥೆಗಾರ ಚೆನ್ನಾಗಿ ಬಳಸಿಕೊಂಡಿದ್ದಾನೆ. ಹೊರಸು ಹೆಣಿಸುವ ಕುಸರಿ ಕೆಲಸ ಮಾಡುತ್ತಾನೆ. ಊರಿನಲ್ಲಿ ಹೆರಿಗೆಗೆ ಬರುವ ತಾಯಂದಿರಿಗೆಲ್ಲ ಮಾಸ್ತರನ ಹೊರಸು ಹೆಸರು ಪಡೆಯುತ್ತದೆ. ತಮ್ಮೂರಿಂದ ಪಕ್ಕದೂರು ಕೊಡಗಾನೂರಿನ ಶಾಲೆಗೆ ದಿನವೂ ಹೋಗಿಬರಬೇಕಿತ್ತು. ಐದಾರು ಮೈಲು ಹೋಗಿ ಬರೋದು ಕಷ್ಟವಾಗತೊಡಗಿತು. ಇದೇ ಊರಾಗ ಮನೆಮಾಡ್ರಿ ಅಂತ ಸಹಶಿಕ್ಷಕ ಶಂಕರಪ್ಪಾರ ಹೇಳತಾರ. ಹುಂಬಪ್ಪ ಮಾಸ್ತರಗೂ ಮನೆಯ ಜವಾಬ್ದಾರಿಗಳು ಇದ್ದುದರಿಂದ ಮನಿ ಮಾಡೋದು ಸಂಕಟದ ವಿಷಯವೇ ಆಗಿತ್ತು. ಆಲೋಚನೆ ಹೆಚ್ಚಾಗಿ ಒಂದು ಕುದರಿ ತಗೊಂಡ್ರ ಹ್ಯಾಂಗ ಅನಿಸ್ತು. ಅನಸದೇನು ತಗೊಂಡಬಿಟ್ಟ. ಕುರಿಗಾಹಿ ಈರಪ್ಪನದು ಕುದರಿ ಬೇಸಂತ ಕೇಳಿದ್ದಕ ನೋಡಿ ಅದನ್ನು ತಗಂಡ್ರಾತಂತ ಮಾಸ್ತರ ವಿಚಾರ ಮಾಡಿದ. ಮಾಸ್ತರ ಹೆಂಡ್ತಿ ಭದ್ರವ್ವ ಗಂಡ ಕುದರಿ ತಂದದ್ದ ನೋಡಿ ಖುಷಿ ಆಗಿ, ಹೊರ ಬಂದಾಕೇ ಅದಕ ಪೂಜೆ ಮಾಡಿ ದಪ್ಪರೊಟ್ಟಿ ಮಾಡಿ ಅದರ ಬಾಯಾಗ ಇಟ್ಟಳು. ದಿನಾಲೂ ಹುಂಬಪ್ಪ ಮಾಸ್ತರ ಶಾಲೆಗೆ ಹೋಗುದು ಬರೋದು ಸರಳಾತು. ಮಾಸ್ತರದು ಮಕ್ಕಳ ಮ್ಯಾಲ ಕಾಳಜಿ. ಬಡಹುಡುಗರಂದ್ರ ಅನುಕಂಪ ಇತ್ತು. ಮಾಸ್ತರ ಮಕ್ಕಳು ದೊಡ್ಡವರಾದ ಮ್ಯಾಲೆ, ಕಾಲೇಜಿಗೆ ಹೋಗಹತ್ತಿದವು. ಅಪ್ಪನ ಕುದರಿ ಸವಾರಿ, ಹೊಲ್ದಾಗ ಕೆಲ್ಸ ಮಾಡೋದು. ದಾರೀಲಿ ಸಗಣಿ ಎತ್ತಿ, ಹೊಲಕ ಗೊಬ್ಬರ ಹಾಕೋದು ಮಕ್ಕಳಿಗೆ ಇಷ್ಟ ಆಗಲಿಲ್ಲ. ಮಗ ಎದೆ ಉದ್ದ ಬೆಳೆದಿದ್ದ ತನಗ ಅವಮಾನ ಆಗುತ್ತಂತ ಮನ್ಯಾಗ ಜಗಳ ತಗದ. ಅಪ್ಪನ ಜೊತೆ ಮಾತಾಡದ ಬಿಟ್ಟ. ಮಗನ ಕಕ್ಕುಲಾತಿಗೆ ಸೋತ ಮಾಸ್ತರ, ಮನಸು ಇರದಿದ್ರು ಕುದರಿ ಮಾರತಾನ. ಲೋನಾ ತಗಂಡು ಮಾಸ್ತರಕಿ ಮಾಡತಾನ. ಕುದರಿ ನೆನಪಾಗಿ ಲೋಪ ಆಕಿತ್ತು. ಮಕ್ಕಳ ಮುಂದ ಸಣ್ಣಾವ ಆಗಬಾರದಂತ ಸುಧಾರಣೆಗೆ ಲಕ್ಷ್ಯಕೊಟ್ಟ.

'ಸೂಲಗಿತ್ತಿ' ಕಥೆ ಪರಿಣಾಮಕರವಾಗಿ ಬಂದಿದೆ. ಬೂಬಮ್ಮಳ ಚಾಲೂಕಿತನ, ಬಡತನದಲ್ಲಿ ಆಕೆಗೆ ಒಲಿದ ವಿದ್ಯೆ. ಇಡೀ ಊರಿನ ಬಾಣೆತನಕ ಹೆಸರು ಮಾಡ್ಯೆತಿ, ತಾನು ಸಾಕಿದ ಎಮ್ಮೆ ಕಾಯೋಕ ಹೋದಾಗ, ಮಳೆ ಹತ್ತಿ ಮೈ ಹಸಿಯಾಗಿ ಬಟ್ಟೆ ತೋದ ತಪ್ಪಡಿಯಾಗಿ, ಗಿಡಮರಕನಿಂತು ಸೀರಿ ಹಿಂಡತಾಳ. ಜಂಬರ ಬಿಚ್ಚಿ ಹಾಕೇನಾಕ ನಾಚಿಗೆ ಅನಿಸ್ತು. ಯಾರು ಕಾಣದ್ದನ್ನು ಗಮನಿಸಿ ಅದನ ಹಾಕ್ಯಾಂತಾಳ. ಜಿಟಿಜಿಟಿ ಹಿಡಿದಿದ್ದ ಮಳೆ ವರಪು ಆಗಲಿಲ್ಲ. ಊರಕಡೆಯಿಂದ ಕುರುಬರ ನಿಂಗ್ಯಾ ಬೂಬಮ್ಮನ ಹುಡುಕಿ ಬರತಾನ. ತನ್ನ ಅಕ್ಕ ಬ್ಯಾನಿ ತಿನ್ನ ಸುದ್ದಿ ಹೇಳ್ಯಾನ. ಲೋ ನಿಂಗ್ಯಾ, ಎಮ್ಮೆ ತಟಗೂ ಮೇದಿಲ್ಲ. ಅದು ಹಾಲರ ಹ್ಯಾಂಗ ಹಿಂಡುತ್ತ, ಇನ್ನೂ ತಟಗ ಮೇಯಿಸಿಕೊಂಡು ಬರ್ತೀನಿ ಅಂತಾಳ. ತನ್ನ ಅಕ್ಕನ ಬ್ಯಾನಿ ನೆನದು ಬೇ ಯಕ್ಕಾ, ಮುಗಿಲು ಬಾಳ ಆಗ್ಯೆತಿ. ನಾನ ಅದೀನಿ. ನನ್ನ ಬಣಿವ್ಯಾಗ ಜೋಳದ ಮೇವು ಶೇಂಗಾ ಹೊಟ್ಟು ಐತಿ. ನಾನು ತಂದಕೊಡತೀನಿ ನಡಿ ಅಂತ ಕರಕೊಂಡ ಹೋಕಾನ. ಬೆಳಗಿಂದ ಏಕ ಹಿಡಿದಿದ್ದ ಮಳೆ ಕಿಚಿಕಿಚಿ ರಜ್ಜಾಗಿತ್ತು. ಬೂಬವ್ವ ನಿಂಗ್ಯಾನ ಮನೆಗೆ ಬಂದಾಕಿ, ಅಕ್ಕ ಕುಸಮಾಳ ನೋಡಿ ನಿನ್ಗ ಏನು ಆಗೋದಿಲ್ಲ. ಅರಾಮ ಹಡಿತೀದಿ ನೀನು ಅಂದಾಗ ಆಕೆಗೆ ಮತ್ತು ಅವರವ್ವನಿಗೆ ಸಮಾಧಾನ ಆಕೈತಿ. ಹಾಸ್ಯ ಬೆರಸಿ ಮಾತಾಡಕೋತ ಹೆದರಿಕಿ ದೂರ ಮಾಡತಾಳ. ಖಾಸಗಿ ವೈದ್ಯನ ಕರಿಸಿ ಇಂಜಕ್ಷನ್ ಕೊಡಿಸ್ಯಾಳ. ಬ್ಯಾನಿ ಜೋರಾಗಿ ಹೆರಿಗೆ ಹಗೂರ ಆತು. ಬಾಣತೀಗೆ ಕೂಸಿಗೆ ಎರದು ಮನೀಗೆ ಹೋಗಾಕ ರೆಡಿ ಆಕಾಳ. ಬೂಬಕ್ಕಗ ಸೀರಿ, ಕಣ ಅಕ್ಕಿಕೊಟ್ಟ ಕಳಸತಾಳ. ಮನೀಗಿ ಬಂದಾಕೆ ತನ್ನ ಮನೆ ಕೆಲಸ ಸುರು ಮಾಡ್ತಾಳ. ಅಕ್ಕಿ ಹಸನ ಮಾಡ್ತಾ ಕುಂತಿರತಾಳ. ಪ್ರಭಾವತಿ ಅವ್ವರ ಬ್ಯಾನಿ ತಿನ್ನಾಕತ್ಯರಂತ ಲಗೂನ ಬರಾಕ ಹೇಳ್ಯಾರಂತ ಪಿಂಜಾರ ಹುಡುಗ ಹೇಳಿ ಹೊಲಕ ಹೋಕಾನ. ಅವಸರವಸರವಾಗಿ ಕುಲಕರ್ಣಿ ಮನ್ಯಾಗ ಹೋಕಾಳ. ಪಡಸಾಲಿ ಕೋಣೆಯೊಳಗ ಎಲ್ಲ ತಯಾರಿ ಮಾಡೀರ್ತರ. ಬೂಬಮ್ಮ ಹಗೂರಕ ಪ್ರಭಾವತಿಗೆ ಹೆರಿಗೆ ಮಾಡಸ್ತಾಳ. ಗಂಡು ಆಕೈತಿ. ಕೂಸಿಗೆ ಹಾಲ ಕುಡಸಕೇಳಿ ಮನೆಕಡೆ ಬರ್ತಾಳ. ಏಟತ್ತಾದರೂ ಕೂಸು ಅಳು ನಿಲ್ಲಿಸಲಿಲ್ಲ. ಪ್ರಭಾವತಿ ಅಮ್ಮನವರ ಮೊಲೆಯಲಿ ಹಾಲು ಬರ್ತಾಯಿಲ್ಲ. ಪರಿಹಾರಕ್ಕಾಗಿ ಬೂಬಮ್ಮನ ಕರಸ್ತಾರ. ತಪ್ಪು ತಿಳಕಲ್ಲಂದ್ರ ನನ್ನ ಹಾಲ ಕುಡಸ್ತೀನ್ರಿ. ಕೂಸು ಅತ್ತು ಅತ್ತೂ ಬಾಯಾರೇತಿ ಸ್ವಲ್ಪ ಹೊತ್ತು ಬಿಟ್ರ ಪರಿಸ್ಥಿತಿ ಏರುಪೇರಾದೀತೆಂದು ಎಚ್ಚರಿಸಿದಾಗ, ಗಿರೀಶರಾವ್ ಒಪ್ಪತಾರ. ಕೂಸು ಹಾಲು ಕುಡಿದು ಸುಮ್ಮನಾತು. ಬೂಬವ್ವ ಹೆರಿಗೆ ರಗಡ ಮಾಡಿಸಿದಾಕಿ. ಮಾನವೀಯತೆ ಮೆರದಾಕಿ.

ಊರಪರಿವರ್ತನೆಗೆ ಪ್ರಯತ್ನ ಪಡುವ ರಮೇಶ, ಊರಗೌಡಕಿ ಗಮತ್ತನ ಎದುರಿಸುವ 'ಇದಿಮಾಯಿ ಕತ್ತಲು' ಕತೆ, ಚೌರಿಮಾರೋ ದುಗ್ಗಿಕತೆ, ಕ್ಷೌರ ಅಂಗಡಿಯ ಅವತಾರ, ದುಃಖದ ಬಿಕ್ಕುಗಳು, ಸೊಂಪಾದ ಮಳೆರಾಯ, ಕಾಡುಕುಸುಮ ಧ್ವನಿ ಅಡಗಿರುವ ಕಥೆಗಳಾಗಿವೆ. ಟಿ. ಎಸ್. ಗೊರವರ ಕಥಾಶೈಲಿ ಮಾಗುತ್ತ ನಡೆದಿದೆ. ಅಪ್ಪಟ ಕಥೆಗಾರನ ಎಲ್ಲ ಲಕ್ಷಣಗಳಿವೆ.

**ಅಕ್ಬರ್ ಸಿ. ಕಾಲಿಮಿರ್ಚಿ,** ಮಂಜುನಾಥ ಬಡಾವಣೆ ಅಂಚೆ : ಭಾಗ್ಯನಗರ – ೫೮೩೨೩೮, ತಾಲೂಕು–ಜಿಲ್ಲೆ, ಕೊಪ್ಪಳ




ಲೇಖಕ : **ಟಿ. ಎಸ್. ಗೊರವರ**

ಪುಟಗಳು : ೧೪+೭೪ ಬೆಲೆ : **ರೂ. ೧೦೦**

ಪ್ರಕಾಶಕರು :

ಸಂಗಾಡ ಪುಸ್ತಕ, ಅಂಚೆ ರಾಜೂರು – ೫೮೨೧೧೪

ತಾಲ್ಲೂಕು ಗಜೇಂದ್ರಗಢ, ಜಿಲ್ಲೆ ಗದಗ




# ಕುದರಿ ಮಾಸ್ತರನ ಜಾಡು ಹಿಡಿದು...

# ದುಡಿಯುವ ಜನರ ಹೆಜ್ಜೆಗಳು

ವಿಜಯಭಾಸ್ಕರ್ ಡಿ. ಎ.

೮ ಗಂಟೆಗಳ ಕೆಲಸದ ಅವಧಿಯನ್ನು ಒತ್ತಾಯಿಸಿ ಆಳುವ ವರ್ಗದ ಗುಂಡಿಗೆ ಎದೆಯೊಡ್ಡಿ, ನೇಣಿಗೆ ಕೊರಳೊಡ್ಡಿ ಹೋರಾಡಿ, ಕಾರ್ಮಿಕರ ವರ್ಗಜಾಗೃತಿಯ ಕಿಚ್ಚನ್ನು ಕೆರಳಿಸಿ, ಜಗತ್ತಿನಾದ್ಯಂತ ಬಂಡವಾಳಶಾಹಿ ವ್ಯವಸ್ಥೆಯ ವಿರುದ್ಧ ಶೋಷಿತ ಜನರ ಆಕ್ರೋಶದ ಅಭಿವ್ಯಕ್ತಿ ಮೇ ದಿನಾಚರಣೆಯಾಗಿದೆ. ಕಳೆದ ೧೩೩ ವರ್ಷಗಳಿಂದ ನಿರಂತರವಾಗಿ ದುಡಿಯುವ ಜನರ ಹೋರಾಟಕ್ಕೆ ಸ್ಫೂರ್ತಿ ನೀಡುತ್ತಾ ವರ್ಗ ಸಂಘರ್ಷದ ಚರಿತ್ರೆಯಲ್ಲಿ ಹಲವು ಹತ್ತು ಮೈಲಿಗಲ್ಲನ್ನ ನೆಟ್ಟಿರುವ ಮೇ ದಿನಾಚರಣೆ ಹಿಂದೆಂದಿಗಿಂತಲೂ ಇಂದು ಹೆಚ್ಚು ಪ್ರಸ್ತುತವಾಗಿದೆ. ಮೇ ದಿನಾಚರಣೆ ಹುತಾತ್ಮರಿಗೆ ಶ್ರದ್ಧಾಂಜಲಿಯಂದು ಸಲ್ಲಿಸಿ ಅವರ ತ್ಯಾಗ ಬಲಿದಾನವನ್ನು ಸ್ಮರಿಸಿಕೊಳ್ಳುವ ವಾರ್ಷಿಕ ವಿಧಿಯಾಗಿ ಉಳಿಯದೆ, ದುಡಿಯುವ ವರ್ಗದ ಹೋರಾಟದ ಮೌಲ್ಯಮಾಪನ ದಿನವಾಗಿಯೂ ಮಹತ್ವ ಪಡೆದಿದೆ. ಹಲವು ಬಾರಿ ನಾಯಕರ ಭಾಷಣಗಳಿಂದ ಏಕತಾನವೆನಿಸಿದರೂ ವರ್ಷದಿಂದ ವರ್ಷಕ್ಕೆ ಮೇ ದಿನಾಚರಣೆ ಹೊಸ ಉತ್ಸಾಹದಿಂದಲೇ ಆಚರಿಸಲ್ಪಟ್ಟು ಕಾರ್ಮಿಕರಿಗೆ ಸ್ಫೂರ್ತಿ ನೀಡುತ್ತಾ ಬಂದಿದೆ.

**ಮೇ ದಿನದ ಹುತಾತ್ಮರು**

೧೮೮೬ರ ಮೇ ಒಂದರಂದು ೮ ಗಂಟೆಗೆ ಒತ್ತಾಯಿಸಿ ನಡೆದ ಕಾರ್ಮಿಕರ ಪ್ರತಿಭಟನಾ ರ್‍ಯಾಲಿಯಲ್ಲಿ ಸುಮಾರು ೩,೫೦,೦೦೦ ಕಾರ್ಮಿಕರು ಭಾಗವಹಿಸಿದ್ದರು. ಆ ಸಂದರ್ಭದಲ್ಲಿ ಪೊಲೀಸರ ಗುಂಡಿಗೆ ಪ್ರತಿಭಟನಾ ನಿರತ ಆರು ಜನ ಕಾರ್ಮಿಕರು ಬಲಿಯಾಗಿ ಕಾರ್ಮಿಕರ ಆಕ್ರೋಶ ತೀವ್ರಗೊಂಡಿತು. ಪೊಲೀಸರ ಗೋಲೀಬಾರನ್ನು ಪ್ರತಿಭಟಿಸಿ ಮೇ ೪ರಂದು ನಡೆದ ಪ್ರತಿಭಟನಾ ರ್‍ಯಾಲಿಯಲ್ಲಿ ಕೊನೆ ಹಂತದಲ್ಲಿ ಪೊಲೀಸರ ಮೇಲೆ ಕಿಡಿಗೇಡಿಯೊಬ್ಬ ಬಾಂಬ್ ಎಸದ ಕಾರಣ ಒಬ್ಬ ಪೊಲೀಸ್ ಮೃತಪಟ್ಟ. ಆಗ ೮ ಜನ ಕಾರ್ಮಿಕ ನಾಯಕರನ್ನು ಬಂಧಿಸಿ ವಿಚಾರಣೆಗೊಳಪಡಿಸಲಾಯಿತು. ಆಳುವ ವರ್ಗದ ನ್ಯಾಯಾಲಯ ನಾಲ್ಕು ಜನರಿಗೆ (ಪಾರ್ಸನ್ ಲಿಂಗ್ಗ್ ಸ್ಪೆಸ್ ಫಿಷರ್ ಮತ್ತು ಎಂಗೇಲ್‌ರಿಗೆ ಗಲ್ಲು ಶಿಕ್ಷೆ ವಿಧಿಸಿ ಮೂವರಿಗೆ ದೀರ್ಘಾವಧಿ ಸೆರೆವಾಸ (ನೀಬ್, ಶ್ವಾಬ್ ಮತ್ತು ಫೀಲ್ಡನ್) ವಿಧಿಸಲಾಯಿತು. ಪಾರ್ಸನ್ ಲಿಂಗ್ಗ್ ಎಂಬಾತ ಗಲ್ಲು ಶಿಕ್ಷೆಯ ಹಿಂದಿನ ದಿನ ತನ್ನ ಕೋಣೆಯಲ್ಲಿ ನಿಗೂಢರೀತಿಯಲ್ಲಿ ಮೃತ ಪಟ್ಟಿದ್ದ. ಅದನ್ನು ಪೊಲೀಸರು ಆತ್ಮಹತ್ಯೆ ಎಂದು ಘೋಷಿಸಿದರು. ಮೇ ದಿನದ ಹುತಾತ್ಮರ ಹೋರಾಟ ವ್ಯರ್ಥವಾಗಲಿಲ್ಲ. ಎಡಚಿಂತನೆಯ ಪ್ರಭಾವವಿದ್ದ ಆ ಕಾರ್ಮಿಕ ಸಂಘಟನೆಗಳ ಹೋರಾಟದ ಪರಿಣಾಮ ಚಿಕಾಗೊ ನಗರದ ಕಾರ್ಮಿಕರ ಅರ್ಧದಷ್ಟು ಸಂಖ್ಯೆಯ ಕಾರ್ಮಿಕರಿಗೆ ಎಂಟು ಗಂಟೆಗಳ ಕೆಲಸದ ಅವಧಿ ಬೇಡಿಕೆ ಈಡೇರಿತು. ೧೮೮೯ರಲ್ಲಿ ನಡೆದ ಪ್ಯಾರೀಸ್ ಕಾರ್ಮಿಕರ ಮಹಾಧಿವೇಶನದಲ್ಲಿ ಮೇ ೧ಅನ್ನು ಅಂತರರಾಷ್ಟ್ರೀಯ ಕಾರ್ಮಿಕ ದಿನಾಚರಣೆಯಾಗಿ ಆಚರಿಸಲು ತೀರ್ಮಾನಿಸಲಾಯಿತು. ನಮ್ಮ ದೇಶದಲ್ಲಿ ೧೯೨೩ರ ಮೇ ಒಂದರಂದು ಚೆನ್ನೈನ ಸಮುದ್ರ ದಂಡೆಯಲ್ಲಿ ಕಾಂ. ಸಿಂಗಾರವೇಲು ಚೆಟ್ಟಿಯಾರ್‌ರವರ ನೇತೃತ್ವದಲ್ಲಿ ಮೊಟ್ಟ ಮೊದಲ ಮೇ ದಿನಾಚರಣೆ ಆಚರಿಸಲಾಯಿತು.

**ಫ್ಯಾಸಿಸ್ಟ್ ವಿರೋಧಿ ಹೋರಾಟ ಹಾಗೂ ಮೇ ದಿನಾಚರಣೆ**

ಎರಡನೇ ಮಹಾಯುದ್ಧದ ಅಂತಿಮ ಹಂತದಲ್ಲಿ ಹಿಟ್ಲರನ ನಾಜಿ ಸೈನ್ಯ ೧೯೪೫ರ ಮೇ ದಿನಾಚರಣೆ ದಿನ ಮಾಸ್ಕೋ ನಗರದ ಕೆಂಪು ಚೌಕದಲ್ಲಿ ಕೆಂಬಾವುಟ ಹಾರುವುದಿಲ್ಲ ಎಂದು ಸವಾಲೆಸೆದ ಸಂದರ್ಭದಲ್ಲಿ ಸೋವಿಯತ್ ಯೂನಿಯನ್‌ನ ಕಾರ್ಮಿಕ ವರ್ಗ ಹಾಗೂ ಕೆಂಪು ಸೈನ್ಯ ಅದನ್ನು ಧೀರೋದಾತ್ತವಾಗಿ ಎದುರಿಸಿ ಕೆಂಪು ಚೌಕದಲ್ಲಿ ಕೆಂಬಾವುಟ ಹಾರಿಸಿ ಮೇ ದಿನಾಚರಣೆಯನ್ನು ಆಚರಿಸಿತು. ಮಾತ್ರವಲ್ಲದೆ ದುಡಿಯುವ ಜನರ ಪ್ರತಿರೋಧ ಎದುರಿಸಲಾಗದೆ,

೮ ಗಂಟೆಗಳ ಕೆಲಸದ ಅವಧಿಯನ್ನು ಒತ್ತಾಯಿಸಿ ಆಳುವ ವರ್ಗದ ಗುಂಡಿಗೆ ಎದೆಯೊಡ್ಡಿ, ನೇಣಿಗೆ ಕೊರಳೊಡ್ಡಿ ಹೋರಾಡಿ, ಕಾರ್ಮಿಕರ ವರ್ಗಜಾಗೃತಿಯ ಕಿಚ್ಚನ್ನು ಕೆರಳಿಸಿ, ಜಗತ್ತಿನಾದ್ಯಂತ ಬಂಡವಾಳಶಾಹಿ ವ್ಯವಸ್ಥೆಯ ವಿರುದ್ಧ ಶೋಷಿತ ಜನರ ಆಕ್ರೋಶದ ಅಭಿವ್ಯಕ್ತಿ ಮೇ ದಿನಾಚರಣೆಯಾಗಿದೆ. ಕಳೆದ ೧೩೩ ವರ್ಷಗಳಿಂದ ನಿರಂತರವಾಗಿ ದುಡಿಯುವ ಜನರ ಹೋರಾಟಕ್ಕೆ ಸ್ಫೂರ್ತಿ ನೀಡುತ್ತಾ ವರ್ಗ ಸಂಘರ್ಷದ ಚರಿತ್ರೆಯಲ್ಲಿ ಹಲವು ಹತ್ತು ಮೈಲಿಗಲ್ಲನ್ನ ನೆಟ್ಟಿರುವ ಮೇ ದಿನಾಚರಣೆ ಹಿಂದೆಂದಿಗಿಂತಲೂ ಇಂದು ಹೆಚ್ಚು ಪ್ರಸ್ತುತವಾಗಿದೆ. ಮೇ ದಿನಾಚರಣೆಯಂದು ಹುತಾತ್ಮರಿಗೆ ಶ್ರದ್ಧಾಂಜಲಿ ಸಲ್ಲಿಸಿ ಅವರ ತ್ಯಾಗ ಬಲಿದಾನವನ್ನು ಸ್ಮರಿಸಿಕೊಳ್ಳುವ ವಾರ್ಷಿಕ ವಿಧಿಯಾಗಿ ಉಳಿಯದೆ, ದುಡಿಯುವ ವರ್ಗದ ಹೋರಾಟದ ಮೌಲ್ಯಮಾಪನ ದಿನವಾಗಿಯೂ ಮಹತ್ವ ಪಡೆದಿದೆ.

ಜರ್ಮನ್ ಸೈನ್ಯ ಹಿಮ್ಮೆಟ್ಟಿ ದಿನಾಂಕ ೯ ಮೇ, ೧೯೪೫ರಂದು ಕೆಂಪು ಸೈನ್ಯ ರೈಶ್ಸ್‌ಟಾಗ್ (ಜರ್ಮನಿಯ ಸಂಸತ್ತು) ಕಟ್ಟಡದ ಮೇಲೆ ಕೆಂಬಾವುಟವನ್ನು ಹಾರಿಸಿತು. ದಿನಾಂಕ ಏಪ್ರಿಲ್ ೩೦, ೧೯೪೫ ಮೇ ದಿನಾಚರಣೆಯ ಮುನ್ನಾ ದಿನವೇ ಹಿಟ್ಲರ್ ಆತ್ಮಹತ್ಯೆಗೆ ಮೊರೆ ಹೋಗ ಬೇಕಾಯಿತು. ಇವೆಲ್ಲವೂ ಈಗ ರೋಚಕ ಇತಿಹಾಸ. ಫ್ಯಾಸಿಸಂ ವಿರುದ್ಧದ ಹೋರಾಟಕ್ಕೆ ರಾಜಕೀಯ ಹಾಗೂ ಸೈದ್ಧಾಂತಿಕ ಸ್ಪಷ್ಟತೆ ಹಾಗೂ ಬದ್ಧತೆ ಇರುವುದು ಕಾರ್ಮಿಕ ವರ್ಗಕ್ಕೆ ಮಾತ್ರ ಎನ್ನುವುದೇ ಆ ರೋಚಕ ಇತಿಹಾಸದ ಪುಟಗಳ ಸ್ಪಷ್ಟವಾದ ಹಾಗೂ ಇಂದಿಗೂ ಪ್ರಸ್ತುತವಾಗಿರುವ ಪಾಠ.

**ಕಾರ್ಮಿಕ ವರ್ಗ ಮತ್ತು ಹೊಸ ಆರ್ಥಿಕ ನೀತಿ**

೧೯೯೪ ಏಪ್ರಿಲ್ ೧ರಂದು ಅಂದಿನ ಪ್ರಧಾನಮಂತ್ರಿಗಳಾಗಿದ್ದ ಪಿ. ವಿ. ನರಸಿಂಹರಾವ್ ಅವರು ಪಾರ್ಲಿಮೆಂಟಿನ ಗಮನಕ್ಕೂ ತಾರದೆ ಆರ್ಥಿಕ ನೀತಿಯ ಹೆಸರಿನಲ್ಲಿ ದೇಶದ ದಿವಾಳಿತನಕ್ಕೆ ನಾಂದಿ ಹಾಡಿದರು. ಆ ಸಂದರ್ಭದಲ್ಲಿ ಕಾರ್ಮಿಕ ಚಳುವಳಿಯ ನಾಯಕರು ಸ್ಪಷ್ಟವಾಗಿ ಇದೊಂದು ದೇಶ ವಿರೋಧಿ ನೀತಿ, ರೈತರು ಹಾಗೂ ಕಾರ್ಮಿಕ ವರ್ಗವೆರಡೂ ಸಹ ಈ ನೀತಿಗೆ ಬಲಿಯಾಗಲಿದೆ ಎಂದು ಎಚ್ಚರಿಸಿದರು. ಆ ಸಂದರ್ಭದಲ್ಲಿ ಕೇಂದ್ರ ಕೃಷಿ ಸಚಿವರಾಗಿದ್ದ ಶ್ರೀ ಬಲರಾಂ ಜಾಖಡ್‌ರವರು ರೈತ ಬೆಳೆದ ಬೆಳೆಗೆ ವಿದೇಶದ ಮಾರುಕಟ್ಟೆಯ ಪ್ರವೇಶದ ಮೂಲಕ ಅವರ ಬದುಕಿಗೊಂದು ದಾರಿತೋರುವುದು ಹೊಸ ಆರ್ಥಿಕ ನೀತಿಗಳ ಉದ್ದೇಶವೆಂದೂ, ಆದ್ದರಿಂದ ಹೊಸ ಆರ್ಥಿಕ ನೀತಿಗಳನ್ನು ವಿರೋಧಿಸುವವರು ದೇಶದ್ರೋಹಿಗಳೆಂದೂ ಅಪ್ಪಣೆ ಕೊಡಿಸಿದರು. ನಂತರದ ದಿನಗಳಲ್ಲಿ ಕೃಷಿ ಬಿಕ್ಕಟ್ಟಿನ ಪರಿಣಾಮ ಲಕ್ಷಾಂತರ ರೈತರ ಆತ್ಮಹತ್ಯೆಯ ಹೆಸರಿನ ಕಗ್ಗೊಲೆಗೆ ಸಾಕ್ಷಿಯಾದವು. ಅದೇ ಕಾಲಕ್ಕೆ ಕಾರ್ಮಿಕ ಚಳುವಳಿಗಳು ಹಲವು ನ್ಯೂನತೆಯ ನಡುವೆಯೂ ನಿರಂತರವಾಗಿ ಹೋರಾಡುತ್ತ ಬೆಳೆದಿವೆ. ಪ್ರಾರಂಭದ ದಿನಗಳಲ್ಲಿ ಕೇವಲ ಕೆಂಬಾವುಟದ ಕಾರ್ಮಿಕ ಸಂಘಟನೆಗಳು ಹೋರಾಡುತ್ತಿದ್ದವು. ಆಗ ಬಿ.ಎಂ.ಎಸ್., ನಂತರ ಬಲಪಂಥೀಯ ಸಂಘಟನೆ ಹಾಗೂ ಇಂಟಕ್, ನಂತರ ಮಧ್ಯಮಾರ್ಗೀಯ ಸಂಘಟನೆಗಳು ಕಾರ್ಮಿಕರ ರಾಷ್ಟ್ರೀಯ ಹೋರಾಟಗಳನ್ನು ರಾಜಕೀಯ ಪ್ರೇರಿತ ಎಂದು ಮೂದಲಿಸುತ್ತಿದ್ದವು. ನಂತರದ ದಿನಗಳಲ್ಲಿ ಅವೇ ಸಂಘಟನೆಗಳು ಜಂಟಿ ಹೋರಾಟಗಳಲ್ಲಿ ಭಾಗವಹಿಸಿ, ಇಂದು ರಾಷ್ಟ್ರಮಟ್ಟದಲ್ಲಿ ಕಾರ್ಮಿಕ ಚಳುವಳಿಯ ಏಕೀಕರಣದ ಪ್ರಕ್ರಿಯೆ ಗಟ್ಟಿಗೊಳ್ಳುತ್ತಿರುವುದನ್ನು ನಾವು ನೋಡುತ್ತಿದ್ದೇವೆ.

೧೯೯೧ರಿಂದ ನವ ಉದಾರೀಕರಣದ ವಿರುದ್ಧ ನಿರಂತರವಾಗಿ ಸೆಣಸಾಡುತ್ತಿರುವ ಕಾರ್ಮಿಕ ವರ್ಗ ನಮ್ಮ ದೇಶದ ಸಂದರ್ಭದಲ್ಲಿ ಕಳೆದ ಮೂರು ದಶಕಗಳಲ್ಲಿ ೨೦ಕ್ಕೂ ಹೆಚ್ಚು ದಿನಗಳು ರಾಷ್ಟ್ರೀಯ ಮುಷ್ಕರ ನಡೆಸಿದೆ. ಕೇಂದ್ರದಲ್ಲಿ ಕಾಂಗ್ರೆಸ್, ಬಿಜೆಪಿ ಅಥವಾ ತೃತೀಯ ರಂಗದ ಸರ್ಕಾರವೇ ಇರಲಿ, ಕಾರ್ಮಿಕ ಸಂಘಟನೆಗಳ ಹೋರಾಟ ಮಾತ್ರ ಇಲ್ಲದ ವರ್ಷಗಳೇ ಇಲ್ಲ. ೨೦೧೩ರಲ್ಲಿ ಹಾಗೂ ೨೦೧೯ರಲ್ಲಿ ೨ ದಿನಗಳ ರಾಷ್ಟ್ರೀಯ ಮುಷ್ಕರ ನಡೆದಿದೆ ವರ್ಷದಿಂದ ವರ್ಷಕ್ಕೆ ಮುಷ್ಕರದಲ್ಲಿ ಭಾಗವಹಿಸುವ ಕಾರ್ಮಿಕರ ಸಂಖ್ಯೆ ಹೆಚ್ಚಾಗುತ್ತಿದೆ. ಇತ್ತೀಚೆಗೆ ನಡೆದ (ಜನವರಿ ೮ ಮತ್ತು ೯ ೨೦೧೯) ರಾಷ್ಟ್ರೀಯ ಮುಷ್ಕರದಲ್ಲಿ ಸುಮಾರು ೨೦ ಕೋಟಿಗೂ ಅಧಿಕ ಸಂಖ್ಯೆಯ ಕಾರ್ಮಿಕರು ಭಾಗವಹಿಸಿದ್ದಾರೆಂದು ಅಂದಾಜಿಸಲಾಗಿದೆ. ಆದರೆ ವಿಷಾದನೀಯ ಸಂಗತಿ ಎಂದರೆ ಚುನಾವಣೆಗಳಲ್ಲಿ ಇಷ್ಟು ದೊಡ್ಡ ಸಂಖ್ಯೆಯ ದುಡಿಯುವ ಜನರು ರಾಜಕೀಯವಾಗಿ ಪ್ರವರ್ತಿಸದ ಕಾರಣ, ಆಳುವ ಸರ್ಕಾರಗಳು ಯಾವುದೇ ಇರಲಿ ಕಾರ್ಮಿಕ ವರ್ಗದ ಬಗ್ಗೆ ಅದರ ನೀತಿಗಳಲ್ಲಿ ಗಣನೀಯ ವ್ಯತ್ಯಾಸ ಕಂಡುಬರುವುದಿಲ್ಲ. ಚುನಾವಣೆಗಳಲ್ಲಿ ವರ್ಗ ಶತ್ರುಗಳನ್ನು ಆಯ್ಕೆಮಾಡಿ ಮುಂದಿನ ಚುನಾವಣೆಯವರೆಗೂ ಅವರಿಂದ ದಮನಕ್ಕೊಳಗಾಗುವುದು, ಅಧಿಕಾರಾರೂಢ ವರ್ಗ ಶತ್ರುಗಳ ಕಾರ್ಮಿಕ ವಿರೋಧಿ ನೀತಿಗಳ ವಿರುದ್ಧ ಪ್ರತಿಭಟಿಸುತ್ತಲೇ ಇರುವುದು ದುಡಿಯುವ ವರ್ಗದ ಹಣೆಬರಹವಾಗಿದೆ. ದುಡಿಯುವ ಜನರನ್ನು ಕೇವಲ ಆರ್ಥಿಕ ಬೇಡಿಕೆಗಳಿಗೆ ನಡೆಯುವ ಹೋರಾಟಗಳಿಗೆ ಸೀಮಿತಗೊಳಿಸಿದ ದುಷ್ಪರಿಣಾಮ ಇದು ಎನ್ನುವುದರಲ್ಲಿ ಎರಡು ಮಾತಿಲ್ಲ. ಇಷ್ಟು ದೊಡ್ಡ ಸಂಖ್ಯೆಯ ಜನ ಸಮೂಹ ರಾಜಕೀಯವಾಗಿ ಜಾಗೃತಗೊಂಡರೆ ಬಂಡವಾಳಶಾಹಿ ವ್ಯವಸ್ಥೆಗೆ ಉಳಿಗಾಲವಿಲ್ಲವೆನ್ನುವ ಚಾರಿತ್ರಿಕ ಸತ್ಯ ಶೋಷಿತರಿಗಿಂತ ಶೋಷಕರೇ ಹೆಚ್ಚಾಗಿ ಅರಿತಿದ್ದಾರೆ. ಇದರಿಂದಲೇ ಜಾತಿ, ಭಾಷೆ ಪ್ರಾದೇಶಿಕತೆ ಇತ್ಯಾದಿ ಅಸ್ಮಿತೆ ಹಾಗೂ ಭಾವನಾತ್ಮಕ ಹಾಗೂ ಭ್ರಾಮಕ ಕಾರಣಗಳಿಗಾಗಿ ದುಡಿಯುವ ಜನರನ್ನ ಒಡೆಯಲಾಗಿದೆ. ದುಡಿಯುವ ವರ್ಗದ ಈ ಅನೈಕ್ಯತೆಯು ಶೋಷಕರನ್ನು ಇನ್ನಷ್ಟು ಬಲಾಢ್ಯರನ್ನಾಗಿಸಿದೆ.

ಆಳುವ ವರ್ಗಕ್ಕೆ ಇಂದು ಅತಿ ಆಪ್ಯಾಯಮಾನವಾಗಿರುವ ನಮ್ಮ ದೇಶದ ಪ್ರಧಾನ ಮಂತ್ರಿ ನರೇಂದ್ರ ಮೋದಿಯವರು "ಆರ್ಥಿಕ ಸುಧಾರಣೆಯ ತೀರ್ಮಾನಗಳು ರಾಜಕೀಯ ಒತ್ತಡಗಳಿಂದ ಮುಕ್ತವಾಗಿರಬೇಕು" ಎಂದು ಪ್ರತಿಪಾದಿಸಿರುವುದು ಈ ಕಾರಣಕ್ಕಾಗಿಯೇ. ಬಿ.ಎಸ್.ಎನ್.ಎಲ್. ಕಾರ್ಮಿಕರು ತಮ್ಮ ಹಾಗೂ ತಮ್ಮ ದುಸ್ಥಿತಿಗೆ ಮೋದಿ ನೇತೃತ್ವದ ಕೇಂದ್ರ ಸರ್ಕಾರದ ಅಂಬಾನಿ – ಜಿಯೋ ಪರ ನೀತಿಗಳೇ ಕಾರಣ. ಆದ್ದರಿಂದ ಮೋದಿ ಸರ್ಕಾರವನ್ನು ತೊಲಗಿಸಬೇಕು ಎನ್ನುವ ತಿಳುವಳಿಕೆ ಮೂಡುವಂತಹ ಹೋರಾಟವನ್ನು ಕಾರ್ಮಿಕ ಸಂಘಗಳು ನಡೆಸಿವೆಯೇ ಎನ್ನುವ ಪ್ರಶ್ನೆಗೆ ಸಮರ್ಪಕ ಉತ್ತರ ಸಿಗುವ ಭರವಸೆ ಖಂಡಿತ ಇಲ್ಲ. ಇತ್ತೀಚೆಗೆ ನೆಲಕಚ್ಚಿದ ಜೆಟ್ ಏರ್‌ವೇಸ್ ವಿಮಾನ ಸಂಸ್ಥೆಯ ೨೨,೦೦೦ ನೌಕರರು ಉದ್ಯೋಗ ಕಳೆದುಕೊಂಡು ಬೀದಿ ಪಾಲಾಗಿದ್ದಾರೆ. ಪ್ರಸ್ತುತ ಪಾರ್ಲಿಮೆಂಟ್ ಚುನಾವಣೆಯಲ್ಲಿ ಹತಾಶೆಯಿಂದ ನೋಟಾ ಚಲಾಯಿಸುವುದಾಗಿ ಘೋಷಿಸಿದ್ದಾರೆ. ಅವರಿಗೂ ಸಹ ಜೆಟ್ ಏರ್‌ವೇಸ್ ವಿಮಾನಗಳು ಆಕಾಶದಲ್ಲಿ ಹಾರಾಡುತ್ತಿರುವವರೆಗೆ ಸರ್ಕಾರದ ರಿಯಲನ್ಸ್ ಪರ ನೀತಿಗಳ ಅರಿವಾಗಿರಲಿಕ್ಕಿಲ್ಲ. ಇಂದು ಕಾರ್ಮಿಕ ವರ್ಗದ ಹಕ್ಕುಗಳನ್ನು ರಕ್ಷಿಸುವ ಹೋರಾಟಕ್ಕಿಂತಲೂ, ಅವರ ಐಕ್ಯತೆಯನ್ನು ಕಾಪಾಡಲು ನಡೆಸಬೇಕಾದ ಹೋರಾಟ ಹಾಗೂ ಕಾರ್ಮಿಕ ವರ್ಗಕ್ಕೆ ಅದರ ರಾಜಕೀಯ ಕರ್ತವ್ಯಗಳನ್ನು ನೆನಪಿಸುವ ಹೋರಾಟಗಳು ಹೆಚ್ಚು ಅವಶ್ಯಕ ಹಾಗೂ ಅನಿವಾರ್ಯವಾಗಿದೆ.





**ಮೋದಿ ಆಳ್ವಿಕೆ ಮತ್ತು ಕಾರ್ಮಿಕ ವರ್ಗ**

೨೦೧೪ರ ಪಾರ್ಲಿಮೆಂಟ್ ಚುನಾವಣೆಯಲ್ಲಿ ದಶಕಗಳ ನಂತರ ಒಂದೇ ಪಕ್ಷ ಬಹುಮತ ಪಡೆದು ಮೋದಿಯವರ ಸರ್ಕಾರ ರಚನೆಯಾಯಿತು. ಆದರೆ ಮೋದಿಯವರ ಸರ್ಕಾರವು ಮನಮೋಹನ್–ಚಿದಂಬರಂರವರ ಸರ್ಕಾರಕ್ಕಿಂತಲೂ ಹೆಚ್ಚು ವೇಗದಿಂದ ಹೊಸ ಆರ್ಥಿಕ ನೀತಿಗಳನ್ನು ಅನುಷ್ಠಾನಗೊಳಿಸಲಾರಂಭಿಸಿತು. ೨೦೧೪ರ ಆಗಸ್ಟ್ ೧೫ರಂದು ಕೆಂಪುಕೋಟೆಯ ಮೇಲಿಂದ ಮೋದಿಯವರು 'ಮೇಕ್ ಇನ್ ಇಂಡಿಯಾದ' ಘೋಷಣೆ ನೀಡಿ ಕಡಿಮೆ ಕೂಲಿಯ ಕಾರ್ಮಿಕರನ್ನು ಒದಗಿಸುವುದಾಗಿ ಹೇಳಿ ವಿದೇಶಿ ಬಂಡವಾಳಕ್ಕೆ ಕೆಂಪು ಹಾಸನ್ನ ಹಾಸಿದರು. ಹಲವು ದಶಕಗಳ ಹೋರಾಟದ ಫಲವಾಗಿ ಕಾರ್ಮಿಕ ವರ್ಗ ಗಳಿಸಿದ ಕಾರ್ಮಿಕ ಕಾನೂನುಗಳನ್ನು ದುರ್ಬಲಗೊಳಿಸಿ ಕಾರ್ಮಿಕರ ಹಕ್ಕುಗಳನ್ನು ಕಸಿದುಕೊಳ್ಳಲು ಸಂಚು ಹೆಣೆದರು. ರಸ್ತೆ ಸುರಕ್ಷತಾ ಮಸೂದೆ ಹೆಸರಿನಲ್ಲಿ ದೇಶದ ಇಡೀ ಸಾರಿಗೆ ವ್ಯವಸ್ಥೆಯನ್ನು ಖಾಸಗಿಯವರಿಗೆ ಧಾರೆ ಎರೆಯಲು ಮುಂದಾದರು. ದೇಶದ ಸಾರಿಗೆ ವಲಯದ ಕಾರ್ಮಿಕರು ಡಿಸೆಂಬರ್ ೧೮, ೨೦೧೪ರಂದು ಸಂಸತ್ ಭವನದ ಮುಂದೆ ಬೃಹತ್‌ಧರಣಿ ಸತ್ಯಾಗ್ರಹ ನಡೆಸುವ ಮೂಲಕ ಕಾರ್ಮಿಕ ವರ್ಗದ ಪ್ರತಿರೋಧದ ಪ್ರಥಮ ಅನುಭವವನ್ನು ಮೋದಿಯವರಿಗೆ ತೋರಿಸಿದರು. ಇಡೀ ದೇಶವೇ ಏಪ್ರಿಲ್ ೩೦, ೨೦೧೫ರಂದು ರಾಷ್ಟ್ರೀಯ ಸಾರಿಗೆ ಮುಷ್ಕರದ ಮೂಲಕ ಮೋದಿಯ ಕಾರ್ಪೊರೇಟ್ ಮೋಹಕ್ಕೆ ಸವಾಲೆಸೆಯಿತು. ಮೋದಿ ಸರ್ಕಾರ ಬಾಲ ಮುದುರಿಕೊಂಡು ತನ್ನ ರಸ್ತೆ ಸಾರಿಗೆ ಸುರಕ್ಷಾ ಮಸೂದೆಯನ್ನು ಬದಿಗೆ ತಳ್ಳಿತು.

ಸಾರಿಗೆ ನೌಕರರ ರಾಷ್ಟ್ರೀಯ ಮುಷ್ಕರದ ಯಶಸ್ಸಿನಿಂದ ಉತ್ತೇಜಿತರಾದ ಕಾರ್ಮಿಕ ವರ್ಗ ೨೦೧೫ ಸೆಪ್ಟೆಂಬರ್ ೨ರಂದು ರಾಷ್ಟ್ರೀಯ ಕಾರ್ಮಿಕ ಮುಷ್ಕರದ ಮೂಲಕ ಬಂಡವಳಿಗರ ಬಾಲ ಬಡುಕ ಸರ್ಕಾರಕ್ಕೆ ಸೆಡ್ಡು ಹೊಡೆಯಿತು. ಸೆಪ್ಟೆಂಬರ್ ೨, ೨೦೧೫ರ ರಾಷ್ಟ್ರೀಯ ಮುಷ್ಕರದ ಪರಿಣಾಮವಾಗಿ ಮೋದಿ ಸರ್ಕಾರವು ಬೋನಸ್ ಕಾಯಿದೆಗೆ ಗ್ರಾಚ್ಯುಯಿಟಿ ಕಾಯಿದೆ ಹಾಗೂ ಇ.ಎಸ್.ಐ. ಕಾಯಿದೆಗೆ ಹಿಂದಿನ ಯ.ಪಿ.ಎ ಸರ್ಕಾರ ತಂದಿದ್ದ ತಿದ್ದುಪಡಿಗಳನ್ನು ಜಾರಿಗೊಳಿಸಿ ಕೆಲವು ಸೌಲಭ್ಯ ಗಳನ್ನು ನೀಡಬೇಕಾಯಿತು. ಇದಕ್ಕಿಂತಲೂ ಮಹತ್ವದ ವಿಷಯವೆಂದರೆ ಭೂಸ್ವಾಧೀನ ಕಾಯಿದೆಗೆ ೨೦೧೩ರಲ್ಲಿ ಹಿಂದಿನ ಯುಪಿಎ ಸರ್ಕಾರ ತಂದಿದ್ದ ಕೆಲವು ರೈತಪರ ತಿದ್ದುಪಡಿಗಳನ್ನು ಕೈ ಬಿಟ್ಟು, ಕಾರ್ಪೊರೇಟ್ ಪರ ತಿದ್ದುಪಡಿ ಮಾಡಲು ಹೊರಟಿದ್ದ ಮೋದಿ ಸರ್ಕಾರ ಕಾರ್ಮಿಕರ ರಾಷ್ಟ್ರೀಯ ಮುಷ್ಕರದ ಹಿನ್ನೆಲೆಯಲ್ಲಿ ಅದನ್ನು ಕೈಬಿಡಬೇಕಾಯಿತು. (ಬೆಂಗಳೂರಿನ ಗಾರ್ಮೆಂಟ್ ಉದ್ದಿಮೆಯ ಸುಮಾರು ಆರು ಲಕ್ಷ ಕಾರ್ಮಿಕರು ೨೦೧೬ ಏಪ್ರಿಲ್ ೨೦ ಹಾಗೂ ೨೧ ದಿಢೀರನೆ ಬೀದಿಗಿಳಿದರು).

ಮೋದಿ ಸರ್ಕಾರವು ಭವಿಷ್ಯನಿಧಿ ಕಾಯಿದೆಯ ಕೆಲವು ನಿಯಮಗಳಿಗೆ ತಿದ್ದುಪಡಿ ತಂದು ಕಾರ್ಮಿಕ ಭವಿಷ್ಯ ನಿಧಿಯನ್ನು ಕಾರ್ಮಿಕರಿಗೆ (ಮೂರು ವರ್ಷಗಳವರೆಗೆ ಮಾತ್ರ ಬಡ್ಡಿ ಕೊಡುವಂತೆ ನಿಯಮ ರೂಪಿಸಿ) ೫೮ ವರ್ಷ ವಯಸ್ಸಾಗುವವರೆಗೆ (ಮೊದಲ ಮೂರು ವರ್ಷಗಳ ನಂತರ) ಬಡ್ಡಿ ಇಲ್ಲದೆ ಸರ್ಕಾರದ ಸುಪರ್ದಿನಲ್ಲಿಟ್ಟುಕೊಂಡಿರುವುದಾಗಿ ಘೋಷಿಸಿದಾಗ, ಅದನ್ನು ವಿರೋಧಿಸಿ ಬೆಂಗಳೂರಿನ ಸುಮಾರು ಆರು ಲಕ್ಷ ಗಾರ್ಮೆಂಟ್ ಉದ್ದಿಮೆ ಕಾರ್ಮಿಕರು ೨೦೧೬ರ ಏಪ್ರಿಲ್ ೨೦ ಮತ್ತು ೨೧ರಂದು ದಿಢೀರನೆ ಬೀದಿಗಿಳಿದು ನಗರವನ್ನು ಅಲ್ಲೋಲಕಲ್ಲೋಲ ಮಾಡಿ, ಪ್ರತಿಭಟಿಸಿ ಸರ್ಕಾರವನ್ನು ಮಣಿಸಿ ಅದರ ತೀರ್ಮಾನವನ್ನು ಹಿಂಪಡೆಯುವಂತೆ ಮಾಡಿದರು. ವಿಶೇಷವೆಂದರೆ ಈ ಹೋರಾಟ ಯಾವುದೇ ಶಿಸ್ತುಬದ್ಧ ಸಂಘಟಿತ ಹೋರಾಟವಾಗಿರಲಿಲ್ಲ. ಆದರೂ ಉದ್ರಿಕ್ತ ಕಾರ್ಮಿಕ ವರ್ಗದ ಆಕ್ರೋಶದ ಸ್ವರೂಪವನ್ನು ಸರ್ಕಾರಕ್ಕೆ ಮನವರಿಕೆ ಮಾಡಿಕೊಡುವಲ್ಲಿ ಈ ಹೋರಾಟ ಯಶಸ್ವಿಯಾಯಿತು.

ಹಣಕಾಸು ಕ್ಷೇತ್ರದ ಕಾರ್ಮಿಕರ ಹಾಗೂ ದೇಶದ ಕಾರ್ಮಿಕ ವರ್ಗದ ವಿರೋಧದ ನಡುವೆಯೇ ಕೇಂದ್ರ ಸರ್ಕಾರವು ಸ್ಟೇಟ್ ಬ್ಯಾಂಕ್ ಗುಂಪಿನ ಆರು ಬ್ಯಾಂಕುಗಳನ್ನು ಭಾರತೀಯ ಸ್ಟೇಟ್ ಬ್ಯಾಂಕಿನೊಳಗೆ ವಿಲೀನಗೊಳಿಸಿತ್ತು. ವಿಮಾ ವಲಯದಲ್ಲಿ ರಕ್ಷಣಾ ವಲಯಗಳಲ್ಲಿ ನೇರ ಬಂಡವಾಳಕ್ಕೆ ಆಸ್ಪದ ಮಾಡಿ ಕೊಟ್ಟಿತು. ಕೇಂದ್ರ ಸರ್ಕಾರ ಹಣಕಾಸು ಪುನಾರಚನೆ ಮತ್ತು ಠೇವಣಿ ವಿಮಾ ಕಾಯಿದೆ ತಿದ್ದುಪಡಿ ಮಸೂದೆ (FRDI) ಮೂಲಕ ದೇಶದ ಹಣಕಾಸು ಸಂಸ್ಥೆಗಳಲ್ಲಿರುವ ಸಾಮಾನ್ಯ ಜನರ ಠೇವಣಿ ಹಣವನ್ನು ಕಾರ್ಪೊರೇಟ್ ವಲಯದ ಗೆಳೆಯರಿಗೆ ಹಸ್ತಾಂತರ ಮಾಡಲು ಹವಣಿಸಿದಾಗ ಹಣಕಾಸು ವಲಯದ ನೌಕರ ಸಂಘಟನೆಗಳು ಅದನ್ನು ತೀವ್ರವಾಗಿ ಪ್ರತಿಭಟಿಸಿದರು. ಆಗ ಬೆದರಿದ ಕೇಂದ್ರ ಸರ್ಕಾರ ಅದನ್ನು ಅಧಿಕೃತವಾಗಿ ಹಿಂಪಡೆಯಿತು.

ಸ್ವಾತಂತ್ರ್ಯದ ನಂತರದ ದೇಶದ ಕಾರ್ಮಿಕ ಚಳುವಳಿಯಲ್ಲಿ ಒಡಕಿನ ಕಹಿ ಚರಿತ್ರೆಯೇ ದಾಖಲಾಗಿತ್ತು. ೧೯೯೧ರ ಹೊಸ ಆರ್ಥಿಕ ನೀತಿಯ ಅನುಷ್ಠಾನವೂ ಕಾರ್ಮಿಕ ಚಳುವಳಿಯ ಏಕೀಕರಣಕ್ಕೆ ನಾಂದಿ ಹಾಡಿದೆ. ಕಾರ್ಮಿಕ ಚಳುವಳಿಯ ವಿಭಿನ್ನ ರಾಜಕೀಯ ಸಿದ್ಧಾಂತಗಳ ಅಡಿಯಲ್ಲಿ ಹರಿದು ಹಂಚಿ ಹೋಗಿರುವ ಈ ಸಂದರ್ಭದಲ್ಲಿ ಕಾರ್ಮಿಕ ಚಳುವಳಿಯ ಏಕೀಕರಣ ಸುಲಭ ಕಾರ್ಯವಲ್ಲ. ಅದೂ ಸಹ ಕಾರ್ಮಿಕ ಚಳುವಳಿಯ ಕಾರಣದಿಂದಲೇ ಆರ್ಥಿಕವಾಗಿ ಅನುಕೂಲ ಸೌಲಭ್ಯಗಳನ್ನು ಪಡೆದುಕೊಂಡಿರುವ ಕಾರ್ಮಿಕ ವರ್ಗದ ಒಂದು ಭಾಗ ಮಧ್ಯಮ ವರ್ಗದ ಅವಕಾಶವಾದಿತನವನ್ನು ಮೈಗೂಡಿಸಿಕೊಂಡಿರುವ ಸಂದರ್ಭದಲ್ಲಿ ತಥಾಕಥಿತ ಮಧ್ಯಮ ವರ್ಗ ಜಿನುಗುಧಾರೆಯಿಂದ ಹುಟ್ಟಿರುವ ಸಮುದಾಯವಲ್ಲ. ಅದು ಕಾರ್ಮಿಕ ಚಳುವಳಿಯ ದಶಕಗಳ ಹೋರಾಟದಿಂದ ಕಾರ್ಮಿಕ ವರ್ಗದ ಒಳಗೆ ವಿಕಸನಗೊಂಡ ಒಂದು ವಿಭಾಗ. ಆದರೆ ಈ ಅವಕಾಶವಾದಿತನ ವೈಯಕ್ತಿಕ ಸ್ವರೂಪವೇ ವಿನಹ ವರ್ಗ ಲಕ್ಷಣವಲ್ಲ. ಒಂದು ವರ್ಗವಾಗಿ ಕಾರ್ಮಿಕ ವರ್ಗ ಇಂದಿಗೂ ಕ್ರಾಂತಿಕಾರಿ ವರ್ಗವೇ ಎನ್ನುವ ವಿಷಯದಲ್ಲಿ ಯಾವುದೇ ಸಂಶಯವಿಲ್ಲ. ವರ್ಗ ಪ್ರಜ್ಞೆಯ ಕೊರತೆಯಿಂದಾಗಿ ಕಾರ್ಮಿಕರಲ್ಲಿ ಅವಕಾಶವಾದಿ ಪ್ರವೃತ್ತಿ ಉಂಟಾಗಿದೆ. ಕಾರ್ಮಿಕ ಚಳುವಳಿಯ ಇಂದಿನ ಅತಿಮುಖ್ಯ ಕರ್ತವ್ಯವೆಂದರೆ ತನ್ನ ಹೋರಾಟವನ್ನ ಕಾರ್ಮಿಕ ಚಳುವಳಿಯ ಐಕ್ಯತೆಗಾಗಿ ಕೇಂದ್ರಿಕರಿಸುತ್ತಲೇ ಕಾರ್ಮಿಕರಲ್ಲಿ ವರ್ಗಪ್ರಜ್ಞೆಯ ಜಾಗೃತಿಗೆ ಹೆಚ್ಚಿನ ಆದ್ಯತೆ ನೀಡಿ ಹೋರಾಟಗಳನ್ನು ರೂಪಿಸುವುದಾಗಿದೆ.

**ವಿಜಯಭಾಸ್ಕರ್ ಡಿ. ಎ.**
ಪ್ರಧಾನ ಕಾರ್ಯದರ್ಶಿ
ಎ.ಐ.ಟಿ.ಯು.ಸಿ. ಕರ್ನಾಟಕ ರಾಜ್ಯ ಸಮಿತಿ




## ಬೆಳವಣಿಗೆ ತೊಂದರೆ (ಪಿಡಿಡಿ) ಇರುವ ಮಕ್ಕಳ ಚಿಕಿತ್ಸೆ ನಿರ್ವಹಣೆ ಹಾಗೂ ತರಬೇತಿಯಲ್ಲಿ ವರದಾನವಾಗಿ ಬಂದಿರುವ ಕಾಮ್ ಡೀಲ್ ಸಂಸ್ಥೆಯ ಪ್ರಾಯೋಗಿಕ ಕೈಪಿಡಿಗಳ ಕಿರುಪರಿಚಯ

೧೯೭೦-೮೦ರ ದಶಕದಲ್ಲಿ ತುಂಬ ಅಪರೂಪವಾಗಿ ಕೇಳಿಬರುತ್ತಿದ್ದ ಪಿ.ಡಿ.ಡಿ./ಎ.ಎಸ್.ಡಿ. ಎನ್ನುವ ಶಾರೀರಿಕವಾದ, ಮಗುವಿನ ಬೆಳವಣಿಗೆಯ ಹಲವು ವಲಯಗಳ ಮೇಲೆ ಗಾಢವಾದ ಋಣಾತ್ಮಕ ಪ್ರಭಾವ ಬೀರುವಂಥ ನರ ಮಂಡಲದ ನ್ಯೂನತೆ ಇತ್ತೀಚಿನ ದಿನಗಳಲ್ಲಿ ತುಂಬ ವ್ಯಾಪಕವಾಗಿ ಕಂಡುಬರುತ್ತಿರುವುದು ಸಂಬಂಧಪಟ್ಟ ಪೋಷಕರು, ಶಿಕ್ಷಕರು, ತಜ್ಞರು, ಚಿಕಿತ್ಸಕರು ಹಾಗೂ ತರಬೇತಿದಾರರಿಗೆ ಆತಂಕದ ವಿಷಯವಾಗಿದೆ. ಈ ಸಂದರ್ಭದಲ್ಲಿ ಕಾಮ್ ಡೀಲ್ ಸಂಸ್ಥೆಯ ಸ್ಥಾಪಕರಾದ ಡಾ॥ ಪ್ರತಿಭಾ ಕಾರಂತ್ ಹಾಗೂ ಅವರ ಸಿಬ್ಬಂದಿ ವರ್ಗದವರು ಸುಮಾರು ೪೦ ವರ್ಷಗಳ ವೃತ್ತಿ ಅನುಭವ ಹಾಗೂ ಸಂಶೋಧನೆಯ ಫಲಿತಾಂಶಗಳ ಸಾರ ರೂಪವಾಗಿ ಅನೇಕ ಪ್ರಾಯೋಗಿಕ ಕೈಪಿಡಿಗಳನ್ನು ತಯಾರಿಸಿದ್ದಾರೆ. ಇವೆಲ್ಲಾ ಮೂಲದಲ್ಲಿ ಆಂಗ್ಲ ಭಾಷೆಯಲ್ಲಿರುವುದರಿಂದ ಇವುಗಳ ಉಪಯೋಗ ಸೀಮಿತವಾಗಿತ್ತು. ಇವುಗಳ ಉಪಯೋಗವನ್ನು ವಿಸ್ತರಿಸುವ ಉದ್ದೇಶದಿಂದ ಈ ಕೈಪಿಡಿಗಳನ್ನು ನವಕರ್ನಾಟಕ ಪ್ರಕಾಶನ ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಿದೆ.

**೪. ಚಲನಾ ಕೌಶಲಗಳು (ಸಮಗ್ರ ಮತ್ತು ಸೂಕ್ಷ್ಮ) ಮತ್ತು ದೈನಂದಿನ ಚಟುವಟಿಕೆಗಳು – ೧**

**ಪುಟ್ಟಮಕ್ಕಳ ಕೌಶಲ ವೃದ್ಧಿಗಾಗಿ ಪ್ರಾಯೋಗಿಕ ಕೈಪಿಡಿ**

ಎ.ಎಸ್.ಡಿ. ಸಮಸ್ಯೆಯಿರುವ ಮಕ್ಕಳಿಗೆ ಸೂಕ್ಷ್ಮತರದ ಚಲನಾ ಸಾಮರ್ಥ್ಯದಲ್ಲಿ ತೊಂದರೆ ಕಂಡುಬರುತ್ತದೆ. ಇದರಿಂದಾಗಿ ವಿಕಾರವಾದ ಚಲನಾ ವರ್ತನೆಗಳು ಕಂಡುಬರುವ ಸಾಧ್ಯತೆ ಹೆಚ್ಚಾಗಿರುತ್ತದೆ. ಈ ಕೈಪಿಡಿಯಲ್ಲಿ ಮೊದಲ ಭಾಗದಲ್ಲಿ ೦-೫ ವರ್ಷದ ಮಕ್ಕಳು ಗಳಿಸಬೇಕಾಗಿರುವ ಚಲನಾಕೌಶಲಗಳನ್ನು ಕಲಿಯಲು ಸಾಧ್ಯವಾಗುವಂತೆ ಪಠ್ಯವನ್ನು ಯೋಜಿಸಲಾಗಿದೆ. ಕೈಪಿಡಿಯ ಎರಡನೆಯ ಭಾಗದಲ್ಲಿ ಸೂಕ್ಷ್ಮ ಚಲನಾ ಕೌಶಲಗಳನ್ನು ಗಳಿಸಿ ಕೊಳ್ಳುವ ಹಾಗೆ ಪಠ್ಯವನ್ನು ಯೋಜಿಸಿದೆ. ಆಟಿಸಂ ಸಮಸ್ಯೆ ಇರುವ ಮಕ್ಕಳು ಆಹಾರ ಸೇವಿಸುವುದಕ್ಕೆ ಮತ್ತು ಶೌಚಕ್ಕೆ ಸಂಬಂಧಿಸಿದಂತೆ ಮೂಲಭೂತವಾದ ಕೌಶಲಗಳ ಕೊರತೆಯನ್ನು ಹೊಂದಿರುತ್ತಾರೆ. ಇದು ಮಗುವಿನ ಆರೈಕೆ ಮಾಡುವವರ ಕೆಲಸವನ್ನು ಕಠಿಣ ಮಾಡುತ್ತದೆ. ಈ ಭಾಗದಲ್ಲಿ ಅಳವಡಿಸಿರುವ ಪಠ್ಯವು ಇಂತಹ ಸಮಸ್ಯೆಗಳನ್ನು ನಿವಾರಿಸಲು ಅತ್ಯಂತ ಸಹಕಾರಿಯಾಗಿರುತ್ತದೆ.

ಮಗುವು ಕೌಶಲಗಳನ್ನು ಕರಗತ ಮಾಡಿಕೊಳ್ಳುತ್ತಾ ಹೋದ ಹಾಗೆ ಅವುಗಳನ್ನು ನಿತ್ಯದ ಚಟುವಟಿಕೆಗಳಿಗೆ ಬಳಕೆ ಮಾಡುವುದನ್ನು ಕಲಿಯುತ್ತಾ ಹೋಗುತ್ತದೆ.

ಉದಾಹರಣೆಗೆ :

– ಬರೆಯುವುದನ್ನು ಕಲಿಯುವುದಕ್ಕೆ ಮೊದಲೇ ಪೆನ್ಸಿಲನ್ನು ಹಿಡಿಯುವುದು,

– ಚಮಚದ ಮೂಲಕ ಆಹಾರವನ್ನು ತಾನೇ ತಿನ್ನುವುದು ಇತ್ಯಾದಿ.

**೫. ಸಂವರ್ಧಕ ಮತ್ತು ಪರ್ಯಾಯ ಸಂವಹನಾ ಕೌಶಲಗಳು–೧**

**ಪುಟ್ಟಮಕ್ಕಳ ಕೌಶಲ ವೃದ್ಧಿಗಾಗಿ ಪ್ರಾಯೋಗಿಕ ಕೈಪಿಡಿ**

ಮಗುವು ಮಾತಿನ ಮೂಲಕ ಪ್ರತಿಕ್ರಿಯಿಸಲು ಅಸಾಧ್ಯವಾದಾಗ ತಂದೆ ತಾಯಂದಿರು ಪರ್ಯಾಯ (ಇತರ) ಸಂವಹನ ಮಾಧ್ಯಮಗಳನ್ನು ಹುಡುಕ ಬೇಕಾಗುತ್ತದೆ. ಏಕೆಂದರೆ ಮಗು ಮತ್ತು ಪೋಷಕರ ನಡುವೆ ಬಾಂಧವ್ಯ ಬೆಳೆಯಬೇಕಾದರೆ ಸಂವಹನ ಅತ್ಯಗತ್ಯ. ಅಲ್ಲದೆ ಮಗುವಿನ ಮುಂದಿನ ಎಲ್ಲ ಕಲಿಕೆಗೂ ಈ ಬಾಂಧವ್ಯವೇ ಅಡಿಪಾಯ.

ಅತಿ ಸಾಮಾನ್ಯವಾಗಿ ಬಳಸುವ ಪರ್ಯಾಯ ವೆಂದರೆ ಸನ್ನೆಯ ಭಾಷೆ. ಎ.ಎಸ್.ಡಿ. ಸಮಸ್ಯೆಗಳಿರುವ ಮಕ್ಕಳಿಗೆ ದೃಶ್ಯ ಮಾಧ್ಯಮವನ್ನು ಹೆಚ್ಚಾಗಿ ಬಳಸಲಾಗುತ್ತದೆ. ಏಕೆಂದರೆ ಇವರು ದೃಶ್ಯ ಮಾಧ್ಯಮದಲ್ಲಿ ಹೆಚ್ಚಿನ ಮಟ್ಟದ ಕೌಶಲವನ್ನು ತೋರಿಸುವುದು ಕಂಡುಬಂದಿದೆ. ಸಂವಹನವು ಅತ್ಯಂತ ಮುಖ್ಯವಾದದ್ದು ಮತ್ತು ಸಂವಹನದ ಕೊರತೆ ಹಾಗೂ ಅಭಿವ್ಯಕ್ತಿಯ ಅಸಾಮರ್ಥ್ಯ ಮಗುವಿನ ಸರ್ವತೋಮುಖ ಬೆಳವಣಿಗೆಯನ್ನು ಕುಂಠಿತಗೊಳಿಸುತ್ತದೆ ಎಂಬುದನ್ನು ಅರ್ಥಮಾಡಿ ಕೊಳ್ಳುವುದು ಅತ್ಯಂತ ಮುಖ್ಯವಾಗಿರುತ್ತದೆ.

ತಂದೆ ತಾಯಂದಿರು, ಕ್ಷೇಮಪಾಲಕರು, ಚಿಕಿತ್ಸಾ ತಜ್ಞರು ಇಂತಹ ಮಕ್ಕಳೊಂದಿಗೆ ದಿನನಿತ್ಯದ ಸಂದರ್ಭಗಳಲ್ಲಿ ವ್ಯವಹರಿಸುವಾಗ, ಕಲಿಸಿಕೊಡುವಾಗ ಮಗುವಿನೊಡನೆ ಪರಿಣಾಮಕಾರಿಯಾಗಿ ಸಂವಹನೆ ನಡೆಸುವಾಗ ಎದುರಿಸಬಹುದಾದ ಸಮಸ್ಯೆಗಳನ್ನು ಗಮನದಲ್ಲಿಟ್ಟುಕೊಂಡು ಈ ಕೈಪಿಡಿಯನ್ನು ವಿನ್ಯಾಸ ಗೊಳಿಸಲಾಗಿದೆ. ಪೂರ್ಣ ಸಂವಹನವು ಮಾತು, ಮುಖಭಾವ, ದೈಹಿಕ ಭಾಷೆ, ಬರವಣಿಗೆ, ಚಿತ್ರಗಳು, ಹಾಗೂ ಇನ್ನಿತರ ಹಲವಾರು ಅಂಶಗಳನ್ನು ಒಳಗೊಂಡಿರುತ್ತದೆ ಎಂಬುದನ್ನು ಸಂಬಂಧಪಟ್ಟವರು ಯಾವಾಗಲೂ ನೆನಪಿನಲ್ಲಿ ಇಡಬೇಕಾಗುತ್ತದೆ.

ಈ ಕೈಪಿಡಿಯು ಪರ್ಯಾಯ ಮಾಧ್ಯಮಗಳ ಮೂಲಕ ಅಭಿವ್ಯಕ್ತಿಯನ್ನು ಹೆಚ್ಚಿಸುವ ಗುರಿಯನ್ನು ಹೊಂದಿದ್ದರೂ, ಅರ್ಥಮಾಡಿಕೊಳ್ಳುವ ಮತ್ತು ಅಭಿವ್ಯಕ್ತಪಡಿಸುವ ಭಾಷಾ ಕೌಶಲಗಳನ್ನೂ ಹೆಚ್ಚಿಸುವಂತೆ ಕಲಿಕಾ ಪಠ್ಯವನ್ನು ಒಳಗೊಂಡಿದೆ.

ಬೆಲೆ : ೨೭೫/- ಪುಟ : ೦೦




ಬೆಲೆ : ೨೭೫/- ಪುಟ : ೦೦




ಬೆಲೆ : ೨೭೫/- ಪುಟ : ೦೦



**೬. ತಿಳಿವಿನ, ಸಾಮಾಜಿಕ ಮತ್ತು ಭಾವನಾತ್ಮಕ ಕೌಶಲಗಳು–೧**

**ಪುಟ್ಟಮಕ್ಕಳ ಕೌಶಲ ವೃದ್ಧಿಗಾಗಿ ಪ್ರಾಯೋಗಿಕ ಕೈಪಿಡಿ**

ಮಕ್ಕಳು ಬೆಳೆಯುತ್ತಾ ಹೋದಹಾಗೆ ತಮ್ಮ ಸುತ್ತಮುತ್ತಲಿನ ಪರಿಸರದಲ್ಲಿ ಕಾಣುವ ವಸ್ತುಗಳು, ಆಕಾರಗಳು, ಬಣ್ಣಗಳು, ಪಂಚೇಂದ್ರಿಯಗಳಿಂದ ಸಿಗುವ ಪ್ರಚೋದನೆಗಳು, ಅನುಭವಗಳು, ಇವುಗಳ ಮೂಲಕ ಹಲವಾರು ಸ್ಥೂಲ ಹಾಗೂ ಸೂಕ್ಷ್ಮತರವಾದ ವಿಷಯಗಳನ್ನು ತಿಳಿಯುತ್ತಾರೆ ಮತ್ತು ಇದರ ಪರಿಣಾಮವಾಗಿ ಸೃಜನಶೀಲ, ಕಾಲ್ಪನಿಕ. ಊಹಾಶಕ್ತಿಯ ಬೆಳವಣಿಗೆ ಆಗುತ್ತಿರುತ್ತದೆ. ಎ.ಎಸ್.ಡಿ. ಇರುವ ಮಕ್ಕಳಲ್ಲಿ ಕಲ್ಪನಾ ಹಾಗೂ ಉಹಾಶಕ್ತಿಯ ಅಭಾವವನ್ನು ಕಾಣುತ್ತೇವೆ. ಇದರ ಜೊತೆಗೆ ಸಾಮಾಜಿಕ ಮತ್ತು ಭಾವನಾತ್ಮಕ ಬೆಳವಣಿಗೆಯಲ್ಲಿ ಕೂಡ ಗಮನಾರ್ಹವಾದ ಹಿನ್ನಡೆ ಕಂಡುಬರುತ್ತದೆ.

ಈ ಕೈಪಿಡಿಯಲ್ಲಿ ಈ ಮೂರು ವಲಯಗಳ (ತಿಳಿವಿನ, ಸಾಮಾಜಿನ ಮತ್ತು ಭಾವನಾತ್ಮಕ) ಬೆಳವಣಿಗೆಯು ವೃದ್ಧಿಸುವ ರೀತಿಯಲ್ಲಿ ಪಠ್ಯವನ್ನು ಸಂಯೋಜಿಸಲಾಗಿದೆ.

**೭. ಚಲನಾ ಕೌಶಲಗಳು (ಸಮಗ್ರ ಮತ್ತು ಸೂಕ್ಷ್ಮ) ಮತ್ತು ದೈನಂದಿನ ಚಟುವಟಿಕೆಗಳು – ೨**

ಕುಂಟುವುದು, ಹತ್ತುವುದು, ಉಯ್ಯಾಲೆ ಆಡುವುದು ಸೈಕಲ್ ಹೊಡೆಯುವುದು, ಎಸೆಯುವುದು, ಎಸೆದದ್ದನ್ನು ಹಿಡಿದುಕೊಳ್ಳುವುದು ಇತ್ಯಾದಿ ಕ್ರಿಯೆಗಳಿಗೆ ಸಮಗ್ರ ಚಲನಾ ಕೌಶಲಗಳ ಅವಶ್ಯಕತೆ ಇರುತ್ತದೆ. ಹಾಗೆಯೇ ಬಾಗಿಲಿನ ಹಿಡಿಯನ್ನು ತಿರುಗಿಸುವುದು, ಕಾಗದವನ್ನು ಮಡಚುವುದು, ಬರೆಯುವುದು, ಕೈ ತೊಳೆಯುವುದು, ತಲೆ ಬಾಚಿಕೊಳ್ಳುವುದು, ಬಟ್ಟೆ ಹಾಕಿಕೊಳ್ಳುವುದು, ಝಿಪ್ ಎಳೆದುಕೊಳ್ಳುವುದು ಹಲ್ಲುಜ್ಜಿಕೊಳ್ಳುವುದು ಇತ್ಯಾದಿ ಕ್ರಿಯೆಗಳಿಗೆ ಸೂಕ್ಷ್ಮ ಚಲನಾ ಕೌಶಲಗಳು ಬೇಕಾಗುತ್ತದೆ.

ಈ ದಿಸೆಯಲ್ಲಿ ಮಗು ತನ್ನ ವಯಸ್ಸಿಗೆ ಅನುಗುಣವಾಗಿ ಕೌಶಲಗಳನ್ನು ಗಳಿಸಿಕೊಳ್ಳಲು ಅವಶ್ಯಕವಾದ ನೆರವನ್ನು ಈ ಕೈಪಿಡಿಯು ನೀಡುತ್ತದೆ.

**೮. ಸಂವರ್ಧಕ ಮತ್ತು ಪರ್ಯಾಯ ಸಂವಹನ ಕೌಶಲಗಳು – ೨**

ಮಗು ಮತ್ತು ಪೋಷಕರ ಮಧ್ಯೆ ಗಟ್ಟಿಯಾದ ಭಾವನಾತ್ಮಕ ಸಂಬಂಧ ಏರ್ಪಡುವುದು ಅತ್ಯಂತ ಅವಶ್ಯಕ. ಇದೇ ಮಗುವಿನ ಮುಂದಿನ ಎಲ್ಲ ಕಲಿಕೆಗೂ ಮತ್ತು ಸಂವಹನದ ಗುಣಮಟ್ಟವನ್ನು ಉತ್ತಮಗೊಳಿಸುವುದಕ್ಕೂ ಅಡಿಪಾಯ.

ಮಾತಿನ ಮೂಲಕ ಸಂವಹನ ಕ್ರಿಯೆ ಅಸಾಧ್ಯವಾದಾಗ ಪರ್ಯಾಯ ಸಂವಹನ ಮಾರ್ಗಗಳನ್ನು ಹುಡುಕುವುದು ಮತ್ತು ಬಳಸುವುದು ಅನಿವಾರ್ಯ, ಪರ್ಯಾಯ ಮಾರ್ಗದ ಬಳಕೆಗೆ ತಂದೆ ತಾಯಂದಿರು ಹಾಗೂ ಚಿಕಿತ್ಸಾ ತಜ್ಞರು ಕೂಡ, ತಪ್ಪು ಗ್ರಹಿಕೆಯಿಂದ ಅಸಮ್ಮತಿ ಸೂಚಿಸುವುದು ಕಂಡುಬಂದಿದೆ. ಕಾರಣ, ಪರ್ಯಾಯ ಸಂವಹನ ಮಾರ್ಗವನ್ನು ಬಳಸುವುದರಿಂದ ಮಗುವು ಶಾಶ್ವತವಾಗಿ ಮಾತಿನ ಅಭಿವ್ಯಕ್ತಿಯಿಂದ ದೂರವಾಗುತ್ತದೆ ಎನ್ನುವುದು ಒಂದು ಅಭಿಪ್ರಾಯ. ಆದರೆ ಇತ್ತೀಚಿನ ಹಲವಾರು ಅಧ್ಯಯನಗಳು, ಪರ್ಯಾಯ ಸಂವಹನದ ಪರಿಚಯವು, ವಾಸ್ತವವಾಗಿ ಮಗುವು ಶಾಬ್ದಿಕ ಮಾಧ್ಯಮವನ್ನು (ಭಾಷಾ ಕೌಶಲ / ಮಾತಿನ ಕೌಶಲ) ಕಲಿಯುವ ಸಾಧ್ಯತೆಯನ್ನು ಹೆಚ್ಚಿಸುತ್ತದೆ ಎಂದು ತೋರಿಸಿಕೊಟ್ಟಿವೆ. ಪರ್ಯಾಯ ಮಾರ್ಗವು ಮಾತನ್ನು ಆಡಲೇಬೇಕಾದ ಒತ್ತಡವನ್ನು ಕಡಿಮೆ ಮಾಡಿ, ಹತಾಶಭಾವ ಬರದಂತೆ ತಡೆದು ಆತ್ಮವಿಶ್ವಾಸ ಹೆಚ್ಚುವಂತೆ ಮಾಡುತ್ತದೆ.

**೯. ತಿಳಿವಿನ, ಸಾಮಾಜಿಕ ಮತ್ತು ಭಾವನಾತ್ಮಕ ಕೌಶಲಗಳು – ೨**

ಮಕ್ಕಳು ಬೆಳೆದಂತೆ ತಮ್ಮ ಸುತ್ತಲಿನ ಪರಿಸರದಲ್ಲಿ ಆಸಕ್ತಿ ವಹಿಸಿ, ಘಟನೆಗಳು, ಆಗುಹೋಗುಗಳು ಮತ್ತು ವಸ್ತುಗಳ ಬಗ್ಗೆ ಅರಿವನ್ನು ಪಡೆದುಕೊಂಡು, ಪರಿಕಲ್ಪನೆಗಳನ್ನು ಬೆಳೆಸಿಕೊಳ್ಳುತ್ತಾರೆ. ಈ ತೆರನಾದ ಪ್ರಾಪಂಚಿಕ ಅರಿವಿನ ಗ್ರಹಿಕಾ ಕೌಶಲಗಳು ಅವರನ್ನು ಶಾಲಾ ಶೈಕ್ಷಣಿಕ ಕಲಿಕೆಗೆ ಸಿದ್ಧಗೊಳಿಸುತ್ತದೆ.

ಶಿಕ್ಷಣದಲ್ಲಿ ಕಲಿಕೆಯನ್ನು ಸಾಮಾನ್ಯವಾಗಿ ಗ್ರಹಿಕೆಯ, ಭಾವನಾತ್ಮಕ ಮತ್ತು ಪರಿಸರದ ಪ್ರಭಾವಗಳನ್ನು ಮತ್ತು ಅನುಭವಗಳನ್ನು ಒಂದೆಡೆ ಸೇರಿಸಿ ಅದನ್ನು ಸಮಗ್ರವಾಗಿ ಗ್ರಹಿಸಿ ಅರ್ಥೈಸಿಕೊಳ್ಳುವ ಪ್ರಕ್ರಿಯೆಯನ್ನಾಗಿ ವಿವರಿಸಲಾಗುತ್ತದೆ. ಅಂದರೆ ಮಗುವಿನ ಸಹಜ ಹಾಗೂ ಸಮಗ್ರ ಬೆಳವಣಿಗೆಗೆ ಈ ಕೌಶಲಗಳೇ ಮೂಲಾಧಾರವೆಂದು ಹೇಳಬಹುದು.

ಕೈಪಿಡಿಯ ಮೊದಲ ಭಾಗವು ಮಕ್ಕಳು ೩ರಿಂದ ೬ನೆಯ ವಯಸ್ಸಿನವರೆಗೆ ಪಡೆದುಕೊಳ್ಳಬೇಕಾದ ಗ್ರಹಿಕೆಯ ಕೌಶಲಗಳನ್ನು ಉದ್ದೇಶಿಸಿದೆ. ಪಠ್ಯವನ್ನು ಹಂತಗಳಲ್ಲಿ ರೂಪಿಸಲಾಗಿದ್ದು ಮನೆಯ ಪರಿಸರದಲ್ಲಿಯೇ ಅವುಗಳನ್ನು ಕಾರ್ಯಗತಗೊಳಿಸಬಹುದಾಗಿದೆ.

ಕೈಪಿಡಿಯ ೨ನೇ ಭಾಗವು ಸಾಮಾಜಿಕ ಕೌಶಲಗಳ ಬಗ್ಗೆ ಕೇಂದ್ರಿತವಾಗಿದೆ. ಅಂದರೆ ಗೆಳೆತನ ಮಾಡಿಕೊಳ್ಳುವುದು, ಇತರ ಮಕ್ಕಳೊಂದಿಗೆ ಆಡುವುದು, ಗುಂಪಿನಲ್ಲಿ ಆಡುವಾಗ ಆಟದ ನಿಯಮಗಳನ್ನು ಪಾಲಿಸುವುದು ಇತ್ಯಾದಿ.

ಕೈಪಿಡಿಯ ೩ನೇ ಭಾಗವನ್ನು ಭಾವನಾತ್ಮಕ ಕೌಶಲಗಳ ಬಗ್ಗೆ ರೂಪಿಸಲಾಗಿದೆ. ಅಂದರೆ ಮಗುವು ತನ್ನ ಮತ್ತು ಇತರರ ಭಾವನೆಗಳನ್ನು (ಸಂತೋಷ, ದುಃಖ, ಕೋಪ, ಭಯ) ಗುರುತಿಸುವುದಕ್ಕೆ, ಅಭಿವ್ಯಕ್ತಪಡಿಸುವುದಕ್ಕೆ ಮತ್ತು ನಿಯಂತ್ರಿಸುವುದನ್ನು ಕಲಿತುಕೊಳ್ಳುವಂತೆ ಯೋಜಿಸಲಾಗಿದೆ.

ಪ್ರಾಯೋಗಿಕ ಕೈಪಿಡಿಗಳಲ್ಲಿ ಅಳವಡಿಸಿರುವ ಚಿಕಿತ್ಸಾ ಚಟುವಟಿಕೆಗಳನ್ನು ಆಟದೋಪಾದಿಯಲ್ಲಿ ಮಾಡುವುದು ಸೂಕ್ತ ಹಾಗೂ ಉಪಯುಕ್ತ. ಒಟ್ಟಾರೆಯಾಗಿ ಹೇಳುವುದಾದರೆ ಈ ಕೈಪಿಡಿಗಳ ಸೂಕ್ತ ಉಪಯೋಗದಿಂದ ಕುಟುಂಬದವರಿಗೆ, ಪೋಷಕರಿಗೆ, ಶಿಕ್ಷಕರಿಗೆ, ತರಬೇತುದಾರರಿಗೆ, ಚಿಕಿತ್ಸಕರಿಗೆ ಎಲ್ಲಾ ರೀತಿಯ ಸಹಾಯ, ಬೆಂಬಲ ಮತ್ತು ಮಾರ್ಗದರ್ಶನ ದೊರೆತು, ತನ್ಮೂಲಕ ಎಎಸ್‌ಡಿ / ಪಿಡಿಡಿ ಇರುವ ಮಕ್ಕಳಿಗೆ ಅಪರಿಮಿತವಾಗಿ ಸಹಾಯವಾಗುವುದು ಖಂಡಿತ.

**ಕುಸುಮ ಸುರೇಂದ್ರ**
ಡಿಎಸ್‌ಇ (ಸ್ಪೆಷಲ್ ಎಜುಕೇಷನ್), ಡಿಐಇ




ಬೆಲೆ : ೩೫೦/-
ಪುಟ : ೦೦




ಬೆಲೆ : ೭೭೫/-
ಪುಟ : ೦೦




ಬೆಲೆ : ೩೫೦/-
ಪುಟ : ೦೦

# ಸಂಜೆಯ ಆಕಾಶಕ್ಕೆ ಗುರುಗ್ರಹ

ಮೋಡಗಳು ಆಕಾಶವನ್ನು ವ್ಯಾಪಿಸಲು ಆರಂಭವಾಗುವ ಈ ತಿಂಗಳಲ್ಲಿ ಸಂಜೆಯಲ್ಲಿ ಕಾಣಬಹುದಾದದ್ದು ಪ್ರಕಾಶಮಾನವಾದ ನಕ್ಷತ್ರಗಳು ಮತ್ತು ಗ್ರಹಗಳು ಮಾತ್ರ. ಆದರೆ ಕಳೆದ ತಿಂಗಳವರೆಗೂ ಸಂಜೆಯಲ್ಲಿ ಕಾಣುತ್ತಿದ್ದ ಮಂಗಳಗ್ರಹ ಈಗ ಪಶ್ಚಿಮದ ಅಂಚಿಗೆ ಸರಿದಿರುವುದರಿಂದ ಸಂಜೆಗೆ ಯಾವುದೇ ಗ್ರಹಗಳು ಇಲ್ಲ ಎಂದೇ ಹೇಳಬಹುದು. ಸಂಜೆ ಪಶ್ಚಿಮದ ಅಂಚಿನಲ್ಲಿ ಸಂಧ್ಯಾಪ್ರಕಾಶ ಬಹಳ ಹೊತ್ತು ಇರುವುದರಿಂದ ಮಂಗಳವನ್ನು ಹುಡುಕುವುದು ಕಷ್ಟ. ದಿನೇ ದಿನೇ ಮೇಲೇರಲಿರುವ ಬುಧ ಅದರ ಜೊತೆಗೂಡುತ್ತದೆ. 18ರಂದು ಈ ಎರಡೂ ಚುಕ್ಕೆಗಳು ಪಕ್ಕ ಪಕ್ಕದಲ್ಲಿಯೇ ಇರುವುದನ್ನು ಕಾಣುವುದೂ ಕಷ್ಟವಾಗಬಹುದು. ಮುಂದೆ ಇನ್ನೂ ಮೇಲೇರುವ ಬುಧ 23ರಂದು ಗರಿಷ್ಠ ಮುಟ್ಟುತ್ತದೆ. ತಿಂಗಳ ಕೊನೆಗೆ ಅದು ಪುನಃ ದಿಗಂತದ ಅಂಚಿಗೆ ಸರಿಯುತ್ತದೆ.

ಗ್ರಹಗಳಿಲ್ಲದ ಕೊರತೆಯನ್ನು ತುಂಬಲೋ ಎಂಬಂತೆ ಗುರುಗ್ರಹ ಪೂರ್ವದ ಅಂಚಿನಲ್ಲಿ ಕಾಣಲಿದೆ. ಪೂರ್ವ ದಿಗಂತದಲ್ಲಿ ಸಂಜೆಯಿಂದ ಸಂಜೆಗೆ ಕೆಲವು ನಿಮಿಷಗಳಷ್ಟು ಮುಂಚೆ ಉದಯಿಸುವ ಗುರು ಹುಣ್ಣಿಮೆಯಂದು ಚಂದ್ರನ ಪಕ್ಕದಲ್ಲಿಯೇ ಕಾಣುತ್ತದೆ. ಈ ಗ್ರಹವನ್ನು ವೀಕ್ಷಿಸಲು ಈ ತಿಂಗಳು ಬಹಳ ಅನುಕೂಲಕರವಾಗಿದೆ. 10ರಂದು ಗುರುಗ್ರಹದ ವಿಯುತಿ. ಆದ್ದರಿಂದ ಇದು ರಾತ್ರಿಯುದ್ದಕ್ಕೂ ನೋಡಲು ಸಿಗುವುದು. ಅದರ ಭ್ರಮಣೆಯ ಅವಧಿ ಕೇವಲ 10 ಗಂಟೆಗಳು. ಆದ್ದರಿಂದ ಇಡೀ ರಾತ್ರಿಯ ಒಂದಲ್ಲ ಒಂದು ಸಮಯದಲ್ಲಿ ಕೆಂಪು ಮಚ್ಚೆ ಕಾಣಲೇಬೇಕು. ಆದರೆ ಇದನ್ನು ಪರೀಕ್ಷಿಸಲು ದೂರದರ್ಶಕ ಅವಶ್ಯಕ. ಇದು ಭೂಮಿಯಿಂದ ಕನಿಷ್ಠ ದೂರದಲ್ಲಿ ಇರುವುದರ ಕಾರಣ ಪ್ರಕಾಶವೂ ಹೆಚ್ಚು, ದೊಡ್ಡದಾಗಿಯೂ ಕಾಣುವುದು.

ಶುಕ್ರ, ಶನಿ ಗ್ರಹಗಳನ್ನು ಮುಂಜಾವಿನಲ್ಲಿ ಕಾಣಬಹುದು. ಶುಕ್ರ ದಿಗಂತಕ್ಕೆ ಸಮೀಪವಾಗಿ ಇದ್ದರೂ ಸಂಧ್ಯಾಪ್ರಕಾಶದ ಕೆಂಪಿನಲ್ಲಿಯೂ ಗುರುತಿಸಬಹುದಾದಷ್ಟು ಪ್ರಕಾಶಮಾನವಾಗಿರುತ್ತದೆ.

5ರ ಸಂಜೆ ಪಶ್ಚಿಮದಲ್ಲಿ ಚಂದ್ರ, ಮಂಗಳ ಮತ್ತು ಬುಧ

ಶನಿಗ್ರಹವನ್ನು ಚಂದ್ರ 19ರಂದು ಮರೆಮಾಡುತ್ತದೆ. ಆದರೆ ನಮಗೆ ಈ ಆಚ್ಛಾದನೆ ಕಾಣುವುದಿಲ್ಲ. ಅವೆರಡೂ ಬಹಳ ಸಮೀಪವಾಗಿರುವಂತೆ ಮಾತ್ರ ತೋರುತ್ತದೆ. ಜೂನ್ ಮತ್ತು ಜುಲೈ 1ರಂದು ಶುಕ್ರ ಮತ್ತು ಚಂದ್ರ ಬಹಳ ಸಮೀಪವಾಗಿರುತ್ತವೆ. ಆದರೆ ಜುಲೈ ತಿಂಗಳಲ್ಲಿ ಅವೆರಡನ್ನೂ ಗುರುತಿಸುವುದೇ ಒಂದು ಸವಾಲಾಗುತ್ತದೆ. ಮರುದಿನ ಜುಲೈ 2ರಂದು ಸೂರ್ಯಗ್ರಹಣವಿದೆ. ಭಾರತಕ್ಕೆ ಗೋಚರಿಸುವುದಿಲ್ಲ. ಚಂದ್ರನ ನೆರಳು ದಕ್ಷಿಣ ಅಮೆರಿಕದ ಮೇಲೆ ಬೀಳಲಿದೆ.

ಜೂನ್ 21ರಂದು ದಕ್ಷಿಣಾಯನ; ಗರಿಷ್ಠ ಅವಧಿ ಹಗಲಿನ ದಿನ.

ಸಂಜೆ ಪಶ್ಚಿಮದಲ್ಲಿ ಮಹಾವ್ಯಾಧ ಮರೆ ಆದಂತೆ ಪೂರ್ವದಲ್ಲಿ ವೃಶ್ಚಿಕ ತಲೆ ಎತ್ತುತ್ತದೆ. ಇದನ್ನೇ ಪಾಶ್ಚಾತ್ಯರು ಕತೆ ಕಟ್ಟಿದ್ದಾರೆ. ಎಲ್ಲರನ್ನೂ ಗೆಲ್ಲಬಲ್ಲೆ ಎಂದು ಜಂಭ ಕೊಚ್ಚಿಕೊಳ್ಳುತ್ತಿದ್ದ ಒರೈಯನ್‌ಗೆ ಬುದ್ಧಿ ಕಲಿಸಲು ಬಂದ ಚಿಕ್ಕ ಪ್ರಾಣಿ ಚೇಳೇ ಅವನ ಸಾವಿಗೆ ಕಾರಣವಾಯಿತು. ಆದ್ದರಿಂದ ವೃಶ್ಚಿಕ ಕಾಣಿಸಿಕೊಂಡಾಗ ಒರೈಯನ್ (ಮಹಾವ್ಯಾಧ) ಅಕ್ಷರಶಃ ಅಸ್ತಂಗತವಾಗುತ್ತದೆ. ಹುಣ್ಣಿಮೆಯ ಚಂದ್ರನ ಪಕ್ಕದಲ್ಲಿರುವ ಕೆಂಪು ನಕ್ಷತ್ರವೇ ವೃಶ್ಚಿಕ ರಾಶಿಯ ಜ್ಯೇಷ್ಠಾ. ನೆತ್ತಿಯ ಮೇಲೆ ಸಿಂಹ ರಾಶಿ, ಉತ್ತರದಲ್ಲಿ ಸಪ್ತರ್ಷಿ ಮಂಡಲ, ದಕ್ಷಿಣದಲ್ಲಿ ತ್ರಿಶಂಕು ಇವು ಪ್ರಧಾನವಾಗಿ ಕಾಣುವುವು. ದಕ್ಷಿಣದಲ್ಲಿ ಕಾಣುವ ಎರಡು ಪ್ರಮುಖ ನಕ್ಷತ್ರಗಳು ಕಿನ್ನರಪಾದ (ಆಲ್ಫಾ ಸೆಂಟಾರಿ ಮತ್ತು ಬೀಟಾ ಸೆಂಟಾರಿ) ಪುಂಜಕ್ಕೆ ಸೇರಿವೆ.

**ತಿಂಗಳ ಖಗೋಳ ದಿನಚರಿ**

ಜೂನ್ 1 ಶುಕ್ರ–ಚಂದ್ರ ಜೋಡಿ*
3 ಅಮಾವಾಸ್ಯೆ 15:32ಕ್ಕೆ
4 ಬುಧ–ಚಂದ್ರ ಜೋಡಿ*
5 ಮಂಗಳ–ಚಂದ್ರ ಜೋಡಿ*
7 ಭೂಮಿ–ಚಂದ್ರ ನಡುವೆ ಕನಿಷ್ಠ ಅಂತರ
10 ಚಾಂದ್ರಮಾಸದ ಮೊದಲ ಪಾದ; ಗುರುಗ್ರಹದ ವಿಯುತಿ
16 ಗುರು–ಚಂದ್ರ ಜೋಡಿ*
17 ಹುಣ್ಣಿಮೆ 14:01ಕ್ಕೆ
18 ಮಂಗಳ–ಬುಧ ಜೋಡಿ*
19 ಶನಿ–ಚಂದ್ರ ಜೋಡಿ* (ಆಚ್ಛಾದನೆ ಕಾಣುವುದಿಲ್ಲ)
21 ದಕ್ಷಿಣಾಯನ 20:24ಕ್ಕೆ
23 ಭೂಮಿ–ಚಂದ್ರ ನಡುವೆ ಗರಿಷ್ಠ ಅಂತರ; ಬುಧಗ್ರಹದ ಗರಿಷ್ಠ ಕೋನೋನ್ನತಿ
25 ಚಾಂದ್ರಮಾಸದ ಕೊನೆಯ ಪಾದ
ಜುಲೈ 1 ಶುಕ್ರ–ಚಂದ್ರ ಜೋಡಿ*
(*ಛಾಯಾಗ್ರಹಣಕ್ಕೆ ಸದವಕಾಶ)

ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

# ಠಾಕುರ್ ಬಾವಿ

**ಜೋ**ಖು ಜ್ವರದಲ್ಲಿ ನರಳುತ್ತಿದ್ದ. ಅವನ ಗಂಟಲು ಒಣಗುತ್ತಿತ್ತು. ನೀರು ಕುಡಿಯಲು ಲೋಟವನ್ನು ಬಾಯಿಗೆ ತಂದಂತೆ ಕೆಟ್ಟ ವಾಸನೆ ಮೂಗಿಗೆ ಹೊಡೆಯಿತು. ಮುಖ ಕೆಡಿಸಿದ.

"ಗಂಗೀ, ಇದೆಂಥ ನೀರು ತಂದಿದಿಯಾ... ತಂಗಳ ನೀರೇನು...? ಕುಡಿಯಲಿಕ್ಕಾಗ್ತಿಲ್ಲ. ನೋಡು ಎಂಥ ಕೆಟ್ಟ ವಾಸನೆ... ಇಂಥ ನೀರು ಕೊಡೋದಾ ನೀನು...? "

ಗಂಗಿ ಹತ್ತಿರಕ್ಕೆ ಬಂದು ಲೋಟದ ನೀರನ್ನು ಮೂಗಿಗೆ ಹಿಡಿದು ನೋಡಿದಳು. ನಿಜವಾಗಿಯೂ ನೀರು ಕೆಟ್ಟ ವಾಸನೆ ಹೊಡೆಯುತ್ತಿತ್ತು. ಪ್ರತೀ ಸಾಯಂಕಾಲ ಶುದ್ಧ ನೀರನ್ನೇ ಮಡಕೆಯಲ್ಲಿ ತುಂಬಿಡುತ್ತಿದ್ದಳು. ಹಳ್ಳಿಯಲ್ಲಿರುವುದು ಮೂರೇ ಬಾವಿಗಳು. ತಮಗೆ ದೂರದಲ್ಲಿರುವ ಬಾವಿಗೆ ಹೋಗಿ ನೀರು ತರುವುದು ಕಷ್ಟವಿತ್ತು. ನಿನ್ನೆ ತಂದ ನೀರಲ್ಲಿ ವಾಸನೆ ಇರಲಿಲ್ಲ. ಇವತ್ತು ತಂದ ನೀರಲ್ಲಿ ವಾಸನೆ ಹೇಗೆ ಬಂತು...? ಬಾವಿಯಲ್ಲಿ ಯಾವುದೋ ಪ್ರಾಣಿ ಬಿದ್ದು ಸತ್ತಿರಬೇಕು. ಈ ಠಾಕುರ್ ತನ್ನ ದೊಡ್ಡಸ್ಥಿಕೆಗೆ ದಬ್ಬಾಳಿಕೆಗಾಗಿ ಸತ್ತ ಪ್ರಾಣಿಯನ್ನೇ ಒಳಗೆ ಬಿಸಾಡಿಸಿರಬೇಕು. ಏನೂ ಮಾಡಲು ಹೇಸದವನು...! ಆದರೆ ಈಗ ನೀರು ತರುವುದು ಎಲ್ಲಿಂದ...?

ಸಾಹು ಬಾವಿ ಊರಾಚೆ ಸೀಮೆಯಲ್ಲಿದೆ. ನೀರು ಹಿಡಿದುಕೊಳ್ಳಲು ಅಲ್ಲಿ ಯಾರನ್ನೂ ಬಿಡು ವುದಿಲ್ಲ. ಠಾಕೂರ್ ಬಾವಿಗೆ ಹೋಗಲು ಸಾಧ್ಯವೇ ಇಲ್ಲ. ಹತ್ತಿರಕ್ಕೆ ಬಿಡುವುದೇ ಇಲ್ಲ. ದೂರದಿಂದಲೇ ಅಲ್ಲಿಯವರು ಕೂಗಾಡಿಬಿಡುತ್ತಾರೆ. ಇನ್ನಾವುದೇ ಬಾವಿಯೂ ಊರೊಳಗಿಲ್ಲ. ಗಂಗಿ ಚಿಂತಿತಳಾದಳು.

ಜೋಖು ಬಹಳ ದಿನಗಳಿಂದ ಕಾಯಿಲೆ ಬಿದ್ದಿದ್ದ. ಬಾಯಾರಿಕೆಯನ್ನು ತಡೆದು ಬಹಳ ಹೊತ್ತು ಸುಮ್ಮನೆ ಬಿದ್ದುಕೊಂಡಿದ್ದವನು "ಗಂಗಿ ವಿಪರೀತ ಬಾಯಾರಿಕೆಯಾಗುತ್ತಿದೆ.. ಕೊಡು ಅದೇ ನೀರು... ಮೂಗು ಹಿಡಿದು ಸ್ವಲ್ಪಾದರೂ ಕುಡೀತ್ತೀನಿ..." ಎಂದು ಲೋಟಕ್ಕೆ ಕೈ ಚಾಚಿದ. ಗಂಗಿ ನೀರು ಕೊಡಲಿಲ್ಲ. ಕೊಳಕು ಮಲಿನ

ಬಾವಿ ಹತ್ತಿರಕ್ಕೆ ಯಾರೋ ನಡೆದು ಬರುತ್ತಿರುವ ಸದ್ದು ಕೇಳಿಸಿಕೊಂಡಳು. ಗಂಗಿಯ ಎದೆ ಧಕ್ ಧಕ್ ಹೊಡೆದುಕೊಳ್ಳತೊಡಗಿತು. ನೋಡಿದರೆ ಇನ್ನೆಂಥ ಅನಾಹುತವೋ... ಕೂಡಲೆ ಬಿಂದಿಗೆ ಮತ್ತು ಹಗ್ಗ ಎತ್ತಿಕೊಂಡವಳೇ ದಾಪುಗಾಲಿನಲ್ಲಿ ಮರದ ಮರೆಗೆ ಬಂದು ನಿಂತಳು.

ಹಿಂದಿ ಮೂಲ : **ಮುನ್ಸಿ ಪ್ರೇಮಚಂದ್**
ಕನ್ನಡಕ್ಕೆ : **ಕ್ಷಿತಿಜ್ ಬೀದರ್**



ನೀರು ಕುಡಿಯುವುದರಿಂದ ರೋಗ ಇನ್ನೂ ಹೆಚ್ಚುತ್ತದೆ ಎಂಬ ತಿಳುವಳಿಕೆ ಅವಳಿಗಿತ್ತು. ನೀರು ಕುದಿಸುವುದರಿಂದ ಅದರ ಕೆಡುಕನ್ನು ಸರಿಪಡಿಸಬಹುದೆಂಬ ವಿಚಾರ ಮಾತ್ರ ಅವಳಿಗೆ ತಿಳಿದಿರಲಿಲ್ಲ.

"ಇಂಥ ವಾಸನೆ ನೀರು ಹೇಗೆ ಕುಡೀತೀಯಾ...? ಯಾವ ಪ್ರಾಣಿ ಸತ್ತಿದೆಯೋ ಏನೋ... ನಾನು ಬೇರೆ ಶುದ್ಧ ನೀರು ತಂದುಕೊಡ್ತೀನಿ ಇರು..." ಜೋಖು ಅಚ್ಚರಿಯಲ್ಲಿ ಅವಳೆಡೆಗೆ ನೋಡಿದ.

"ಬೇರೆ ಶುದ್ಧ ನೀರು ಎಲ್ಲಿಂದ ಬರುತ್ತೇ...? ಸಾಹು ಮತ್ತು ಠಾಕೂರ್ ಬಾವಿ ಬಿಟ್ಟರೆ ಇನ್ನೆಲ್ಲಿ ನೀರು...? ಅವರು ಒಂದು ಲೋಟ ನೀರು ಹಿಡಿದುಕೊಳ್ಳಲೂ ಬಿಡಲ್ಲಾ...!"

"ಅದೇನೋ ನಿಜ. ಕರುಣೆ ಇಲ್ಲದವರು, ಕೈ ಕಾಲು ಮುರಿಲಿಕ್ಕೆ ಬರೋರು... ಠಾಕೂರ್ ಬೆತ್ತದಲ್ಲಿ ಹೊಡೆದರೆ ಸಾಹುಜಿ ಒಂದಕ್ಕೈದು ವಸೂಲಿ ಮಾಡ್ತಾನೆ... ಬಡವರ ನೋವು ಕಷ್ಟ ಇವರಿಗೆ ಯಾಕೆ ಅರ್ಥವಾಗಲ್ಲ...? ನಾವು ಸತ್ತರೂ ಇವರು ಇಣುಕಿ ನೋಡುವುದಿಲ್ಲ..., ಹೆಣ ಎತ್ತೋದು ಇನ್ನೂ ದೂರವೇ... ಕುಡಿಯಲಿಕ್ಕೆ ಒಂದು ಲೋಟ ನೀರು ತಗೊಳ್ಳಲು ನಮ್ಮನ್ನು ಬಾವಿ ಹತ್ತಿರ ಬಿಟ್ಟುಕೊಳ್ತಾರಾ..." ಗಂಗಿ ಮಾತಿನಲ್ಲಿ ಕಹಿ ಸತ್ಯವಿತ್ತು. ನೀರಿನ ಯೋಚನೆಯಲ್ಲಿ ಮಂಕಾದಳು... ಸಮಸ್ಯೆ ಬಗೆಹರಿಯದಂತಾಯಿತು. ಮಾರ್ಗೋಪಾಯ ಹುಡುಕತೊಡಗಿದಳು. ವಾಸನೆಯುಕ್ತ ಮಲಿನ ನೀರನ್ನು ಮಾತ್ರ ಕುಡಿಯಲಿಕ್ಕೆ ಗಂಗಿ ಬಿಡಲಿಲ್ಲ. ರಾತ್ರಿ ಒಂಬತ್ತು ಗಂಟೆಯಾಗಿತ್ತು. ದಣಿದ ಕೂಲಿ ಆಳುಗಳು ಆಗಲೇ ಮಲಗಿಬಿಟ್ಟಿದ್ದರು. ಠಾಕೂರ್ ಮನೆ ಹೆಬ್ಬಾಗಿಲ ಮುಂದೆ ಐದಾರು ಜನ ನಿಂತಿದ್ದರು. ಯಾವುದೋ ಕಾನೂನಿನ ಬಗ್ಗೆ ಮಾತಾಡುತ್ತಿದ್ದರು. ಪೊಲೀಸರಿಗೆ ಲಂಚ ನೀಡಿ ಠಾಕೂರ್ ಪ್ರಕರಣವನ್ನು ಮುಚ್ಚಿಹಾಕಿ ಬಚಾವಾಗಿದ್ದ. ಅದರ ಪ್ರತಿಯನ್ನು ಚಾಲಾಕಿನಿಂದ ಗಿಟ್ಟಿಸಿದ್ದ. ನಾಜಿರ್ಮೊಹಸಿಮ್ ಪ್ರತಿ ಸಿಗುವುದಿಲ್ಲವೆಂದು ಹೇಳಿದ್ದರೂ ಚಾಣಾಕ್ಷತನವಿದ್ದರೆ ಕೈ ಬಿಸಿಮಾಡಿ ಯಾದರೂ ಎಂಥ ಪ್ರತಿಯನ್ನಾದರೂ ಪಡೆಯಬಹುದು ಎಂದು ಅವರಲ್ಲಿಯೇ ಮಾತು ನಡೆದಿತ್ತು. ಗಂಗಿ ಸದ್ದು ಮಾಡದೆ ಬಾವಿ ಹತ್ತಿರಕ್ಕೆ ಬಂದಳು.

ಮಂದ ಪ್ರಕಾಶವಿತ್ತು. ಹೆಬ್ಬಾಗಿಲಿನ ಮುಂದೆ ನಿಂತವರು ಹೊರಟು ಹೋಗುವುದನ್ನೇ ಕಾಯುತ್ತಾ ಕಟ್ಟೆಯ ಮರೆಯಲ್ಲಿ ಅಡಗಿ ಕುಳಿತಳು. ಊರಿನ ಉಚ್ಚ ಜನ ಬಾವಿಯ ನೀರು ಬಳಸುತ್ತಿದ್ದರೂ ತಮಗೆ ಮಾತ್ರ ನಿರ್ಬಂಧ... ತಾನು ನೀರು ಪಡೆಯುವಂತಿಲ್ಲ. ಇದೆಂಥ ರೀತಿ ರಿವಾಜು...!? ನಾವು ಮನುಷ್ಯರಲ್ಲವೇನು...? ಗಂಗಿಯ ವಿದ್ರೋಹ ಮನಸ್ಸು ರೋಸಿ ಸಿಡಿದೇಳುತ್ತಿತ್ತು.

'ಇವರೆಲ್ಲಾ ಯಾವುದರಲ್ಲಿ ಉಚ್ಚರೋ... ಕೊರಳಲ್ಲಿ ದಾರ ಕಟ್ಟಿಕೊಂಡರೆ ಆಯಿತಾ...? ಒಬ್ಬರಿಗಿಂತ ಒಬ್ಬರು ಮಾಡುವ ಪಾಪದ ಕೆಲಸಗಳಿಗೆ ಲೆಕ್ಕವಿಲ್ಲ. ಕಳ್ಳತನ, ಮೋಸ, ದಗಾ, ವಂಚನೆ ನಿತ್ಯದ ಕಾಯಕವಾಗಿವೆ. ಎಲ್ಲಾ ಆರೋಪಗಳನ್ನು ಮಾತ್ರ ನಮ್ಮ ಮೇಲೆ ಹೊರಿಸುವುದು... ಆ ದಿನ ಪ್ರಾಣಿಯನ್ನು ಕದ್ದು ಕೊಂದು ತಿಂದೇಬಿಟ್ಟನಲ್ಲಾ...! ಪಂಡಿತನ ಮನೆಯಲ್ಲಿ ವರ್ಷವಿಡೀ ಇಸ್ಪೀಟಾಟ..., ಆ ಸಾಹೂ ತುಪ್ಪದಲ್ಲಿ ಎಣ್ಣೆ ಬೆರೆಸಿ ಮಾರುತ್ತಾನೆ... ಇವರಿಗೆಲ್ಲಾ ಪುಕ್ಕಟೆ ಕೆಲಸ ಮಾಡಿಸಿಕೊಳ್ಳುವುದಷ್ಟೇ ಗೊತ್ತು. ಕೂಲಿ ಕೊಡಲು ಹಿಂದೇಟು ಹಾಕುತ್ತಾರಲ್ಲಾ... ದರಿದ್ರ ನನ್ಮಕ್ಕಳು, ಯಾವ ಲೆಕ್ಕದಲ್ಲಿ ಇವರು ನಮಗಿಂತ ಉಚ್ಚರು...!? ಬಾಯಲ್ಲಿ ಮಾತ್ರ ಸದಾ ನಾವು ಉಚ್ಚರು ಎಂದು ಊರಲೆಲ್ಲಾ ಬೊಬ್ಬೆ ಹಾಕ್ತಾರೆ... ನಾವು ಇವರಂತೆ ಕೂಗಾಡುವುದಿಲ್ಲವಲ್ಲಾ... ಮನೆಗಳ ಹತ್ತಿರ ಬಂದರೆ ಜೊಲ್ಲು ಸುರಿಸಿಕೊಂಡು ನೋಡಲು ನಮ್ಮ ತುಂಬಿದ ಎದೆಗಳೇ ಆಗಬೇಕು... ಉಚ್ಚರಂತೆ... ಎಂಥ ಅಹಂಕಾರ, ದಬ್ಬಾಳಿಕೆ...!?

ಬಾವಿ ಹತ್ತಿರಕ್ಕೆ ಯಾರೋ ನಡೆದುಬರುತ್ತಿರುವ ಸದ್ದು ಕೇಳಿಸಿಕೊಂಡಳು. ಗಂಗಿಯ ಎದೆ ಧಕ್ ಧಕ್ ಹೊಡೆದುಕೊಳ್ಳತೊಡಗಿತು. ನೋಡಿದರೆ ಇನ್ನೆಂಥ ಅನಾಹುತವೋ... ಕೂಡಲೆ ಬಿಂದಿಗೆ ಮತ್ತು ಹಗ್ಗ ಎತ್ತಿಕೊಂಡವಳೇ ದಾಪುಗಾಲಿನಲ್ಲಿ ಮರದ ಮರೆಗೆ ಬಂದು ನಿಂತಳು.




ಇಬ್ಬರು ಮಹಿಳೆಯರು ಮಾತಾಡುತ್ತಾ ಬಾವಿ ಕಟ್ಟೆಗೆ ಬಂದರು.

"...ಊಟ ಮಾಡ್ತಾನೆ ಇದ್ದಾರೆ. ಹೂಜಿ ನೀರು ಕೊಟ್ಟರೆ ಬೇಡ ಬಾವಿ ತಾಜಾ ನೀರು ತನ್ನಿ ಎಂದು ಆದೇಶ ಮಾಡ್ತಾರೆ. ನಾವು ಜೀತದಾಳೇನು?"

"ಜೀತದಾಳಲ್ಲದೆ ಇನ್ನೇನಕ್ಕ...? ಅನ್ನ ಬಟ್ಟೆ ಕೊಡ್ತಿಲ್ವಾ ...?"

"ಹಾಗೆ ಹೇಳಬೇಡ ನೀನು. ನಾವು ಆರಾಮಾಗಿರೋದು ನೋಡಿ ಈ ಗಂಡಸರಿಗೆ ಹೊಟ್ಟೆಕಿಚ್ಚು ... ಇದೇ ಕೆಲಸ ಬೇರೆ ಕಡೆ ಮಾಡಿದ್ದರೆ ಎಷ್ಟೋ ಖುಷಿ ನೆಮ್ಮದಿ ಇರುತ್ತಿತ್ತು. ಇವರಿಗೆ ದಯೆದ ಮಾತೇ ಇಲ್ಲ. ಕೆಲಸ ಮಾಡಿ ಸತ್ತರೂ ಇವರ ಅಧಿಕಾರ ಮಾತ್ರ ನಿಲ್ಲಲ್ಲ ನೋಡು..." ಇಬ್ಬರೂ ನೀರು ತುಂಬಿಕೊಂಡು ಅಲ್ಲಿಂದ ನಡೆದರು. ಮರದ ಮರೆಯಲ್ಲಿ ಅಡಗಿದ ಗಂಗಿ ಈಚೆ ಸರಿದು ಬಾವಿ ಕಟ್ಟೆ ಹತ್ತಿರಕ್ಕೆ ಬಂದಳು. ಠಾಕೂರ ಮನೆ ಹೆಬ್ಬಾಗಿಲು ಮುಚ್ಚಿಕೊಂಡಿತು. ಪ್ರಶಾಂತ ನಿಶ್ಯಬ್ದ ವಾತಾವರಣ. ನಿರ್ಜನವಾಗಿತ್ತು. ಕ್ಷಣ ಹೊತ್ತು ಗಂಗಿ ನೆಮ್ಮದಿಯ ಉಸಿರು ಬಿಟ್ಟಳು. ಗಟ್ಟಿಯಾಗಿ ಪಾದ ಊರುತ್ತಾ ಸದ್ದಾಗದಂತೆ ಬಾವಿಯ ಕಟ್ಟೆ ಹತ್ತಿದಳು. ಹಗ್ಗದ ನೇಣು ಬಿಂದಿಗೆಗೆ ಬಿಗಿದಳು. ಭಯದಲ್ಲಿ ಮೆಲ್ಲನೆ ಎಡ, ಬಲದತ್ತ ದೃಷ್ಟಿ ಹಾಯಿಸಿ ನೋಡಿದಳು. ಯಾರಾದರೂ ನೋಡಿ ಸಿಕ್ಕಿ ಹಾಕಿಕೊಂಡರೆ ಕತೆ ಮುಗಿದಂತೆಯೇ... ಕ್ಷಮೆಯೂ ಇಲ್ಲ. ಬಿಡುಗಡೆಯೂ ಇಲ್ಲ. ಠಾಕೂರನಲ್ಲಿ ದಯೆ ನಿರೀಕ್ಷಿಸುವಂತೆಯೇ ಇರಲಿಲ್ಲ. ಜೀವಾವಧಿ ಶಿಕ್ಷೆ ಅಷ್ಟೆ . ಅಂತೂ ಕೊನೆಗೆ ದೇವರನ್ನು ಸ್ಮರಿಸಿ ಗಟ್ಟಿ ಮನಸ್ಸು ಮಾಡಿ ಧೈರ್ಯ ತಂದುಕೊಂಡು ಗಂಗಿ ಬಿಂದಿಗೆಯನ್ನು ಬಾವಿಗೆ ಇಳಿಬಿಟ್ಟಳು.

ಬಿಂದಿಗೆ ನೀರಲ್ಲಿ ಮುಳುಗದೆ ಮೇಲೆಯೇ ಗಿರಕಿ ಹೊಡೆಯುತ್ತಿತ್ತು. ಗಂಗಿ ದಿಗಿಲುಗೊಂಡರೂ ಅವಸರವಾಗಿ ಅದನ್ನು ಎರಡ್ಮೂರು ಸಲ ಅಲ್ಲಾಡಿಸಿ ಸದ್ದು ಮಾಡದೆ ಮುಳುಗಿಸಿದಳು. ಆ ಕಡೆ ಈ ಕಡೆ ನೋಡುತ್ತಾ, ಗಟ್ಟಿ ಪೈಲ್ವಾನ್ ತೋರುವ ಶೌರ್ಯದಂತೆ ಗಂಗಿ ತೀವ್ರಗತಿಯಲ್ಲಿ ಬಿಂದಿಗೆಯನ್ನು ಮೇಲಕ್ಕೆ ಎಳೆದಳು. ಅದರ ಸುತ್ತಲಿನ ನೀರಿನ ಸೋರುವಿಕೆ ಆ ಮೌನ ಕತ್ತಲಲ್ಲಿ ಸ್ಫೋಟ ಶಬ್ದವಾಗಿಯೇ ಕೇಳಿಸಿ, ಕರ್ಣವೇದನೆಗೆ ಮೊದಲಾಯಿತು. ಮನಸ್ಸನ್ನು ಹಿಡಿಯಾಗಿಸಿ ತುಟಿ ಬಿಗಿಗೊಳಿಸಿದಳು. ಇನ್ನೇನು ಮುಂದಕ್ಕೆ ಬಾಗಿ ಬಿಂದಿಗೆ ಕೈಗೆ ತೆಗೆದುಕೊಳ್ಳಬೇಕೆನ್ನುವಷ್ಟರಲ್ಲಿಯೇ ಠಾಕೂರರ ಮನೆ ಹೆಬ್ಬಾಗಿಲು ದೊಡ್ಡ ಶಬ್ದದೊಂದಿಗೆ ತೆರೆದುಕೊಂಡಿತು. ಗಂಗಿಯ ಉಸಿರೇ ನಿಂತಂತಾಗಿ ಕೈ ಕಾಲುಗಳಲ್ಲಿ ನಡುಕ ಶುರುವಾಯಿತು. ಕಂಪಿಸಿ  ಕೈ ಬಿಟ್ಟಳು. ಬಿಂದಿಗೆ ಕೈಯಿಂದ ಜಾರಿತು. ಬಾವಿ ತಳ ಸೇರಲು ವೇಗ ಹೆಚ್ಚಿಸಿಕೊಂಡಿತು. ಹಗ್ಗದೊಂದಿಗೆ ಬಿಂದಿಗೆ 'ಧಡಾರ್' ಎಂಬ ಸದ್ದಿನೊಂದಿಗೆ ನೀರಿಗೆ ಬಿತ್ತು. ಸುಮಾರು ಹೊತ್ತು ನೀರು ತುಳುಕಾಡುವ ಸದ್ದು ಕೇಳಿಸತೊಡಗಿತು.

"ಯಾರು ಅಲ್ಲಿ... ಯಾರು...?" ಠಾಕೂರ್ ಹೊರಗೆ ಬಂದು ಬಾವಿಯೆಡೆಗೆ ನೋಡಿದ. ಗಂಗಿ ಒಂದೇ ನೆಗೆತಕ್ಕೆ ಕಟ್ಟೆ ಜಿಗಿದಳು. ತಿರುಗಿಯೂ ನೋಡದೆ ಉಸಿರು ಕಟ್ಟಿ ಓಡತೊಡಗಿದಳು.

ಠಾಕೂರ್ ಪುನಃ "ಯಾರದು ಅಲ್ಲಿ...? ಯಾರಾದರೂ ಇದ್ದೀರಾ?" ದನಿ ಎತ್ತರಿಸಿದರು.

ಕಲ್ಲು–ಮುಳ್ಳು ಎನ್ನದೆ ಗಂಗಿ ಓಡುವುದರಲ್ಲಿಯೇ ಧ್ಯಾನವನ್ನು ಕೇಂದ್ರೀಕರಿಸಿದಳು. ಒಂದೇ ಉಸಿರಿನಲ್ಲಿ ಓಡಿ ಗಂಗಿ ಮನೆ ಬಾಗಿಲಿಗೆ ಬಂದು ತಲುಪಿದಳು. ಹುಲಿ ಬೋನಿನಿಂದ ತಪ್ಪಿಸಿಕೊಂಡಂತಾಗಿತ್ತು... ನೀರು ಸಿಗಲಿಲ್ಲ... ಸದ್ಯ ಪ್ರಾಣ ಉಳಿಯಿತು... ಎಂದುಕೊಂಡು ಏದುಸಿರುಬಿಡುತ್ತಾ ಮನೆಯೊಳಗೆ ಬಂದು ಗಂಡನೆಡೆಗೆ ನೋಡಿದಳು. ಜೋಖು ಮೂಗು ಹಿಡಿದು ಅದೇ ಲೋಟದ ಹೊಲಸು ಮಲಿನ ನೀರನ್ನೇ ಬಾಯಿಗೆ ಸುರಿದುಕೊಂಡು ಕುಡಿಯುತ್ತಿದ್ದ...!

ಹಿಂದಿ ಮೂಲ : **ಮುನ್ಸಿ ಪ್ರೇಮಚಂದ್**  ಕನ್ನಡಕ್ಕೆ : **ಕ್ಷಿತಿಜ್ ಬೀದರ್**
ನಂ. ೧೧೭೪, ನಂದಿ ನಿಲಯ, ಮೇಲ್ಕೋಟೆ ಬಡಾವಣೆ, ತುಮಕೂರು – ೫೭೨ ೧೦೫

# ಅಭಿವೃದ್ಧಿಯ ಪಥ ಮತ್ತು ಪ್ರತಿರೋಧದ ಮುಖಾಮುಖಿ

## ಭಾರತದ ಸಂದರ್ಭದಲ್ಲಿ 'ನವ ರೈತ ಚಳವಳಿಗಳು'




**ಡಾ|| ಮುಜಾಫ್ಫರ್ ಅಸ್ಸಾದಿ**

ಇತ್ತೀಚಿನ ವರುಷಗಳಲ್ಲಿ ಭಾರತದ ರೈತ ಮತ್ತು ರೈತ ಚಳವಳಿಗಳ ಕುರಿತು ಕೆಲವು ಕಥನಗಳು ಹುಟ್ಟಿಕೊಂಡಿವೆ: ಜಾಗತೀಕರಣದ ಭರಾಟೆಯಲ್ಲಿ ರೈತ ಚಳವಳಿಗಳು ಒಂದೋ ನಿಷ್ಕ್ರಿಯವಾಗಿವೆ ಇಲ್ಲವೇ ಇತಿಹಾಸದ ಭಾಗಗಳಾಗಿವೆ. ಅಲ್ಲದೇ ವ್ಯವಸ್ಥೆಯನ್ನು ಎದುರಿಸುವಲ್ಲಿ ಸೋತುಹೋಗಿವೆ. ರೈತರ ಆತ್ಮಹತ್ಯೆ ಸಂದರ್ಭದಲ್ಲಿ ಅವುಗಳನ್ನು ಪ್ರತಿರೋಧಿಸಲು ವಿಫಲವಾಗಿವೆ. ರೈತ ಈಗಲೂ ತನ್ನ ಸಂಪ್ರದಾಯ, ಗ್ರಾಮೀಣ ಸಂಸ್ಕೃತಿ ಮತ್ತು ಜಾತಿಗಿಂತ ಹೊರತಾಗಿ ವರ್ಗ ರೂಪದಲ್ಲಿ ಹೋರಾಡುವುದು ಕಷ್ಟಸಾಧ್ಯ. ಈ ರೀತಿಯ ಕಥನಗಳನ್ನು ಮತ್ತೆ ಮತ್ತೆ ಕಟ್ಟಿ ಅಥವಾ ನಿರ್ಮಿಸಿ ನಮ್ಮ ದೇಶವನ್ನು ರೈತ ಹೋರಾಟಗಳಿಲ್ಲದ ಇಂಡಿಯಾ ಎಂದು ಕಲ್ಪಿಸಲಾಗುತ್ತಿದೆ. ಇವೆಲ್ಲವನ್ನು ಸುಳ್ಳಾಗಿಸಿದ್ದು ಇತ್ತೀಚಿನ ರೈತರ ರ್‍ಯಾಲಿಗಳು ಮತ್ತು ರೈತ ಹೋರಾಟಗಳು. ಇಲ್ಲಿ ರೈತ ಹೋರಾಟಗಳು ಫೀನಿಕ್ಸ್ ಹಕ್ಕಿಯಂತೆ ಮರುಹುಟ್ಟಿವೆಯೇ ಎಂಬ ಸಂದೇಹ ಬರುವುದು ಸಹಜ.

ಸಾರ್ವತ್ರಿಕ ಕಥನಗಳಿಗೆ ತದ್ವಿರುದ್ಧವೆಂಬಂತೆ ಮಹಾರಾಷ್ಟ್ರದ ೨೦೧೮ರ ರೈತರ ಬೃಹತ್ ರ್‍ಯಾಲಿಯನ್ನು ನೋಡಬೇಕು, ಈ ಹಿಂದೆ ೨೦೧೭ರಲ್ಲಿ ಇದೇ ರೈತರು ಕಿಸಾನ್ ಸಭಾದ ನೇತೃತ್ವದಡಿಯಲ್ಲಿ ಶಾಂತಿಯುತ ಜಾಥವನ್ನು ನಡೆಸಿದ್ದರು. ನಾಸಿಕ್‌ನಿಂದ ಮುಂಬಯಿತನಕ ೨೦೦ ಕಿ. ಮೀ.ಅನ್ನು ಕಾಲ್ನಡಿಗೆಯಲ್ಲಿ ಕ್ರಮಿಸಿದ ಅತ್ಯಂತ ಶಾಂತಿಯುತ ಜಾಥ ಮತ್ತು ಅಸೆಂಬ್ಲಿಯ ಘೇರಾವು ಇಲ್ಲಿ ಅತ್ಯಂತ ಮುಖ್ಯ. ಈ ಹೋರಾಟಗಳು ಕೇವಲ ಬೆಂಬಲ ಬೆಲೆ, ಸ್ವಾಮಿನಾಥನ್ ಸಮಿತಿಯ ವರದಿಯ ಅನುಷ್ಠಾನದ ಬೇಡಿಕೆಯನ್ನು ಮುಂದಿಟ್ಟು ಸೀಮಿತ ಹೋರಾಟಗಳನ್ನು ಮಾಡಲಿಲ್ಲ. ಅದರಲ್ಲಿ ಇನ್ನಿತರ ವಿಷಯಗಳಿದ್ದವು – ಅರಣ್ಯ ಕಾಯಿದೆಯ ಅನುಷ್ಠಾನ, ಬಡ ರೈತರಿಗೆ ಮತ್ತು ಕೃಷಿ ಕಾರ್ಮಿಕರಿಗೆ ಪಿಂಚಣಿ, ದೊಡ್ಡ ದೊಡ್ಡ ಯೋಜನೆಗಳಾದ ಬುಲೆಟ್ ಟ್ರೈನ್ ಇತ್ಯಾದಿಗಳಿಗಾಗಿ ಭೂ ಸ್ವಾಧೀನತೆಗೆ ತಡೆ, ನದಿ ಜೋಡಣೆಯ ಯೋಜನೆಯಲ್ಲಿ ಸಂಪೂರ್ಣ ಬದಲಾವಣೆ, ಬರಗಾಲದ ನಿರ್ವಹಣೆ, ಇತ್ಯಾದಿ. ಈ ರೀತಿಯ ಜಾಥಗಳು ಕಿಸಾನ್ ಸಭಾ ಸಂಘಟನೆಗೆ ಹೊಸತಲ್ಲ. ೨೦೧೬ಕ್ಕೆ ಅದು ಥಾಣೆಯಲ್ಲಿ "ಮರಣ ಪೆಟ್ಟಿಗೆ" ಜಾಥವನ್ನು ಕೂಡ ಹಮ್ಮಿಕೊಂಡಿತ್ತು.

ಇದೇ ಸಂದರ್ಭದಲ್ಲಿ ೨೦೧೭ರ ಇನ್ನಿತರ ಮೂರು ಹೋರಾಟಗಳನ್ನು ಗಮನಿಸಬೇಕು. ಮೊದಲನೆಯದು, ರಾಷ್ಟ್ರೀಯ ಕಿಸಾನ್ ಮಹಾ ಸಂಘ್ ಅಡಿಯಲ್ಲಿ ಏಳು ರಾಜ್ಯಗಳಲ್ಲಿ ರೈತರು ಸಾಲ ಮನ್ನಾ ಮತ್ತು ಸ್ವಾಮಿನಾಥನ್ ಸಮಿತಿಯ ಶಿಫಾರಸ್ಸುಗಳ ಅನುಷ್ಠಾನ ಬೇಡಿಕೆಯೊಂದಿಗೆ ನಡೆಸಿದ ಹೋರಾಟ. ಎರಡನೆಯದು ಉತ್ತರ ಪ್ರದೇಶದ ಭಾರತೀಯ ಕಿಸಾನ್ ಯೂನಿಯನ್‌ನ ನೇತೃತ್ವದಲ್ಲಿ ಅಕ್ಟೋಬರ್‌ನಲ್ಲಿ ನಡೆದ ದೆಹಲಿ ತನಕದ ಕಿಸಾನ್ ಕ್ರಾಂತಿ ಯಾತ್ರ ಮತ್ತು ಅಖಿಲ ಭಾರತ ಕಿಸಾನ್ ಸಂಘರ್ಷ್ ಸಮನ್ವಯ ಸಮಿತಿಯಡಿಯಲ್ಲಿ ೨೦೦ ಸಂಘಟನೆಗಳ ಒಕ್ಕೂಟದ ರೈತರ ದೆಹಲಿ ಜಾಥ. ೨೦೧೭ರ ನವೆಂಬರ್ ತಿಂಗಳಲ್ಲಿ ದೇಶದ ವಿವಿಧೆಡೆಯಿಂದ ಐದು ಲಕ್ಷಕ್ಕೂ ಹೆಚ್ಚು ಜನ ರೈತರು ದೆಹಲಿಯಲ್ಲಿ ಸಮಾವೇಶಗೊಂಡಿದ್ದರು. ಪಾರ್ಲಿಮೆಂಟಿನ ಕಿಸಾನ್ ಅಧಿವೇಶನವನ್ನು ಕರೆದು ಕಿಸಾನ್ ಮುಕ್ತಿ ಶಾಸನವನ್ನು ಹಾಗೂ ಸಾಲಾ ಮುಕ್ತಿ ಬಿಲ್ ಮತ್ತು ಗ್ಯಾರಂಟಿಯಾಗಿ ವೈಜ್ಞಾನಿಕ ಬೆಲೆಗಳು–ಅಳವಡಿಸಲು ಆಗ್ರಹಿಸುತ್ತಾ ೧೯ ಬೇಡಿಕೆಗಳ ಪಟ್ಟಿಯನ್ನು ಮುಂದಿಟ್ಟರು. ಉದ್ಯೋಗ ಖಾತ್ರಿ ಯೋಜನೆಯಡಿಯಲ್ಲಿ ಕೂಲಿ ದಿನಗಳ ಹೆಚ್ಚಳ, ರೈತರಿಗೆ ನೇರ ಸಬ್ಸಿಡಿ, ರೈತರಿಗೆ ಪಿಂಚಣಿ ಮತ್ತು ಸಾಮಾಜಿಕ ಭದ್ರತೆ, ಎಲ್ಲಾ ಉತ್ಪನ್ನಗಳನ್ನೊಳಗೊಂಡ ಸಾರ್ವಜನಿಕ ವಿತರಣಾ ವ್ಯವಸ್ಥೆ, ಭೂ ಸ್ವಾಧೀನತೆಗೆ ತಡೆ, ಕೃಷಿಯಲ್ಲಿ ವಿದೇಶಿ ನೇರ ಬಂಡವಾಳ ಹೂಡಿಕೆಗೆ ತಡೆ, ಗುತ್ತಿಗೆ ಕೃಷಿಯ ಮೇಲೆ ಹಿಡಿತ, ಇತ್ಯಾದಿ.

ಇವೆಲ್ಲದರ ಒಟ್ಟು ಅರ್ಥವೇನೆಂದರೆ ವಸಾಹತೋತ್ತರದಲ್ಲಿ ಕೃಷಿಯಲ್ಲಿ ಬಂಡವಾಳಶಾಹಿಯ ಅಭಿವೃದ್ಧಿಯ ಪಥ ಪ್ರತಿರೋಧಕ್ಕೆ ಮತ್ತು ತೀವ್ರತರ ಬಿಕ್ಕಟ್ಟಿಗೆ ಕಾರಣವಾಗುತ್ತಿದೆ. ಈ ಬಿಕ್ಕಟ್ಟಿಗೆ ಮುಕ್ತಾಯವೆಂಬುದಿಲ್ಲ. ಎರಡನೆದಾಗಿ ರೈತ ಜಾತಿಯಿಂದಾಚೆ ಮತ್ತೆ ಮತ್ತೆ ಒಂದು ಸಾಮಾಜಿಕ ಮತ್ತು ಆರ್ಥಿಕ ವರ್ಗವಾಗಿ ಹೊರಹೊಮ್ಮುತ್ತಿದ್ದಾನೆ ಹಾಗೂ ರೈತ ಚಳವಳಿಗಳು ಬಿಕ್ಕಟ್ಟು ತೀವ್ರಗೊಂಡಂತೆ

ಮತ್ತೆ ಮತ್ತೆ ಹುಟ್ಟಿಕೊಳ್ಳುತ್ತವೆ, ರಾಜಕೀಯದಲ್ಲಿ ನಿರ್ಣಾಯಕ ಪಾತ್ರ ವಹಿಸುತ್ತವೆ. ವಾಸ್ತವವಾಗಿ ಈ ಚಳವಳಿಗಳನ್ನು ಮತ್ತೆ ಮತ್ತೆ ಹುಟ್ಟುವ "ನವ ರೈತ ಚಳವಳಿ"ಗಳು ಎಂದರೂ ತಪ್ಪಲ್ಲ.

**೧೯೮೦ರ ದಶಕ ಮತ್ತು ಶಾಸ್ತ್ರೀಯ/ಅಕಾಡೆಮಿಕ್ ಚರ್ಚೆಗಳು**

ವಾಸ್ತವವಾಗಿ ರೈತರ ಕುರಿತಾದ ಐತಿಹಾಸಿಕ ಪೂರ್ವಾಗ್ರಹಗಳನ್ನು ಬದಲಾಯಿಸಿದ್ದು ೧೯೮೦ರ ದಶಕದ ನವ ರೈತರ ಚಳವಳಿ. ಇದು ಆರಂಭಗೊಂಡದ್ದು ಮಹಾರಾಷ್ಟ್ರದಲ್ಲಿ ಶೇತ್ಕಾರಿ ಸಂಘಟನಾದಡಿಯಲ್ಲಿ ಮತ್ತು ಶರದ್ ಜೋಶಿಯ ನಾಯಕತ್ವದಡಿಯಲ್ಲಿ. ಕರ್ನಾಟಕದಲ್ಲಿ, ಆರಂಭದ ದಿನಗಳಲ್ಲಿ ರುದ್ರಪ್ಪ ಮತ್ತು ಸುಂದರೇಶ್‌ರ ನಾಯಕತ್ವದಡಿಯಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ಹೋರಾಟವನ್ನು ಮಾಡಿತ್ತು, ತದನಂತರ ಈ ಹೋರಾಟ ಪ್ರೊ॥ ಎಂ. ಡಿ. ನಂಜುಂಡಸ್ವಾಮಿಯವರ ನಾಯಕತ್ವದಡಿಗೆ ಬಂತು. ಉತ್ತರ ಪ್ರದೇಶದಲ್ಲಿ ಭಾರತೀಯ ಕಿಸಾನ್ ಯೂನಿಯನ್‌ನ ನಾಯಕತ್ವವನ್ನು ಮಹೇಂದ್ರ ಸಿಂಗ್ ಟಿಕಾಯತ್ ವಹಿಸಿಕೊಂಡರು.

ಆದರೆ ವಿಚಿತ್ರವೆಂದರೆ "ನವ ರೈತ ಚಳವಳಿಗಳ" ಬಗ್ಗೆ ಶಾಸ್ತ್ರೀಯ ಚರ್ಚೆಗಳು ಆರಂಭಗೊಂಡದ್ದು ೧೯೯೦ರ ದಶಕದಲ್ಲಿ. ಅಷ್ಟರತನಕ ವಿವಿಧ ಸಾಮಾಜಿಕ ಮಾಧ್ಯಮಗಳಲ್ಲಿ ಮಾತ್ರ ಚರ್ಚೆಗಳಾಗುತ್ತಿದ್ದವು. ಈ ಚರ್ಚೆಗಳಲ್ಲಿ ಹೆಚ್ಚು ಒತ್ತು ಸಿಗುತ್ತಿದ್ದದು ಮಹಾರಾಷ್ಟ್ರ ಮತ್ತು ಉತ್ತರ ಪ್ರದೇಶದ ಟಿಕಾಯತ್‌ರ ಚಳವಳಿಗೆ. ಕರ್ನಾಟಕ, ತಮಿಳುನಾಡು ಇದಕ್ಕೆ ಅಪವಾದಗಳಾಗಿದ್ದವು. ಮಹಾರಾಷ್ಟ್ರ ಚಳವಳಿ ಚರ್ಚೆಯ ಕೇಂದ್ರವಾಗಲು ಅದು ಸೃಷ್ಟಿಸಿದ "ಇಂಡಿಯಾ" ಮತ್ತು "ಭಾರತ್" ಪರಿಕಲ್ಪನೆ. ಅಂದಿನ ಸಂದರ್ಭದಲ್ಲಿ ಆ ಪರಿಕಲ್ಪನೆ ನೂತನ, ಆಕರ್ಷಣೀಯ ಹಾಗೂ ವೈಚಾರಿಕ ಪರಿಕಲ್ಪನೆಯಾಗಿತ್ತು. ಅಲ್ಲದೇ ಅವರ ಚಳವಳಿಗಳಿಗೆ ಮತ್ತು ಬೇಡಿಕೆಗಳಿಗೆ ಒಂದು ಸ್ಪಷ್ಟತೆ ಇತ್ತು. ಇದಕ್ಕೆ ತದ್ವಿರುದ್ಧವಾಗಿದ್ದದು ಉತ್ತರ ಪ್ರದೇಶದ ಚಳವಳಿ. ಅದು ತನ್ನನ್ನು ತಾನು ಗ್ರಾಮೀಣ ಚಳವಳಿ ಎಂದು ವಾದಿಸುತ್ತಾ ಹೋಗಿತ್ತಲ್ಲದೇ ಅದರ ಹೋರಾಟಗಳು ಉತ್ತರ ಪ್ರದೇಶವನ್ನು ದಾಟಿ ದೆಹಲಿಗೂ ತಲುಪಿತ್ತು. ದುರಂತವೆಂದರೆ ಕರ್ನಾಟಕದ ಚಳವಳಿ ೧೯೮೦ರ ದಶಕದ ತನಕ ಕರ್ನಾಟಕಕ್ಕೆ ಮಾತ್ರ ಸೀಮಿತವಾಗಿತ್ತು, ದೆಹಲಿಯ ಕಾರಿಡಾರ್‌ಗಳಲ್ಲಿ ಶಬ್ದಗಳನ್ನು ಮಾಡಲಿಲ್ಲ.

ನವ ರೈತ ಚಳವಳಿಯ ಅಕಾಡೆಮಿಕ್/ಶಾಸ್ತ್ರೀಯ ಚರ್ಚೆಗಳಲ್ಲಿ ಪ್ರಮುಖರೆಂದರೆ, ಟಾಮ್ ಬ್ರಾಸ್, ಟಿ. ಜೆ. ಬ್ಯೆರ್ಸ್, ಧನಗರೆ, ಜೊಯಾ ಹಸನ್, ಮುಜಾಫ್ಫರ್ ಅಸ್ಸಾದಿ, ಜೈರಜ್ ಬನಜಿ, ಸ್ಟೀಫನ್ ಲೆಂಡ್ಬರ್ಗ್ ಇತ್ಯಾದಿಯವರು. ಇವರ ಅಭಿಪ್ರಾಯಗಳು ಏಕರೂಪಿಯಾಗಿರಲಿಲ್ಲ. ಕೆಲವರ ಪ್ರಕಾರ ನವ ರೈತ ಚಳವಳಿ ಎನ್ನುವ ಪರಿಕಲ್ಪನೆಯೇ ತಪ್ಪು. ಯಾಕೆಂದರೆ ಅದು ಹೊಸ ಚಳುವಳಿಯಲ್ಲ, ಬದಲಾಗಿ ವಸಾಹತುಶಾಹಿ ಕಾಲದ ಗಾಂಧಿ ಚಳವಳಿಯ ಒಂದು ವಿಸ್ತೃತ ಭಾಗ. ಕೆಲವರು ಅದನ್ನು "ಶ್ರೀಮಂತರ ಚಳವಳಿ", ಇನ್ನು



ಕೆಲವರು ಅದನ್ನು ಮಧ್ಯಮ ವರ್ಗದ ರೈತರ ಚಳವಳಿ ಎಂದರು. ಅಥವಾ ಪ್ರತಿಗಾಮಿ ಕುಲಕ್ ಚಳವಳಿ ಎಂದರು. ಆದರೆ ಅವರಲ್ಲಿ ಎಲ್ಲರೂ ಸಾಮಾನ್ಯವಾಗಿ ಒಪ್ಪಿಕೊಳ್ಳುವ ಕೆಲವು ಅಭಿಪ್ರಾಯಗಳಿದ್ದವು. ಅವುಗಳಲ್ಲಿ ಪ್ರಮುಖವಾದ ಅಂಶವೆಂದರೆ – ಇವು ಕಮ್ಯುನಿಸ್ಟರ ತರಹ ತೀವ್ರತರ ಕ್ರಾಂತಿಕಾರಿ ಹೋರಾಟಗಳಲ್ಲ, ಅವುಗಳು ಬರೇ ಸಂಪ್ರದಾಯ ಮತ್ತು ಜಾತಿಗೆ ಜೋತುಬೀಳದೆ ಎಲ್ಲಾ ರೈತರನ್ನು ಒಳಗೊಂಡ ರೈತ ಹೋರಾಟಗಳಾಗಿವೆ, ಇವುಗಳು ವರ್ಗ ಹೋರಾಟಗಳು ಕೂಡ ಹೌದು. ಅವುಗಳ ಹೋರಾಟದ ಸ್ತರಗಳು ಸ್ಥಾನೀಯದಿಂದ ಅಂತರರಾಷ್ಟ್ರೀಯದವರೆಗೆ ಹರಡಿವೆ. ಅಲ್ಲದೇ ಇವುಗಳು ಹಳೆಯ ರೈತ ಹೋರಾಟಗಳಿಗಿಂತ ವಿಭಿನ್ನ. ಹಳೆಯ ಹೋರಾಟಗಳು ಊಳಿಗಮಾನ್ಯ, ಜಮೀನ್ದಾರಿ, ಗೇಣಿ ಇತ್ಯಾದಿಗಳ ವಿರುದ್ಧವಾಗಿದ್ದರೆ ನವ ರೈತ ಚಳವಳಿಗಳಿಗೆ ದೇಶೀಯ/ಅಂತರರಾಷ್ಟ್ರೀಯ ಮಾರುಕಟ್ಟೆಯಿಂದಾಗುವ ಶೋಷಣೆ, ಬೆಂಬಲ ಬೆಲೆಗಳು ಕುರಿತಾಗಿದೆ. ನವ ಹೋರಾಟಗಳಿಗೆ ಪ್ರಜಾಪ್ರಭುತ್ವದೊಳಗೆ ರೈತರ ಅಸ್ಮಿತೆ ಬಹಳ ಮುಖ್ಯವಾಗುತ್ತದೆ.

ವಸಾಹತುಶಾಹಿ ಕಾಲದಿಂದ ಇತ್ತೀಚಿನ ತನಕದ ವಿಭಿನ್ನ ರೈತ ಹೋರಾಟಗಳನ್ನು ಗಮನಿಸಿದರೆ ಇವುಗಳ ನಡುವಿನ ವ್ಯತ್ಯಾಸಗಳನ್ನು ಗುರುತಿಸಬಹುದು. ವಾಸ್ತವವಾಗಿ ರೈತ ಹೋರಾಟಗಳನ್ನು ಪಟ್ಟಿ ಮಾಡುವ ಸಂದರ್ಭದಲ್ಲಿ ಒಂದು ಗೊಂದಲವಿದೆ. ಆ ಗೊಂದಲವಿರುವುದು ರೈತ ಮತ್ತು ಆದಿವಾಸಿಗಳ ನಡುವಿರುವ ಸಾಮ್ಯತೆ ಮತ್ತು ವ್ಯತ್ಯಾಸದಲ್ಲಿ ಆದಿವಾಸಿಗಳು ರೈತರೇ? ಎಂಬ ಜಿಜ್ಞಾಸೆ ನಡುವೆ ಈ ಗೊಂದಲವಿದೆ. ಪ್ರಮುಖ ಸಮಾಜಶಾಸ್ತ್ರಜ್ಞ ಎ. ಆರ್. ದೇಸಾಯಿ ಈ ಸಮಸ್ಯೆಯನ್ನು ಪರಿಹರಿಸುತ್ತಾರೆ. ಅವರ ಪ್ರಕಾರ ಆದಿವಾಸಿ ಮತ್ತು ರೈತರ ನಡುವೆ ಒಂದು ಸಾಮ್ಯತೆ ಇದೆ. ಅದು ಕೃಷಿ ಅಥವಾ ಭೂಮಿಯ ಸಂಬಂಧ. ಅವರಿಬ್ಬರಿಗೂ ಭೂಮಿ ಒಂದು ಅಸ್ಮಿತೆಯ, ಗುರುತಿನ ಸಂಕೇತ. ಅವರಿಬ್ಬರೂ ಶೋಷಣೆಗೊಳಗಾಗುವುದು ಭೂಮಿಗೆ ಸಂಬಂಧಿಸಿದ ವಿಷಯಗಳ ಮುಖಾಂತರ. ಅಲ್ಲದೇ ಅವರಿಬ್ಬರನ್ನು ಶೋಷಿಸುವ ವರ್ಗಗಳೂ ಕೂಡ ಭೂಮಾಲೀಕರು, ಜಮೀನ್ದಾರರು, ಲೇವಾದೇವಿದಾರರು ಮತ್ತು ಇತ್ತೀಚಿನ ದಿನಗಳಲ್ಲಿ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಬಂಡವಾಳಶಾಹಿ. ಇತಿಹಾಸದಲ್ಲಿ ನಡೆದ ಆದಿವಾಸಿ ಹೋರಾಟಗಳನ್ನು ಗಮನಿಸಿ. ೧೭೭೪–೯೧ರ ನಡುವಿನ ಚಕ್ಮಾ ಹೋರಾಟ, ೧೭೯೫ರ ಬೊಪಾಲ್ಪಟ್ಟಮ್ ಹೋರಾಟ, ೧೮೫೭ರ ಭಿಲ್ ಮತ್ತು ಹಲಗಲಿಯ ಬೇಡರ ಹೋರಾಟ, ೧೮೧೦ರ ಮುಂಡಾ ಹೋರಾಟ, ೧೮೩೬, ೧೮೬೦ರ ಖೋಂಡ್ ಹೋರಾಟ, ೧೮೮೫ರಲ್ಲಿ ಸಂತಾಲರ ದಂಗೆ, ೧೮೭೯ರ ಖೋಲಿ ದಂಗೆ, ೧೯೨೨–೨೪ರಲ್ಲಿ ರಂಪ ದಂಗೆ, ೧೯೧೭–೧೯ ಖುಕಿ ದಂಗೆ. ಇವುಗಳು ಸ್ವಾತಂತ್ರ್ಯದ ಪೂರ್ವದ ಹೋರಾಟಗಳು ಮತ್ತು ದಂಗೆಗಳು; ಸ್ವಾತಂತ್ರ್ಯ ನಂತರದಲ್ಲೂ ಸಾಕಷ್ಟು ದಂಗೆ ಅಥವಾ ಹೋರಾಟಗಳು ದಾಖಲಾಗುತ್ತವೆ. ಅವುಗಳಲ್ಲಿ ಕೇರಳದ ಕಣ್ಣೂರಿನ ೧೯೯೦ರ ಆದಿವಾಸಿಗಳ ಭೂ ಹೋರಾಟ, ೨೦೦೧ರಲ್ಲಿ ಮಾತುಂಗ ಆದಿವಾಸಿಗಳ ಭೂ ಹೋರಾಟ, ೨೦೦೭ರಲ್ಲಿ ನಡೆದ ಚೆನ್ನಗಾರ ಆದಿವಾಸಿಗಳ ಹೋರಾಟ, ಕರ್ನಾಟಕದಲ್ಲಿ ೧೯೯೦ರ ದಶಕದಲ್ಲಿ ನಡೆದ ನಾಗರಹೊಳೆ ಆದಿವಾಸಿಗಳ ಸಾಂಪ್ರದಾಯಿಕ ಹಕ್ಕಿನ ಕುರಿತಾದ ಹೋರಾಟ, ೨೦೧೭–೧೮ ಕೊಡಗಿನ ದಿಡ್ಡಳ್ಳಿ ಪುನರ್ವಸತಿಗಾಗಿ ನಡೆದ ಹೋರಾಟ, ೨೦೧೮–೧೯ರಲ್ಲಿ ಮೈಸೂರಿನ ಡಿ. ಬಿ. ಕುಪ್ಪೆಯಲ್ಲಿ ಅಸ್ಸಾದಿ ಸಮಿತಿಯ ಶಿಫಾರಸ್ಸು ಮತ್ತು ಅರಣ್ಯ ಕಾಯಿದೆಯ ಅನುಷ್ಠಾನಕ್ಕೆ ನಡೆದ ಹೋರಾಟ, ಇತ್ಯಾದಿ. ಪಟ್ಟಿ ಬಹಳ ದೊಡ್ಡದಿದೆ.

ಈ ಎಲ್ಲಾ ದಂಗೆ ಅಥವಾ ಹೋರಾಟಗಳಲ್ಲಿ ಭೂಮಿ ಪ್ರಶ್ನೆ ಮಾತ್ರವಲ್ಲದೇ ಅದರೊಂದಿಗೆ ಸೇರಿರುವ ಶೋಷಣೆ ಪ್ರಮುಖ ವಿಷಯವಾಗುತ್ತದೆ.

ರೈತ ಹೋರಾಟಗಳೇನೂ ಇದರಿಂದ ವಿಭಿನ್ನವಾಗಿರಲಿಲ್ಲ. ಇತಿಹಾಸದಲ್ಲಿ ರೈತ ಹೋರಾಟದ ದೊಡ್ಡ ಪಟ್ಟಿಯೇ ಇದೆ: ೧೮೦೦ರಲ್ಲಿ ಮಂಗಳೂರಿನ ಸರಕಾರಿ ಗೇಣಿ ವಿರುದ್ಧದ ಅಸಹಕಾರ ಹೋರಾಟ, ೧೮೭೯ರ ಅಮರ ಸುಳ್ಯ ದಂಗೆ, ೧೮೧೪ರ ವಾರಣಾಸಿ ಪಕ್ಕದ ರಾಜಪೂತ ರೈತರ ಭೂ ಹೋರಾಟ, ೧೮೧೭ರಲ್ಲಿ ಊಳಿಗಮಾನ್ಯ ಒಡೆಯರ ತೆರಿಗೆ ವಿರುದ್ಧದ ಹೋರಾಟ, ೧೮೭೬ರಿಂದ ೧೮೭೯ರತನಕ ಪೂನ ಪ್ರಾಂತ್ಯದಲ್ಲಿ ರೈತರ ಆದಾಯದ ಕುರಿತಾದ ಹೋರಾಟ, ೧೮೩೦–೩೩ರತನಕ ಶಿವಮೊಗ್ಗ ಜಿಲ್ಲೆಯ

“ನಗರ”ದಲ್ಲಿ “ಷರತ್”ವ್ಯವಸ್ಥೆ ವಿರುದ್ಧ ನಡೆದ ರೈತರ ದಂಗೆ, ೧೮೩೫ರಲ್ಲಿ ಮದ್ರಾಸ್ ಪ್ರೆಸಿಡೆನ್ಸಿಯ ಗುನ್ಸುರ್‌ನ ರೈತರ ಹೋರಾಟ, ೧೮೪೪ರಲ್ಲಿ ಕೊಲ್ಲಾಪುರದ ರೈತರ ಹೋರಾಟ, ೧೮೪೬–೪೭ರಲ್ಲಿ ಕರ್ನಾಲ್ ರೈತರ ದಂಗೆ, ೧೮೪೭ರಲ್ಲಿ ನಾಗಪುರದ ರೈತರ ದಂಗೆ, ೧೮೫೯ರಲ್ಲಿ ಬಂಗಾಲದ ನೀಲಿ ಬೆಳೆಗಾರರ ಹೋರಾಟ, ೧೮೮೯–೯೦ರ ಬಂಗಾಳದ ಪಬ್ನಾದಲ್ಲಿ ನಡೆದ ಜಮೀನುದಾರಿ ವಿರೋಧಿ ಹೋರಾಟ, ೧೯೨೦ರಲ್ಲಿ ನಡೆದ ಮಾಪಿಳ್ಳ ದಂಗೆ, ೧೯೨೧ರಲ್ಲಿ ಉತ್ತರ ಪ್ರದೇಶದ ಹರ್ದೋಯಿ, ಬರೇಚ್ ಹಾಗೂ ಸೀತಾಪುರ ಹೋರಾಟಗಳು ಮುಖ್ಯ. ವಾಸ್ತವವಾಗಿ ಈ ಕಾಲಘಟ್ಟದಲ್ಲಿ ದಂಗೆ, ಹೋರಾಟ ಇತ್ಯಾದಿಗಳ ಪರಿಕಲ್ಪನೆಗಳಲ್ಲಿ ಯಾವುದೇ ವ್ಯತ್ಯಾಸವಿರಲಿಲ್ಲ, ಒಂದೆರಡು ಹೋರಾಟಗಳನ್ನು ಬಿಟ್ಟರೆ ಉಳಿದ ಹೋರಾಟಗಳು ಲೇವಾದೇವಿದಾರರ, ಜಮೀನ್ದಾರರ, ಮಧ್ಯವರ್ತಿಗಳ ವಿರುದ್ಧವಾಗಿತ್ತು. ಇವುಗಳು ಅಂತಿಮವಾಗಿ ವಸಾಹತು ವಿರೋಧಿ ಹೋರಾಟಗಳು ಆಗಿದ್ದವು.

ವಿಚಿತ್ರವೆಂದರೆ ಗಾಂಧಿ ರಾಷ್ಟ್ರೀಯ ಹೋರಾಟದ ನಾಯಕತ್ವ ತೆಗೆದುಕೊಂಡ ಮೇಲೆ ರೈತ ಹೋರಾಟಗಳಿಗೆ ಒಂದು ವಿಭಿನ್ನವಾದ ಆಯಾಮ ದೊರೆಯಿತು. ಅದು ಸತ್ಯಾಗ್ರಹದ ಮತ್ತು ಅಹಿಂಸೆಯ ರೂಪವನ್ನು ಪಡೆಯಿತು, ರೈತ ಹೋರಾಟಗಳು ರಾಷ್ಟ್ರೀಯ ಹೋರಾಟದ ಭಾಗಗಳಾದವು. ವಾಸ್ತವವಾಗಿ ಗಾಂಧಿ ಮೂರು ಬಹುಮುಖ್ಯ ಹೋರಾಟಗಳನ್ನು ನಡೆಸಿದರು: ಚಂಪಾರಣ್, ಬಾರ್ಡೋಲಿ ಮತ್ತು ಖೇಡಾ. ಇಲ್ಲಿ ಇದ್ದಂತಹ ಪ್ರಮುಖ ವಿಷಯಗಳೆಂದರೆ ಗೇಣಿಯನ್ನು ಕಡಿಮೆ ಮಾಡುವುದು ಅಥವಾ ಮಾಫಿ ಮಾಡುವುದು. ಗಾಂಧಿ ಈ ಹೋರಾಟದ ಮೂಲಕ ರೈತರನ್ನು ರಾಷ್ಟ್ರೀಯ ಹೋರಾಟದ ಪಾಲುದಾರರನ್ನಾಗಿಸಿದರು. ಅಲ್ಲದೇ ಇಲ್ಲೊಂದು ಇನ್ನೊಂದು ರಾಜಕಾರಣವೂ ಇತ್ತು – ರೈತರು ಒಳಗೊಂಡರೆ ರಾಷ್ಟ್ರೀಯ ಹೋರಾಟ ಶಕ್ತಿಶಾಲಿಯಾಗುತ್ತದೆ ಎಂಬ ವಾದವನ್ನು ತೇಲಿ ಬಿಡಲಾಗಿತ್ತು. ಇದು ಗಾಂಧಿಗೂ ತಿಳಿದಿತ್ತು – ರೈತರನ್ನು ಸ್ವತಂತ್ರವಾಗಿ ಹೋರಾಡಲು ಅವಕಾಶ ಮಾಡಿಕೊಟ್ಟರೆ ರಾಷ್ಟ್ರೀಯ ಹೋರಾಟ ಬಡಕಲು ಆಗುವ ಸಾಧ್ಯತೆಯನ್ನು ಗಾಂಧಿ ಮನಗಂಡಿದ್ದರು. ಆದಕಾರಣ ಗಾಂಧಿ ಒಬ್ಬ ರೈತರ ಏಜೆನ್ಸಿಯಾಗಿ, ಅವರ ನಿಯೋಗಿಯಾಗಿ ಧ್ವನಿಯಾದರು. ಈ ಸಂದರ್ಭದಲ್ಲಿ ಇನ್ನೊಂದು ಪರಿಕಲ್ಪನೆ ಕೆಲಸ ಮಾಡುತ್ತಿತ್ತು. ರೈತರಿಗೆ ಸ್ವಂತಂತ್ರವಾಗಿ ಧ್ವನಿ ಎತ್ತುವ ಶಕ್ತಿ ಇಲ್ಲದಿರುವುದರಿಂದ ಅವರಿಗೆ ಗಾಂಧಿ ನಿಯೋಜಕರಾಗುವುದು ಅಥವಾ ಏಜೆನ್ಸಿ ಆಗುವುದು ಅನಿವಾರ್ಯವಾಗಿತ್ತು. ದುರಂತವೆಂದರೆ ರಾಷ್ಟ್ರೀಯ ಹೋರಾಟ ರೈತರ ಬಗ್ಗೆ ನಿಜವಾದ ಕಾಳಜಿ ವ್ಯಕ್ತಪಡಿಸಲು ಆರಂಭ ಮಾಡಿದ್ದು ೧೯೩೦ರ ದಶಕದ ನಂತರವೇ. ವಾಸ್ತವವಾಗಿ ರಾಷ್ಟ್ರೀಯ ಹೋರಾಟದ ಅಂಶವಾದ ಅಸಹಕಾರ ಚಳವಳಿಯ ತಕ್ಷಣದ ಪರಿಣಾಮವೇನೆಂದರೆ ರೈತರೂ ಕೂಡ ಗೇಣಿ ಮತ್ತು ತೆರಿಗೆಗಳನ್ನು ನಿರಾಕರಿಸಿದ್ದು. ಇದರರ್ಥ ರೈತರು ರಾಷ್ಟ್ರೀಯ ಹೋರಾಟದ ಭಾಗಿಗಳಾಗಿದ್ದರು ಎಂಬುದು ವಾಸ್ತವ. ಇದಕ್ಕೆ ಸಾಕ್ಷಿ ಎಂಬಂತೆ ಮಹಾರಾಷ್ಟ್ರದಲ್ಲಿ ೧೯೨೭ರಲ್ಲಿ ನಡೆದ ಮುಲ್ಶಿ ಹೋರಾಟ. ೧೯೨೮ರಲ್ಲಿ ನಡೆದ ಬಾರ್ಡೋಲಿ ಸತ್ಯಾಗ್ರಹ ಇದೇ ಕಾರಣಕ್ಕೆ ಮಹತ್ವ ಎನಿಸುತ್ತದೆ. ರಾಷ್ಟ್ರೀಯ ಹೋರಾಟದಡಿಯಲ್ಲಿ ನಡೆದ ಔದು ಮತ್ತು ಲಗಾನ್ ಹೋರಾಟಗಳು ಕೂಡ ಅಷ್ಟೇ ಮಹತ್ವದ್ದು. ಇವೆಲ್ಲವೂ ವಸಾಹತುಶಾಹಿ ಗೇಣಿಯ ಪ್ರಮಾಣದ ವಿರುದ್ಧ, ತೆರಿಗೆಗಳ ವಿರುದ್ಧ ಹುಟ್ಟಿಕೊಂಡ ಹೋರಾಟಗಳು.

ಇವುಗಳ ನಡುವೆ ೧೯೨೧–೨೨ರಲ್ಲಿ ನಡೆದ ಕೆಳಜಾತಿ ರೈತರ ಹೋರಾಟವನ್ನು ಗಮನಿಸಬೇಕು. ೧೯೨೧ರಲ್ಲಿ ಉತ್ತರ ಪ್ರದೇಶದ ಹರ್ದೋಯಿ, ಬರ್‍ರೈಚ್, ಸೀತಾಪುರದಲ್ಲಿ ನಡೆದ ಏಕ ಹೋರಾಟ ಇಲ್ಲಿ ಪ್ರಮುಖ ವಿಷಯ. ಟೇಕೆದಾರರಿಂದ ಶೋಷಣೆ, ಗೇಣಿ, ಒಕ್ಕಲೆಬ್ಬಿಸುವುದು ಇತ್ಯಾದಿ ಇಲ್ಲಿನ ಪ್ರಮುಖ ವಿಷಯಗಳಾಗಿದ್ದವು.

ಇವುಗಳ ನಡುವೆ ೧೯೨೨ರಲ್ಲಿ ಅಂಬೇಡ್ಕರ್ ನೇತೃತ್ವದಡಿಯಲ್ಲಿ ಮಹಾರಾಷ್ಟ್ರದ ಕೊಂಕಣ ಪ್ರಾಂತ್ಯದಲ್ಲಿ ನಡೆದ ಗೇಣಿದಾರರ ಹೋರಾಟವನ್ನು ಮರೆತುಬಿಡುತ್ತೇವೆ. ಇದನ್ನು ಪ್ರಜ್ಞಾಪೂರ್ವಕ ವಿಸ್ಮೃತಿ ಎನ್ನಬಹುದು. ಇತಿಹಾಸದಲ್ಲಿ ಇದನ್ನು ಖೋತಿ ಹೋರಾಟವೆಂದು ಕರೆಯಲಾಗುತ್ತದೆ. ಈ ಹೋರಾಟದ ಮೂಲ ಪುರುಷ ಕೇಶವರಾವ್ ಬಂಡಾರಿ ಭೋಲೆ ಎನ್ನುವ ಸತ್ಯಶೋಧಕ ಸಂಘದ ಸದಸ್ಯ. ಖೋತಿ ವ್ಯವಸ್ಥೆಯಲ್ಲಿ ಗೇಣಿದಾರರು ಸರಕಾರ ನಿಗದಿಪಡಿಸಿದ ಗೇಣಿಗಿಂತ ನಾಲ್ಕು ದುಪ್ಪಟ್ಟು ಗೇಣಿಯನ್ನು ಖೋತಿದಾರರಿಗೆ ನೀಡಬೇಕಿತ್ತು. ಇದರಲ್ಲಿ ಖೋತಿದಾರರು ಬ್ರಾಹ್ಮಣರು, ಮರಾಠರು ಜಾತಿಯಿಂದ ಬಂದಿದ್ದರು, ಕೆಳ ಮತ್ತು ಹಿಂದುಳಿದ ಜಾತಿಯ ಕುನ್ಬಿಗಳು, ಮಹಾರರು, ಭಂಡಾರಿಗಳು, ಗೇಣಿದಾರರು ಆಗಿದ್ದರು. ಈ ರೀತಿಯ ಶೋಷಣೆಯನ್ನು ವಿರೋಧಿಸಿ ಅಂಬೇಡ್ಕರ್ ಬಾಂಬೆ ಶಾಸಕಾಂಗದ ಪರಿಷತ್ತಿನಲ್ಲಿ ಮಸೂದೆಯೊಂದನ್ನು ಮಂಡಿಸಿದ್ದರು. ವಿಚಿತ್ರವೆಂದರೆ ಇದನ್ನು ವಿರೋಧಿಸಿದವರು ಬಾಲ ಗಂಗಾಧರ ತಿಲಕ್. ಅದೇ ಸುಮಾರಿಗೆ ಉತ್ತರ ಪ್ರದೇಶದಲ್ಲಿ ಕಾಂಗ್ರೆಸ್ ಪ್ರೇರಿತ ಹೋರಾಟಗಳು ನಡೆದವು. ದುರಂತವೆಂದರೆ ರಾಷ್ಟ್ರೀಯ ಹೋರಾಟ ಭೂಸುಧಾರಣೆಯನ್ನು ತನ್ನ ರಾಜಕಾರಣದ ಅಜೆಂಡವಾಗಿ ತೆಗೆದುಕೊಂಡದ್ದು ಫೈಜ್‌ಪುರ್ ಅಧಿವೇಶನದಲ್ಲಿ, ೧೯೩೬ರಲ್ಲಿ. ಅದರ ಒಂದು ವರುಷದ ಮೊದಲು ಕರಾಚಿ ಅಧಿವೇಶನದಲ್ಲಿ ಕೈಗಾರಿಕೆಗಳ ರಾಷ್ಟ್ರೀಕರಣ ಮತ್ತು ಸಮಾಜವಾದದ ವಿಷಯಗಳು ಚರ್ಚಿತವಾದವು. ರೈತರ ಬಗ್ಗೆ ರಾಷ್ಟ್ರೀಯ ಹೋರಾಟಕ್ಕೆ / ಕಾಂಗ್ರೆಸಿಗೆ ತೀವ್ರತರವಾದ ಕಾಳಜಿಗಳು ಇರಲಿಲ್ಲ, ವಾಸ್ತವವಾಗಿ ೧೯೩೬ರ ಮೊದಲು ಸಮಗ್ರ ಭೂಸುಧಾರಣೆ ಬಗ್ಗೆ ರಾಷ್ಟ್ರೀಯ ಹೋರಾಟದಲ್ಲಿ ಚರ್ಚೆಯಾಗಲಿಲ್ಲ. ಇದಕ್ಕೆ ಒಂದು ಕಾರಣವಿತ್ತು. ರಾಷ್ಟ್ರೀಯ ಹೋರಾಟ ಭೂ ಮಾಲೀಕರ ಪ್ರಭಾವಕ್ಕೆ ಒಳಗಾಗಿತ್ತು. ಆದರೆ ದೊಡ್ಡ ದೊಡ್ಡ ಜಮೀನ್ದಾರರು ವಸಾಹತುಶಾಹಿ ಪರವಾಗಿದ್ದ ಕಾರಣ ಭೂ ಸಮಸ್ಯೆಯನ್ನು ಎತ್ತಿಕೊಳ್ಳುವುದು ಅನಿವಾರ್ಯವಾಗಿತ್ತು. ಫೈಜ್‌ಪುರ್ ಅಧಿವೇಶನದಲ್ಲಿ ಒಂದು ಸಮಗ್ರವಾದ ಭೂ ಸಂಬಂಧಿ ೧೩ ವಿಷಯಗಳ ಪಟ್ಟಿ ಮಂಡನೆಯಾಗಿತ್ತು. ಅವುಗಳಲ್ಲಿ ಬಹು ಮುಖ್ಯವೆನಿಸುವುದು – ಗೇಣಿಯಲ್ಲಿ ಕಡಿತ, ಆರ್ಥಿಕವಲ್ಲದ ಕೃಷಿಗೆ ಗೇಣಿಯಿಂದ ಮಾಫಿ, ಕೃಷಿ ಮೇಲೆ ಆದಾಯ ತೆರಿಗೆ ಕಡಿತ, ಕಾಲುವೆ ನೀರಾವರಿ ಮೇಲಿನ ತೆರಿಗೆಯನ್ನು ಕಡಿತಗೊಳಿಸುವುದು, ಗೇಣಿ ಹೊರತಾಗಿ ಉಳಿದ ಊಳಿಗಮಾನ್ಯ ತೆರಿಗೆಗಳನ್ನು ನಿಲ್ಲಿಸುವುದು, ಗೇಣಿದಾರಿಕೆಗೆ ಸ್ಥಿರತೆ, ಮರುಪಾವತಿಗಾಗಿ ಅಸಾಧ್ಯವಾದಾಗ ಸಾಲ ಮನ್ನಾ, ರೈತರಿಗೆ ಗೋಮಾಳ ಭೂಮಿ ನೀಡಿಕೆ, ಕೃಷಿ ಕಾರ್ಮಿಕರಿಗೆ ಬದುಕಲು ಬೇಕಾದ ವೇತನ, ಇತ್ಯಾದಿ.

ವಿಚಿತ್ರವೆಂದರೆ ರಾಷ್ಟ್ರೀಯ ಹೋರಾಟ ಆದಿವಾಸಿಗಳ ಬಗ್ಗೆ, ೧೯೨೭–೩೦ರ ದಶಕದಲ್ಲಿ ನಾಸಿಕ್, ಸಾತಾರ, ಅಹ್ಮದ್ ನಗರ, ಉತ್ತರ ಕನ್ನಡದಲ್ಲಿ ನಡೆದ ಅರಣ್ಯ ಸತ್ಯಾಗ್ರಹ/ ಹೋರಾಟಗಳನ್ನು ಹೊರತುಪಡಿಸಿದರೆ, ಹೆಚ್ಚು ಗಮನ ನೀಡಲಿಲ್ಲ. ಬಹುಶಃ ರಾಷ್ಟ್ರೀಯ ಹೋರಾಟದಲ್ಲಿ ಆದಿವಾಸಿಗಳ ಸಂಖ್ಯೆ ಗಣನೀಯವಾಗಿ ಕಡಿಮೆ ಇದ್ದ ಕಾರಣ ಮತ್ತು



ಅವರು ಶಕ್ತಿಶಾಲಿ ವರ್ಗವಾಗದೇ ಇದ್ದ ಕಾರಣ ರಾಷ್ಟ್ರೀಯ ಹೋರಾಟ ಅವರ ಪರವಾಗಿ ನಿಲ್ಲಲಿಲ್ಲ.

ಈ ರೈತರ–ರಾಷ್ಟ್ರೀಯ ಹೋರಾಟಗಳ ನಡುವೆ ಕಮ್ಯುನಿಸ್ಟರ ಹಾಗೂ ಸಮಾಜವಾದಿಗಳ ನೇತೃತ್ವದಲ್ಲಿ ನಡೆದ ಹೋರಾಟಗಳನ್ನು ಗಮನಿಸಬೇಕು. ರಾಷ್ಟ್ರೀಯ ಹೋರಾಟದಿಂದ ಬೇಸತ್ತು ಹುಟ್ಟಿಕೊಂಡದ್ದು ಎಡಪಂಥೀಯ ರೈತ ಹೋರಾಟಗಳು. ಇದಕ್ಕೆ ಅನ್ವಯವಾಗುವಂತೆ ಹುಟ್ಟಿಕೊಂಡದ್ದು ಅಖಿಲ ಭಾರತ ಕಿಸಾನ್ ಸಭಾ. ಆರಂಭದಲ್ಲಿ ರಾಷ್ಟ್ರೀಯ ಹೋರಾಟದ ಭಾಗವಾಗಿದ್ದ ಕಿಸಾನ್ ಸಭಾ ೧೯೩೬ರ ನಂತರ ಕಮ್ಯುನಿಸ್ಟರ ಪಾಲಾಯಿತು. ಕಮ್ಯುನಿಸ್ಟರ ನೇತೃತ್ವದಡಿಯಲ್ಲಿ ನಡೆದ ಹೋರಾಟಗಳೆಂದರೆ ತೇಭಾಗ, ಬಖ್ಶತ್, ತಂಕಾ, ಆರ್ಧಾ, ಮುಜಾ, ಪುನ್ನಪ್ರ ವಯಲಾರ್, ವರ್ಲಿ, ಸುರ್ಮ ವ್ಯಾಲಿ ಹೋರಾಟಗಳು. ಇವುಗಳಲ್ಲಿ ೧೯೪೬–೫೧ರತನಕ ನಡೆದ ತೆಲಂಗಾಣ ಹೋರಾಟ ಒಂದು ಇತಿಹಾಸವೇ. ಇವರ ಹೋರಾಟಗಳು ಬಹು ಮುಖ್ಯವಾಗಿ ಊಳಿಗಮಾನ್ಯ ಮತ್ತು ಜಮೀನ್ದಾರರ ದೌರ್ಜನ್ಯ, ಲೇವಾದೇವಿದಾರರ ಶೋಷಣೆ, ಗೇಣಿ ಪದ್ಧತಿ ವಿರುದ್ಧ ಕೇಂದ್ರೀಕೃತವಾಗಿದ್ದವು. ಇದೇ ಸುಮಾರಿಗೆ ಭೂಮಿಯ ರಾಷ್ಟ್ರೀಕರಣ, ಗೇಣಿ ಪದ್ಧತಿಯ ರದ್ದತಿ, ಮಧ್ಯಮ ಹಂತದ ಗೇಣಿ ಪದ್ಧತಿಯ ರದ್ದತಿ, ಕೃಷಿ ಕಾರ್ಮಿಕರು ಮತ್ತು ಬಡವರಿಗೆ ಭೂ ಹಂಚಿಕೆ ಇತ್ಯಾದಿ ಪ್ರಶ್ನೆಗಳನ್ನು ಕೂಡ ಅವು ಎತ್ತಿಕೊಂಡಿದ್ದವು. ಇದರ ನಡುವೆ ಸ್ವಾತಂತ್ರ್ಯದ ನಂತರ ಕರ್ನಾಟಕದಲ್ಲಿ ನಡೆದ ಗೇಣಿ ವಿರುದ್ಧ ನಡೆದ ಹೋರಾಟವನ್ನು ಗಮನಿಸಬೇಕು. ಅದರಲ್ಲಿ ಬಹಳ ಮುಖ್ಯವಾಗುವುದು ೧೯೬೦ರ ದಶಕದ ಕೊನೆಯಲ್ಲಿ ನಡೆದ ಬಂಟ್ವಾಳ ರೈತರ ಹೋರಾಟ, ನಂತರ ಸಮಾಜವಾದಿಗಳ ನೇತೃತ್ವದಲ್ಲಿ, ಕಾಂಗ್ರೆಸ್ ಪ್ರೇರಿತ ಕಿಸಾನ್ ಸಭಾದಡಿಯಲ್ಲಿ ಸಾಕಷ್ಟು ರೈತ ಹೋರಾಟಗಳು ನಡೆದಿವೆ. ಇದಕ್ಕೆ ೧೯೨೦ರ ದಶಕದಲ್ಲಿ ನಡೆದ ಅವಧ್ ಪ್ರಾಂತ್ಯದ ಸುಲ್ತಾನ್‌ಪುರ್, ಬರೇಲಿ, ಫೈಜಾಬಾದಗಳ ರೈತ ಹೋರಾಟಗಳೇ ಸಾಕ್ಷಿ. ಈ ಹೋರಾಟಗಳಲ್ಲಿ ಗೇಣಿ ಮಾಫಿ ಬಹಳ ಮುಖ್ಯ ವಿಷಯವಾಗಿತ್ತು.

ಬಹುಶಃ ಎಲ್ಲರಿಗಿಂತ ಮೊದಲು ರೈತರ ಬೆಳೆಗಳಿಗೆ ವೈಜ್ಞಾನಿಕ ಬೆಲೆ ಮತ್ತು ಭೂ ಸುಧಾರಣೆಯ ಅಗತ್ಯತೆಯನ್ನು ಎತ್ತಿ ಹಿಡಿದವರು ಸಮಾಜವಾದಿಗಳು. ೧೯೩೦ರ ಸುಮಾರಿಗೆ ಇದನ್ನು ತಮ್ಮ ಪಕ್ಷದ ಪ್ರಣಾಳಿಕೆ ವಿಷಯವನ್ನಾಗಿಸಿದರು. ಸಮಾಜವಾದಿ ಹೋರಾಟಗಳಿಗೆ ಒಂದು ಉತ್ತಮ ನಿದರ್ಶನವೆಂದರೆ ೧೯೫೧ರಲ್ಲಿ ಕರ್ನಾಟಕದ ಕಾಗೋಡು ಸತ್ಯಾಗ್ರಹ.

ಈ ಎಲ್ಲಾ ಹೋರಾಟಗಳು ವ್ಯವಸ್ಥೆಯಲ್ಲಿ ಸಾಕಷ್ಟು ಬದಲಾವಣೆಗಳನ್ನು ತಂದವು. ತೆಲಂಗಾಣ ಹೋರಾಟವನ್ನು ತಣ್ಣಗಾಗಿಸಲು ವಿನೋಬಾ ಭಾವೆ ಗ್ರಾಮದಾನ್ ಕಾರ್ಯಕ್ರಮವನ್ನು ಹಮ್ಮಿಕೊಂಡರು. ದೇಶದಾದ್ಯಂತ ಭೂ ಮಸೂದೆ ಜಾರಿಗೆ ಬಂತು. ಆದರೆ ಅದು ಏಕರೂಪಿಯಾಗಿ ಜಾರಿಯಾಗಲಿಲ್ಲ. ಕೆಲವು ರಾಜ್ಯಗಳಲ್ಲಿ ಅದು ಊಳಿಗಮಾನ್ಯವನ್ನು ಜೀವಂತವಾಗಿಡಿಸಿತ್ತು. ಕೆಲವು ಕಡೆ ಕಾನೂನು ಸೋತುಹೋಯಿತು. ಅದೇನೇ ಇದ್ದರೂ ಭೂಮಸೂದೆಗಳು ಗೇಣಿದಾರರಿಗೆ ಊಳಿಗಮಾನ್ಯದಿಂದ ಬಿಡುಗಡೆಗೊಳಿಸಿತ್ತೇ ಹೊರತು ಶಕ್ತಿಶಾಲಿ ಶ್ರೀಮಂತ ರೈತರನ್ನಾಗಿಸಲಿಲ್ಲ. ಇದಕ್ಕೆ ಅಪವಾದವೆಂಬಂತೆ ೧೯೬೦ರ ದಶಕದಲ್ಲಿ ಜಾರಿಗೆ ಬಂದದ್ದು ಹಸಿರು ಕ್ರಾಂತಿ. ಎಲ್ಲೆಲ್ಲಿ ನೀರಾವರಿ ಇದೇಯೋ ಅಲ್ಲಲ್ಲಿ ಇದನ್ನು ಅಳವಡಿಸಲಾಯಿತು. ಹಸಿರು ಕ್ರಾಂತಿಯ ವೈರುಧ್ಯವೆಂದರೆ ಅದು ಆಹಾರ ಉತ್ಪಾದನೆಯಲ್ಲಿ ಸ್ವಾವಲಂಬನೆಯನ್ನು ತಂದಿತು, ಆದರೆ ಬಡತನವನ್ನು ನೀಗಿಸಲಿಲ್ಲ. ಅದು ಮಾರುಕಟ್ಟೆ ಅವಲಂಬಿತ ರೈತರನ್ನು ಸೃಷ್ಟಿಸಿತೇ ಹೊರತು ಮಾರುಕಟ್ಟೆ ಹೊರತಾದ ರೈತರನ್ನಲ್ಲ. ಅದು ಕೃಷಿಯಲ್ಲಿ ತೀವ್ರತರವಾದ ಬಿಕ್ಕಟ್ಟನ್ನು ನಿರ್ಮಿಸಿದ್ದು ಸಹಜ. ಒಟ್ಟಾರೆಯಾಗಿ ಅದು ಕೃಷಿಯಲ್ಲಿ ಬಂಡವಾಳಶಾಹಿಯೊಂದಿಗೆ ವೈರುಧ್ಯಗಳನ್ನು ನಿರ್ಮಿಸಿದ್ದು ದಿಟ.

ಇದೇ ಸಂದರ್ಭದಲ್ಲಿ ನಡೆದ ಚರ್ಚೆ ಬಹಳ ಮುಖ್ಯವೆನಿಸುತ್ತದೆ. ಜಿ. ಎಸ್. ಭಲ್ಲಾ, ಗೇಲ್ ಒಮ್ವೆಟ್, ಅಶೋಕ್ ರುದ್ರ, ಅಮಿತ್ ಭಾದುರಿ, ಉತ್ಸ ಪಾಟ್ನಾಯಕ್, ಜೈರಸ್ ಬನಜಿ, ಹಮ್ಜ ಅಲವಿ, ಪ್ರಧಾನ್ ಪ್ರಸಾದ್ ಇವರೆಲ್ಲಾ ಈ ಸಂದರ್ಭದಲ್ಲಿ ಎತ್ತಿದ ಪ್ರಶ್ನೆಗಳು ಬಹುಮುಖ್ಯವೆನಿಸುತ್ತವೆ. ಭಾರತದ ಕೃಷಿಯಲ್ಲಿ ಯಾವ ಉತ್ಪಾದನಾ ರೀತಿ ಪ್ರಧಾನವಾಗುತ್ತಿದೆ? ಭಾರತದ ಕೃಷಿ ಬಂಡವಾಳಶಾಹಿಯತ್ತ ಸಾಗುತ್ತಿದೆಯೇ? ಭಾರತದ ಗ್ರಾಮೀಣ ಪ್ರದೇಶದಲ್ಲಿ ಊಳಿಗಮಾನ್ಯ ಮತ್ತು ಬಂಡವಾಳಶಾಹಿ ಜತೆಜತೆಯಾಗಿ ಹೋಗುತ್ತಿವೆಯೇ? ಅಥವಾ ಭಾರತದ ಗ್ರಾಮೀಣ ಪ್ರದೇಶ ಈಗಲೂ ಊಳಿಗಮಾನ್ಯ– ಅರೆ ಊಳಿಗಮಾನ್ಯವೇ? ಹಸಿರು ಕ್ರಾಂತಿ ಶ್ರೀಮಂತ ರೈತರನ್ನು ಹುಟ್ಟುಹಾಕುತ್ತಿದೆಯೇ? ಗ್ರಾಮೀಣ ಪ್ರದೇಶದಲ್ಲಿ ಸಂಘರ್ಷದ ಸ್ವರೂಪಗಳೇನು? ಪ್ರಾಥಮಿಕ ವೈರುಧ್ಯ ಯಾರ ಬಗ್ಗೆ? ಮತ್ತು ಯಾವುದು? ಇದಕ್ಕೆ ಪೂರಕವೆಂಬಂತೆ ಡೇನಿಯಲ್ ಥಾರ್ನರ್ ಹಸಿರು ಕ್ರಾಂತಿಯ ನಡುವೆ "ಜಂಟಲ್‌ಮ್ಯಾನ್" ರೈತ ಹುಟ್ಟಿರುವುದನ್ನು ಮನಗಾಣುತ್ತಾರೆ. ಇನ್ನು ಕೆಲವರು "ಕುಲಕ್"– ರೈತರಲ್ಲಿ ಹುಟ್ಟಿದ ಪ್ರತಿಗಾಮಿ ಶ್ರೀಮಂತ ರೈತನ ಅಸ್ತಿತ್ವವನ್ನು ಮನಗಾಣುತ್ತಾರೆ. ಅದರೊಟ್ಟಿಗೆ ಹಸಿರು ಕಾಂತ್ರಿ ತಂದ ತೀವ್ರತರ ವೈರುಧ್ಯ ಮತ್ತು ಘರ್ಷಣೆಯನ್ನು ಕೂಡ ಒಪ್ಪುತ್ತಾರೆ. ಈ ಚರ್ಚೆ ೧೯೭೦ ಮತ್ತು ೧೯೮೦ರ ದಶಕದ ನಡುವೆ ನಡೆಯಿತು.

ಇದರ ಫಲಶ್ರುತಿ ಎಂಬಂತೆ ೧೯೭೦ರ ದಶಕದಲ್ಲಿ ದೆಹಲಿ ಹಾಗೂ ಇನ್ನಿತರ ಕಡೆ ರೈತ ಸಮಾವೇಶಗಳು ನಡೆದವು. ಅವುಗಳು ರಾಜಕೀಯ ಪಕ್ಷಗಳ ಅಡಿಯಲ್ಲಿ ಸಂಘಟಿತವಾದವು. ಉತ್ತರ ಭಾರತದಲ್ಲಿ ಮಾಜಿ ಪ್ರಧಾನಿ ಚರಣ್ ಸಿಂಗ್, ದೇವಿಲಾಲ್ ಇದರ ನಾಯಕತ್ವವನ್ನು ವಹಿಸಿದರು. ಅವರ ಬೇಡಿಕೆಗಳ ಪಟ್ಟಿಯಲ್ಲಿ ಬಹಳ ಮುಖ್ಯವಾಗಿ ಕೃಷಿಗೆ ಕೈಗಾರಿಕೆಯ ದರ್ಜೆ, ಕೃಷಿ ಮತ್ತು ಕೈಗಾರಿಕಾ ವಸ್ತುಗಳ ನಡುವೆ ತುಲನಾತ್ಮಕ ಬೆಲೆ ನಿಗದಿ, ವಿದೇಶದಿಂದ ಕೃಷಿ ಸಲಕರಣೆಗಳ ಆಮದು, ಕೈಗಾರಿಕೆಗೆ ನೀಡುತ್ತಿರುವ ಸವಲತ್ತುಗಳ ಕಡಿತ, ವಿದ್ಯುಚ್ಛಕ್ತಿ, ನೀರು, ಗೊಬ್ಬರ, ಬೀಜಗಳಿಗೆ ಸಬ್ಸಿಡಿ, ಸಮಿತಿ ಮತ್ತು ವಿವಿಧ ಬೋರ್ಡ್‌ಗಳಲ್ಲಿ ರೈತರಿಗೆ ಸಾಕಷ್ಟು ಪ್ರಾತಿನಿಧ್ಯ, ಗ್ರಾಮೀಣ ಮತ್ತು ನಗರದ ನಡುವಿನ ಆದಾಯದ ಅಂತರ ಕಡಿಮೆ, ಕಿಸಾನ್ ಬ್ಯಾಂಕ್ ಮತ್ತು ಕೃಷಿ ಪಾಲಿಟೆಕ್ನಿಕ್‌ಗಳ ಸ್ಥಾಪನೆ, ಇತ್ಯಾದಿಗಳು ಸೇರಿದ್ದವು. ಇಲ್ಲಿ ಚರಣ್ ಸಿಂಗ್ ಬರೆದ ಪುಸ್ತಕಗಳು – ಜಾಯಿಂಟ್ ಫಾರ್ಮಿಂಗ್ (೧೯೫೯), ಇಂಡಿಯಾಸ್ ಇಕನಾಮಿಕ್ ಪಾಲಿಸಿ–ದಿ ಗಾಂಧಿಯನ್ ಬ್ಲೂ ಪ್ರಿಂಟ್ (೧೯೭೮), ಇಕನಾಮಿಕ್ ನೈಟ್ಮೇರ್ ಆಫ್ ಇಂಡಿಯಾ (೧೯೮೧) ಇತ್ಯಾದಿ ಬಹಳ ಮುಖ್ಯ. ಇದು ರೈತರ ರ್‍ಯಾಲಿಗಳಿಗೆ, ರಾಜಕೀಯಕರಣಕ್ಕೆ, ತಾತ್ವಿಕ ಚಿಂತನೆಗಳಿಗೆ ಚೌಕಟ್ಟನ್ನು ನೀಡಿತ್ತು. ವಾಸ್ತವವಾದಿ ಚರಣ್ ಸಿಂಗ್ ಮುಂದೆ ಪಾರ್ಲಿಮೆಂಟಿನಲ್ಲಿ ಅತೀ ಹೆಚ್ಚು ರೈತರ ಪ್ರಾತಿನಿಧ್ಯತೆಯ ಅವಶ್ಯಕತೆಯನ್ನು, ರೈತರ ಸರಕಾರದ ಪರಿಕಲ್ಪನೆಯನ್ನು ಪ್ರತಿಪಾದಿಸುತ್ತಾರೆ. ಉತ್ತರ ಮತ್ತು ದಕ್ಷಿಣ ಭಾರತದ ರೈತ ಚಳುವಳಿಗಳು ಇದರಲ್ಲಿ ಭಾಗಿಗಳಾಗಬೇಕು ಎಂದೆಲ್ಲಾ ವಾದಿಸುತ್ತಾರೆ. ಈ ಪ್ರಕ್ರಿಯೆಯನ್ನು ಅವರು "ಗಂಗಾ–ಕಾವೇರಿ ಸಂಗಮ" ಎಂದು ವ್ಯಾಖ್ಯಾನಿಸುತ್ತಾರೆ.

ವಾಸ್ತವವಾಗಿ ಅದೇ ದಶಕದಲ್ಲಿ, ಕೃಷಿಯಲ್ಲಿ ಬಂಡವಾಳ ಮತ್ತು ಹಸಿರು ಕ್ರಾಂತಿಯನ್ನು ಅಳವಡಿಸಿದ ಕೆಲವು ರಾಜ್ಯಗಳಲ್ಲಿ ರೈತ ಸಂಘಟನೆಗಳು ಕೂಡ ಹುಟ್ಟಿದವು. ತಮಿಳುನಾಡಿನ ಕೊಯಂಬತ್ತೂರಿನಲ್ಲಿ ೧೯೭೦ರಲ್ಲಿ ನಾರಾಯಣಸ್ವಾಮಿ ನೇತೃತ್ವದಲ್ಲಿ ತಮಿಳಗ ವ್ಯವಸಾಯಿಗಳ್ ಸಂಘ, ೧೯೭೨ರಲ್ಲಿ ಪಂಜಾಬ್‌ನ ಲೂಧಿಯಾನದಲ್ಲಿ ಖೇತ್ಬಾರಿ ಯೂನಿಯನ್ ಹುಟ್ಟಿದವು. ಇದೇ ಖೇತ್ಬಾರಿ ಯೂನಿಯನ್ ತದನಂತರ ಭಾರತೀಯ ಕಿಸಾನ್ ಎಂದು ಪುನರ್ ನಾಮಕರಣ ಮಾಡಿಕೊಳ್ಳುತ್ತದೆ. ಅವರ ಬೇಡಿಕೆಗಳು ಕೂಡ ಹೊಸತಾಗಿರಲಿಲ್ಲ – ತೆರಿಗೆಗಳಲ್ಲಿ ಇಳಿಕೆ ಇತ್ಯಾದಿ. ಖೇತ್ಬಾರಿ ಯೂನಿಯನ್ ೧೯೮೦ರ ತನಕ ನಡೆಸಿದ ಹೋರಾಟಗಳನ್ನು ಈ ರೀತಿ ಪಟ್ಟಿ ಮಾಡಬಹುದು – ೧೯೭೨ರಲ್ಲಿ ಏಕರೂಪಿ ಆಹಾರ ವಲಯದ ವಿರೋಧ, ೧೯೭೫ರಲ್ಲಿ ವಿದ್ಯುಚ್ಛಕ್ತಿ ದರ, ನೀರಿನ ದರ ಮತ್ತು ಹೆಚ್ಚುತ್ತಿರುವ ವಾಣಿಜ್ಯ ತೆರಿಗೆ ಇತ್ಯಾದಿಗಳ ವಿರೋಧ, ೧೯೭೭ರಲ್ಲಿ ಪಾಳುಬಿದ್ದ ಟ್ರಾಕ್ಟರ್‌ಗಳ ವಿರುದ್ಧ, ೧೯೭೮ರಲ್ಲಿ ಡೀಸೆಲ್ ಮೋರ್ಚಾ. ಅದೇ ಸಂದರ್ಭದಲ್ಲಿ ನಾರಾಯಣ ಸ್ವಾಮಿಯವರ ರೈತ ಚಳವಳಿಗೆ ನೀಡಿದ ವಿಶಿಷ್ಟ ಕೊಡುಗೆಯನ್ನು ನಿರಾಕರಿಸಬಾರದು. ರೈತರಿಗೆ ಹಸಿರು ಟೋಪಿ ಮತ್ತು ಶಾಲ್‌ಅನ್ನು ರೈತರ ಐಡೆಂಟಿಟಿ ಸಂಕೇತವಾಗಿ ಧರಿಸಲು ತಿಳಿಸಿದವರು, ೧೯೮೦ರ ದಶಕದ ತನಕ ನಡೆಸಿದ ಹೋರಾಟಗಳನ್ನು ಈ ರೀತಿ ಪಟ್ಟಿ ಮಾಡಬಹುದು – ೧೯೭೦ ಮತ್ತು ೧೯೭೨ರಲ್ಲಿ ವಿದ್ಯುಚ್ಛಕ್ತಿ ದರದ ವಿರುದ್ಧ, ೧೯೭೪ರಲ್ಲಿ ಕೃಷಿ ತೆರಿಗೆ, ಸಾಲ ಮನ್ನಾ, ಭೂ ತೆರಿಗೆ ಇತ್ಯಾದಿಗಳ ವಿರುದ್ಧ, ೧೯೭೮ರಲ್ಲಿ ತುಲನಾತ್ಮಕ ಮತ್ತು ಕೃಷಿಗೆ ಸಬ್ಸಿಡಿ, ೧೯೮೦ರಲ್ಲಿ ಹಾಲಿನ ದರಗಳಿಗೆ ಹೋರಾಟಗಳನ್ನು ನಡೆಸಿದರು.

*(ಮುಂದುವರೆಯುವುದು)*

**ಡಾ|| ಮುಜಾಫ್ಫರ್ ಅಸ್ಸಾದಿ**
ವಿಶೇಷಾಧಿಕಾರಿಗಳು, ರಾಯಚೂರು ವಿಶ್ವವಿದ್ಯಾನಿಲಯ, ಜ್ಞಾನತುಂಗಾ
ಯರ್‌ಗೇರಾ ಅಂಚೆ, ರಾಯಚೂರು – ೫೮೪ ೧೩೩

**ರಾಜ್ಯ ಸರ್ಕಾರ ೧೦೦೦ ಇಂಗ್ಲಿಷ್ ಮಾಧ್ಯಮ ಶಾಲೆಗಳನ್ನು ತೆರೆದ ಮಾತ್ರಕ್ಕೆ ಮಕ್ಕಳಿಗೆ ಇಂಗ್ಲಿಷ್ ಬಂದುಬಿಡುವುದಿಲ್ಲ. ಈಗಾಗಲೇ ಜಾರಿಯಲ್ಲಿರುವ, ಒಂದನೆಯ ತರಗತಿಯಿಂದ ಇಂಗ್ಲಿಷನ್ನು ಒಂದು ಭಾಷೆಯಾಗಿ ಕಲಿಸುವ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವುದರ ಕಡೆ ಗಮನ ಹರಿಸಬೇಕು. ಇಂಗ್ಲಿಷ್ ಭಾಷೆಯ ಬೋಧನೆಗೆಂದೇ ಪ್ರತ್ಯೇಕ, ಪರಿಣತ, ಸಮರ್ಥ ಶಿಕ್ಷಕರಿಂದ, ಆಧುನಿಕ ಬೋಧನಾ ಪರಿಕರಗಳನ್ನು ಬಳಸಿ, ಇಂಗ್ಲಿಷನ್ನು ಬೋಧಿಸುವ ವ್ಯವಸ್ಥೆಯಾಗಬೇಕು. ಏಕೆಂದರೆ ಜಗತ್ತಿನಾದ್ಯಂತ ಇಂಗ್ಲಿಷ್ ಎಲ್ಲರಿಗೂ ಅನಿವಾರ್ಯವಾಗಿದೆ.**

**ಸಿ. ಚಿಕ್ಕತಿಮ್ಮಯ್ಯ ಹಂದನಕೆರೆ**

ಈ ಶೈಕ್ಷಣಿಕ ವರ್ಷದಿಂದಲೇ ೧೦೦೦ ಇಂಗ್ಲಿಷ್ ಮಾಧ್ಯಮ ಶಾಲೆಗಳನ್ನು ತೆರೆಯುವ ನಿರ್ಧಾರವನ್ನು ಸರ್ಕಾರ ಕೈಗೊಂಡಿದೆ. ಈ ಸಂಬಂಧ, ದಿನಾಂಕ ೨೬.೧೦.೨೦೧೮ರಂದು ಸರ್ಕಾರಿ ಆದೇಶ ಹೊರ ಬಿದ್ದಿದೆ. 'ಶಿಕ್ಷಣ ಗುಣಮಟ್ಟ ಸುಧಾರಣೆ ಕಾರ್ಯಕ್ರಮಗಳು' ಎಂಬ ಲೆಕ್ಕ ಶೀರ್ಷಿಕೆಯಲ್ಲಿ ೧೪ ಕೋಟಿ ರೂಪಾಯಿಗಳ ಅನುದಾನ ನೀಡಲಾಗಿದೆ.

ಸರ್ಕಾರದ ಈ ನಿರ್ಧಾರ ಕನ್ನಡ ಭಾಷಾಭಿಮಾನಿಗಳಲ್ಲಿ, ಕನ್ನಡ ಚಿಂತಕರಲ್ಲಿ, ಕನ್ನಡ ಸಾಹಿತಿಗಳಲ್ಲಿ ಆತಂಕವನ್ನು ಉಂಟುಮಾಡಿದೆ. ಇದರಿಂದ ಭಾಷಾವಾರು ಪ್ರಾಂತ್ಯ ರಚನೆಯ ಉದ್ದೇಶಕ್ಕೆ ಭಂಗ ಬರುತ್ತದೆ. ಒಂದು ನಾಡಿನ ಭಾಷೆ ಅಲ್ಲಿಯ ಜನರ ಭಾವನೆಗಳ, ವಿಚಾರಗಳ, ಅಭಿಪ್ರಾಯಗಳ ಸಂವಹನ ಸಾಧನ. ಮನ-ಮನಗಳನ್ನು ಕೂಡಿಸುವ, ಭಾವೈಕ್ಯ ಸಾಧಿಸುವ, ಹೃದಯಗಳನ್ನು ಬೆಸೆಯುವ, ನಾವೆಲ್ಲರೂ ಒಂದು ಎಂಬುದಾಗಿ ಒಂದು ಸಮುದಾಯದವರು ಭಾವಿಸುವಂತೆ ಮಾಡುವ ಮಹಾ ಶಕ್ತಿ ಭಾಷೆಗಿದೆ. ಒಂದು ಸರ್ಕಾರ ಅಲ್ಲಿಯ ಜನರ ಭಾಷೆಯನ್ನೇ ಶಿಕ್ಷಣ ಮಾಧ್ಯಮವಾಗಿ ಬಳಸಬೇಕಾಗುತ್ತದೆ. ಭಾಷಾವಾರು ಪ್ರಾಂತ್ಯ ರಚನೆಯ ಉದ್ದೇಶ ಇದೇ ಆಗಿರುತ್ತದೆ.

ಜನವರಿ ೨೦೧೯ರಲ್ಲಿ ನಡೆದ ೮೪ನೆಯ 'ಅಖಿಲ ಭಾರತ ಸಾಹಿತ್ಯ ಸಮ್ಮೇಳನ'ದ ಉದ್ಘಾಟನಾ ಸಮಾರಂಭದಲ್ಲಿ ಪ್ರೊ॥ ಚಂದ್ರಶೇಖರ ಪಾಟೀಲರು ೧೦೦೦ ಸರ್ಕಾರಿ ಶಾಲೆಗಳಲ್ಲಿ ಇಂಗ್ಲಿಷ್ ಮಾಧ್ಯಮ ಶಿಕ್ಷಣ ಆರಂಭಿಸುವ ಸರ್ಕಾರದ ತೀರ್ಮಾನವನ್ನು, ಮುಖ್ಯ ಮಂತ್ರಿಗಳ ಎದುರೇ ಪ್ರಬಲವಾಗಿ ವಿರೋಧಿಸಿದರು. ಅವರು ತಮ್ಮ ಭಾಷಣದಲ್ಲಿ "ಪ್ರಾಥಮಿಕ ಶಿಕ್ಷಣ ಹಂತದಿಂದ ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಸುವುದಕ್ಕೆ ಆತುರದ ನಿರ್ಧಾರ ಸಲ್ಲದು. ೧೦೦೦ ಇಂಗ್ಲಿಷ್ ಮಾಧ್ಯಮ ಶಾಲೆಗಳನ್ನು ತೆರೆಯುವ ವಿಚಾರದಲ್ಲಿ ರಾಜ್ಯ ಸರ್ಕಾರ ದುಡುಕಿನ ನಿರ್ಧಾರ ಕೈಗೊಂಡಿದೆ. ಅದಕ್ಕೂ ಮೊದಲು ಶಿಕ್ಷಣ ತಜ್ಞರು ಮತ್ತು ಕನ್ನಡಪರ ಹೋರಾಟಗಾರರ ಜೊತೆ ಚರ್ಚಿಸಿಲ್ಲ. ಬೆಳಗಾವಿ ಅಧಿವೇಶನದಲ್ಲಿ ಇಂಗ್ಲಿಷ್ ಮಾಧ್ಯಮ ಶಾಲೆಗಳ ಸ್ಥಾಪನೆಗೆ ಹಣಕಾಸು ಒದಗಿಸುವ ಪ್ರಸ್ತಾಪಕ್ಕೆ ಒಪ್ಪಿಗೆ ನೀಡಲಾಗಿದೆ. ಇದು ಆತಂಕ ಹೆಚ್ಚಿಸಿದೆ" ಎಂದರು.

ಈ ಹಿಂದಿನ ರಾಜ್ಯ ಸರ್ಕಾರಗಳು ಕನ್ನಡವನ್ನು ಶಿಕ್ಷಣ ಮಾಧ್ಯಮವಾಗಿ ಜಾರಿಗೆ ತರಲು ಸಾಕಷ್ಟು ಶ್ರಮಿಸಿವೆ. ಏಕೀಕೃತ 'ಮೈಸೂರು' ರಾಜ್ಯವನ್ನು 'ಕರ್ನಾಟಕ' ಎಂದು ನಾಮಕರಣ ಮಾಡಿದ ಶ್ರೀ ಡಿ. ದೇವರಾಜ ಅರಸು ಸರ್ಕಾರದಿಂದ ಪ್ರಾರಂಭಿಸಿ, ಇಲ್ಲಿಯವರೆಗಿನ ಎಲ್ಲ ಸರ್ಕಾರಗಳೂ ಕರ್ನಾಟಕದಲ್ಲಿ ಕನ್ನಡವನ್ನು ನೆಲೆಗೊಳಿಸುವ ನಿಟ್ಟಿನಲ್ಲಿ ಸಾಕಷ್ಟು ದುಡಿದಿರುವಾಗ, ಕನ್ನಡದ ಆಶಯಕ್ಕೆ ವಿರುದ್ಧವಾಗಿ, ಈಗಿನ ಸರ್ಕಾರ ಇಂಗ್ಲಿಷ್ ಮಾಧ್ಯಮ ಶಾಲೆಗಳನ್ನು ತೆರೆಯಲು ಹೊರಟಿರುವುದು ಸಮರ್ಥನೀಯವಲ್ಲ.

೨೦೦೭-೦೮ನೆಯ ಶೈಕ್ಷಣಿಕ ವರ್ಷದಿಂದ, ಪ್ರಾಥಮಿಕ ಹಂತದಲ್ಲಿ ಇಂಗ್ಲಿಷನ್ನು ಒಂದು ಭಾಷೆಯಾಗಿ ಕಲಿಸಲು ಆಗ ಮುಖ್ಯಮಂತ್ರಿಯಾಗಿದ್ದ ಕುಮಾರಸ್ವಾಮಿಯವರ

# ಕನ್ನಡವನ್ನು ಸಮುದ್ರಕ್ಕೆ ಎಸೆಯುತ್ತೀರಾ?






ಸಂಪುಟ ನಿರ್ಧರಿಸಿತ್ತು. ಅದರಂತೆ, ಪ್ರಾಥಮಿಕ ಒಂದನೇ ತರಗತಿಯಿಂದ ಇಂಗ್ಲಿಷನ್ನು ಒಂದು ಭಾಷೆಯಾಗಿ ಕಲಿಸುವ ಕ್ರಮ ಜಾರಿಯಲ್ಲಿದೆ. ಈ ಯೋಜನೆಯಿಂದ ಸರ್ಕಾರಿ ಶಾಲೆಯ ಮಕ್ಕಳಿಗೆ ಎಷ್ಟರಮಟ್ಟಿನ ಪ್ರಯೋಜನವಾಗಿದೆ? ಈ ಯೋಜನೆಯ ಸಾಧಕ-ಬಾಧಕಗಳೇನು? ಇದನ್ನೆಲ್ಲಾ ಅಧ್ಯಯನ ಮಾಡಿ, ಲೋಪಗಳಿದ್ದರೆ ಸರಿಪಡಿಸಿ, ಅದೇ ಯೋಜನೆಯನ್ನು ಪರಿಣಾಮಕಾರಿಯಾಗಿ ಮುಂದುವರಿಸಬೇಕಿತ್ತು. ಆ ಯೋಜನೆಯನ್ನು ಗಮನಕ್ಕೇ ತೆಗೆದುಕೊಳ್ಳದೆ, ೧೦೦೦ ಆಂಗ್ಲ ಮಾಧ್ಯಮ ಸರ್ಕಾರಿ ಶಾಲೆಗಳನ್ನು ತೆರೆಯುವ ಅಗತ್ಯವಾದರೂ ಏನಿತ್ತು?

ದೂರಗಾಮಿ ಪರಿಣಾಮ ಬೀರುವ ಇಂಥ ಮಹತ್ವದ ತೀರ್ಮಾನ ತೆಗೆದುಕೊಳ್ಳುವ ಮುನ್ನ, ಸರ್ಕಾರ ಭಾಷಾ ಚಿಂತಕರ, ಶಿಕ್ಷಣ ತಜ್ಞರ, ಹಿರಿಯ ಸಾಹಿತಿಗಳ ಜೊತೆ ಚರ್ಚಿಸಬೇಕಾಗಿತ್ತು; ಅವರ ಸಲಹೆ, ಅಭಿಪ್ರಾಯ ಪಡೆಯಬೇಕಿತ್ತು. ಅಲ್ಲದೆ ವಿಷಯ ಕುರಿತಂತೆ ಹಿಂದಿನ ಸರ್ಕಾರಗಳು ಕೈಗೊಂಡಿದ್ದ ಕ್ರಮಗಳನ್ನು ಹಾಗೂ ಶಿಕ್ಷಣ ಕ್ಷೇತ್ರದ ಪ್ರಾಜ್ಞರು ವ್ಯಕ್ತಪಡಿಸಿರುವ ಅಭಿಪ್ರಾಯಗಳ ಕಡೆ ಗಮನ ಹರಿಸಬೇಕಾಗಿತ್ತು ಹಾಗೂ ನೆರೆಯ ರಾಜ್ಯಗಳು ಪ್ರಾದೇಶಿಕ ಭಾಷೆ ಕುರಿತಂತೆ ಯಾವ ಕ್ರಮ ಕೈಗೊಂಡಿವೆ ಎಂಬುದನ್ನು ಅಭ್ಯಸಿಸಬೇಕಿತ್ತು. ಇದ್ಯಾವುದನ್ನೂ ಮಾಡದೆ, ಸರ್ಕಾರಿ ಶಾಲೆಗಳಲ್ಲಿ ಇಂಗ್ಲಿಷ್ ಮಾಧ್ಯಮ ಶಾಲೆಗಳನ್ನು ತೆರೆಯುವ ತೀರ್ಮಾನವನ್ನು ಏಕಾಏಕಿಯಾಗಿ ಕೈಗೊಂಡಿರುವುದು ಸಮಂಜಸವೆನಿಸುವುದಿಲ್ಲ.

ಭಾಷಾ ಮಾಧ್ಯಮದ ಕುರಿತು ತುಸು ಹಿಂದಕ್ಕೆ ಇಣಿಕಿ ನೋಡುವುದಾದರೆ, ೧೯೯೪ರ ಏಪ್ರಿಲ್‌ನಲ್ಲಿ ರಾಜ್ಯ ಸರ್ಕಾರ ಭಾಷಾ ನೀತಿಯೊಂದನ್ನು ರೂಪಿಸಿತು. ಪ್ರಾಥಮಿಕ ಹಂತದಲ್ಲಿ ಮಾತೃಭಾಷೆ ಅಥವಾ ಕನ್ನಡ ಕಡ್ಡಾಯವಾಗಿ ಶಿಕ್ಷಣ ಮಾಧ್ಯಮವಾಗಿರಬೇಕು ಎಂದು ಈ ಭಾಷಾ ನೀತಿ ಹೇಳಿತು. ಈ ನೀತಿಯನ್ನು ಖಾಸಗಿ ಇಂಗ್ಲಿಷ್ ಮಾಧ್ಯಮ ಶಾಲೆಗಳು ನ್ಯಾಯಾಲಯದಲ್ಲಿ ಪ್ರಶ್ನಿಸಿದವು.

ಸರ್ಕಾರದ ಈ ನೀತಿಯು ಖಾಸಗಿ ಮತ್ತು ಅನುದಾನರಹಿತ ಶಾಲೆಗಳಿಗೆ ಅನ್ವಯವಾಗುವುದಿಲ್ಲ ಎಂದು ರಾಜ್ಯ ಹೈಕೋರ್ಟ್ ಆದೇಶಿಸಿತು. ಈ ನೀತಿಯಲ್ಲಿ ಖಾಸಗಿ, ಅನುದಾನರಹಿತ ಶಾಲೆಗಳ ಸಾಂವಿಧಾನಿಕ ಹಕ್ಕುಗಳ ಉಲ್ಲಂಘನೆಯಾಗುತ್ತದೆ ಎಂದು ಆದೇಶದಲ್ಲಿ ಹೇಳಿತು. ನಂತರ ಇದನ್ನು ಸರ್ಕಾರ ಸುಪ್ರೀಂ ಕೋರ್ಟ್‌ನಲ್ಲಿ ಪ್ರಶ್ನಿಸಿತು. ಈ ಕುರಿತು ೧೯೯೩ರಲ್ಲಿ ತೀರ್ಪು ನೀಡಿದ್ದ ಸುಪ್ರೀಂ ಕೋರ್ಟ್ ೧ನೆಯ ತರಗತಿಯಿಂದ ೪ನೆಯ ತರಗತಿಯವರೆಗೆ ಮಾತೃಭಾಷಾ ಶಿಕ್ಷಣಕ್ಕೆ ಒಪ್ಪಿಗೆ ನೀಡಿತು. ಆದರೆ ೨೦೦೮ರಲ್ಲಿ ಇದಕ್ಕೆ ವ್ಯತಿರಿಕ್ತ ತೀರ್ಪು ನೀಡಿದ ಕರ್ನಾಟಕ ಹೈಕೋರ್ಟ್ "ಶಿಕ್ಷಣ ಪಾಲಕರ ಹಕ್ಕು" ಎಂದಿತು. ಹೈಕೋರ್ಟ್ ನೀಡಿದ ಈ ತೀರ್ಪನ್ನು, ಸುಪ್ರೀಂ ಕೋರ್ಟ್ ತನ್ನ ಮೇ ೨೦೧೪ರ ಆದೇಶದಲ್ಲಿ ಎತ್ತಿ ಹಿಡಿಯಿತು. ಪ್ರಾಥಮಿಕ ಶಿಕ್ಷಣ ಹಂತದಲ್ಲಿ ಕಲಿಕಾ ಮಾಧ್ಯಮವಾಗಿ 'ಮಾತೃಭಾಷೆ'ಯನ್ನು ಹೇರುವ ಅಧಿಕಾರ ಸರ್ಕಾರಕ್ಕೆ ಇಲ್ಲ. ಅದು ಪೋಷಕರಿಗೆ ಬಿಟ್ಟ ವಿಷಯ. ಮಾತೃಭಾಷೆಯನ್ನು ಕಲಿಕಾ ಮಾಧ್ಯಮವಾಗಿ ಹೇರಿದರೆ, ಅದು ಸಂವಿಧಾನದ ೧೯ (ವಾಕ್ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ) ಹಾಗೂ ೩೦ನೆಯ (ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವ ಅಲ್ಪಸಂಖ್ಯಾತರ ಹಕ್ಕು) ಮತ್ತು ೨೯ (ಭಾಷಾ ಅಲ್ಪಸಂಖ್ಯಾತರ ಹಿತ ರಕ್ಷಣೆ) ವಿಧಿ ಪ್ರಕಾರ ಮೂಲಭೂತ ಹಕ್ಕುಗಳಿಗೆ ಧಕ್ಕೆ ಬರುತ್ತದೆ ಎಂದು ಮುಖ್ಯ ನ್ಯಾಯಮೂರ್ತಿ ಆರ್. ಎಂ. ಲೋಧ ನೇತೃತ್ವದ ಸಂವಿಧಾನಪೀಠ ಹೇಳಿದೆ.

ಸಂವಿಧಾನ ಪೀಠ ಮುಂದುವರಿದು, 'ತನ್ನಿಷ್ಟದ ಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣ ಪಡೆಯುವ ಹಕ್ಕು ಮಗುವಿಗೆ ಇದೆ. ಇದನ್ನು ನಿಯಂತ್ರಿಸುವ ಅಧಿಕಾರ ಸರ್ಕಾರಕ್ಕೆ ಇಲ್ಲ. ಪ್ರಾಥಮಿಕ ಹಂತದಲ್ಲಿ ಮಗು ತನ್ನ ಮಾತೃ ಭಾಷೆಯಲ್ಲಿ ಕಲಿತರೆ ಹೆಚ್ಚು ಒಳ್ಳೆಯದು ಎನ್ನುವುದು ನಮ್ಮ ಭಾವನೆ. ಆದರೆ ಹೆತ್ತವರು ಅಥವಾ ಪೋಷಕರು ಮಗುವಿನ ಮಾತೃಭಾಷೆಯನ್ನು ನಿರ್ಧರಿಸುವ ಹಕ್ಕು ಹೊಂದಿರುತ್ತಾರೆ' ಎಂದು ಹೇಳಿದೆ.

ಸುಪ್ರೀಂ ಕೋರ್ಟ್ ನೀಡಿರುವ ಈ ಆದೇಶ ಕೇವಲ ಕರ್ನಾಟಕದ ಕನ್ನಡ ಭಾಷೆಗೆ ಮಾತ್ರ ಸೀಮಿತವಾಗಿರದೆ, ದೇಶದ ಪ್ರಾದೇಶಿಕ ಭಾಷೆಗಳಿಗೆಲ್ಲ ಅನ್ವಯಿಸುತ್ತದೆ.

ನೆರೆಯ ತಮಿಳುನಾಡು ಮತ್ತು ಕೇರಳ ಸರ್ಕಾರಗಳು ತಮ್ಮ ಭಾಷೆಗಳನ್ನು ಹೇಗೆ ಶಿಕ್ಷಣ ಮಾಧ್ಯಮವಾಗಿ ಜಾರಿಗೆ ತಂದಿವೆ ಎಂಬುದರ ಬಗ್ಗೆ ನೋಡೋಣ:

ರಾಜ್ಯದ ಎಲ್ಲ ಶಾಲೆಗಳಲ್ಲಿ 'ಒಂದನೆಯ ತರಗತಿಯಿಂದ ಹತ್ತನೆಯ ತರಗತಿಯವರೆಗೆ ಕಡ್ಡಾಯವಾಗಿ ತಮಿಳನ್ನು ಪ್ರಥಮ ಭಾಷೆಯಾಗಿ ಕಲಿಸಬೇಕು' ಎಂದು ತಮಿಳುನಾಡು ಸರ್ಕಾರ ೨೦೦೬ರಲ್ಲಿ ಆದೇಶ ಹೊರಡಿಸಿತು. ಈ ಆದೇಶದ ವಿರುದ್ಧ ಮಲೆಯಾಳ ಸಮಾಜದವರೂ, ನಾಯರ್ ಸಮಾಜದವರೂ ಸುಪ್ರೀಂ ಕೋರ್ಟ್‌ನಲ್ಲಿ ಅರ್ಜಿ ಸಲ್ಲಿಸಿದರು. ಸುಪ್ರೀಂ ಕೋರ್ಟ್ ಸರ್ಕಾರದ ಆದೇಶವನ್ನು ಎತ್ತಿ ಹಿಡಿಯಿತು. ಭಾಷಾ ಅಲ್ಪಸಂಖ್ಯಾತರು ಅವರವರ ಮಾತೃಭಾಷೆಯ ಮಾಧ್ಯಮದಲ್ಲಿ ಪಾಠ ಪ್ರವಚನ ಮಾಡುವುದಕ್ಕೆ ಅವಕಾಶ ಕಲ್ಪಿಸಿ, ತಮಿಳನ್ನು ಪ್ರಥಮ ಭಾಷೆಯಾಗಿ ಕಡ್ಡಾಯವಾಗಿ ಎಲ್ಲಾ ಶಾಲೆಗಳಲ್ಲಿ ಬೋಧಿಸಬಹುದೆಂದು ಸುಪ್ರೀಂ ಕೋರ್ಟ್ ತೀರ್ಪಿತ್ತಿದೆ.

ರಾಜ್ಯದ ಎಲ್ಲ ಶಾಲೆಗಳಲ್ಲಿ ಒಂದನೆಯ ತರಗತಿಯಿಂದ ೧೦ನೆಯ ತರಗತಿಯವರೆಗೆ ಮಲೆಯಾಳಂ ಭಾಷೆಯನ್ನು ಕಡ್ಡಾಯಗೊಳಿಸಿ ಕೇರಳ ಸರ್ಕಾರ ಏಪ್ರಿಲ್ ೨೦೧೭ರಲ್ಲಿ ಸುಗ್ರೀವಾಜ್ಞೆ ಹೊರಡಿಸಿದೆ. ೨೦೧೮-೧೯ರ ಶೈಕ್ಷಣಿಕ ವರ್ಷದಿಂದ ಈ ಸುಗ್ರೀವಾಜ್ಞೆ ಜಾರಿಯಾಗಲಿದೆಯೆಂದೂ, ಎಲ್ಲ ಸರ್ಕಾರಿ, ಅನುದಾನಿತ, ಅನುದಾನರಹಿತ ಶಿಕ್ಷಣ ಸಂಸ್ಥೆಗಳು ಹಾಗೂ ಸಿಬಿಎಸ್‌ಸಿ ಮತ್ತು ಐಸಿಎಸ್‌ಇ ಪಠ್ಯಕ್ರಮ ಸಂಯೋಜಿತ ಶಿಕ್ಷಣ ಸಂಸ್ಥೆಗಳಿಗೆ ಈ ಆಜ್ಞೆ ಅನ್ವಯವಾಗುತ್ತದೆ ಎಂದು ಆ ರಾಜ್ಯದ ಮುಖ್ಯಮಂತ್ರಿಯವರು ಹೇಳಿದ್ದರು.

ಇದೇ ಮಾದರಿಯಲ್ಲಿ, ಕನ್ನಡವನ್ನು ಒಂದು ಭಾಷೆಯಾಗಿ, ಕಡ್ಡಾಯವಾಗಿ ಎಲ್ಲಾ ಶಾಲೆಗಳಲ್ಲಿ ಅಂದರೆ ಸರ್ಕಾರಿ, ಖಾಸಗಿ, ಅನುದಾನಿತ, ಅನುದಾನರಹಿತ, ಸಿಬಿಎಸ್‌ಇ, ಐಸಿಎಸ್‌ಇ ಶಾಲೆಗಳಲ್ಲಿ ಜಾರಿಗೆ ತರುವ ನಿಟ್ಟಿನಲ್ಲಿ ಕರ್ನಾಟಕ ಸರ್ಕಾರ ಯೋಚಿಸಿ ಕಾರ್ಯೋನ್ಮುಖವಾಗಬಹುದಿತ್ತು. ಆದರೆ, ಸರ್ಕಾರದ ಗಮನ ಇಂಗ್ಲಿಷ್ ಭಾಷೆಯನ್ನು ಶಿಕ್ಷಣದಲ್ಲಿ ಜಾರಿಗೊಳಿಸುವ ಕಡೆ ಕೇಂದ್ರೀಕೃತವಾಗಿದೆಯೇ ವಿನಹ ಕನ್ನಡವನ್ನು ಉಳಿಸುವ ಕಡೆ ಇಲ್ಲ ಎಂಬುದನ್ನು ವಿಷಾದದಿಂದ ಹೇಳಬೇಕಾಗಿದೆ.

ಇಂಗ್ಲಿಷ್ ಭಾಷೆಯ ಅನಿವಾರ್ಯತೆಯನ್ನು ಒಪ್ಪಿಕೊಂಡೇ ಪ್ರಾದೇಶಿಕ ಭಾಷೆಗೆ ಅಂದರೆ ಕನ್ನಡಕ್ಕೆ ಪ್ರಾಮುಖ್ಯತೆ ಕೊಡಬೇಕಿದೆ. ಆ ನಿಟ್ಟಿನಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ತೆಗೆದುಕೊಂಡಿರುವ ಕ್ರಮಗಳನ್ನು ಕುರಿತು ಈ ಮುಂದೆ ಚರ್ಚಿಸಿದೆ.

**ರಾಷ್ಟ್ರೀಯ ಶಿಕ್ಷಣ ನೀತಿ**

ಮಕ್ಕಳಿಗೆ ೧ರಿಂದ ೫ನೆಯ ತರಗತಿಯವರೆಗೆ ಅವರವರ ಮಾತೃಭಾಷೆ ಅಥವಾ ರಾಜ್ಯಭಾಷೆಯಲ್ಲಿ ಶಿಕ್ಷಣ ನೀಡಲು "ರಾಷ್ಟ್ರೀಯ ಶಿಕ್ಷಣ ನೀತಿ-೨೦೧೬" ಅವಕಾಶ ಕಲ್ಪಿಸಿದೆ. ಮಾತೃಭಾಷೆ, ಪ್ರಾಂತೀಯಭಾಷೆ ಅಥವಾ ಸ್ಥಳೀಯ ಭಾಷೆಯನ್ನೇ ಬೋಧನಾ ಭಾಷೆಯನ್ನಾಗಿ ಅಳವಡಿಸಿಕೊಳ್ಳುವ ಅಧಿಕಾರವನ್ನು ಎಲ್ಲ ರಾಜ್ಯಗಳು, ಕೇಂದ್ರಾಡಳಿತ ಪ್ರದೇಶಗಳಿಗೆ ನೀಡಲಾಗಿದೆ. ಮಾತೃಭಾಷೆಯನ್ನು ಬೋಧನಾ ಮಾಧ್ಯಮವನ್ನಾಗಿ ಸ್ವೀಕರಿಸುವುದರ ಜೊತೆಗೆ ಇಂಗ್ಲಿಷ್ ಕಲಿಕೆಗೂ

ಮಹತ್ವ ಕಲ್ಪಿಸಲಾಗಿದೆ. ವಿದ್ಯಾರ್ಥಿಗಳು ರಾಷ್ಟ್ರ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ಯಶಸ್ವಿಯಾಗಬೇಕಿದ್ದಲ್ಲಿ ಇಂಗ್ಲಿಷ್ ಜ್ಞಾನ ಅಗತ್ಯ. ಅದರಿಂದ ಬೋಧನಾ ಮಾಧ್ಯಮವಾಗಿ ಮಾತೃಭಾಷೆ ಇದ್ದರೂ ಎರಡನೇ ಭಾಷೆಯಾಗಿ ಇಂಗ್ಲಿಷ್ ಕಲಿಸಬೇಕು ಎಂದು ಹೊಸ ಶಿಕ್ಷಣ ನೀತಿಯ ಕರಡಿನಲ್ಲಿ ಹೇಳಿದೆ.

ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿರುವ ಈ ಅಂಶಗಳಿಂದ ಮಾತೃಭಾಷೆಯಲ್ಲಿ ಶಿಕ್ಷಣ ಕೊಡಬೇಕೆಂಬ ಬೇಡಿಕೆಗೆ ಹೆಚ್ಚು ಬಲ ಬಂದಂತಾಗಿದೆ. ಮಾತೃಭಾಷೆಯಲ್ಲಿ ಶಿಕ್ಷಣ ನೀಡಲು ಅವಕಾಶ ಕಲ್ಪಿಸಿದ್ದು ಸರಿ. ಆದರೆ, ಅದನ್ನು ಕಡ್ಡಾಯ ಮಾಡಬೇಕಿತ್ತು ಎಂಬ ಅಭಿಪ್ರಾಯ ಶಿಕ್ಷಣ ತಜ್ಞರಿಂದ ವ್ಯಕ್ತವಾಗಿದೆ.

**ಕನ್ನಡ ಭಾಷಾ ಕಲಿಕೆ ಮಸೂದೆ–೨೦೧೫**

ರಾಜ್ಯದಲ್ಲಿ ೧ರಿಂದ ೫ನೆಯ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲೇ ಶಿಕ್ಷಣ ನೀಡುವ ಹಾಗೂ ರಾಜ್ಯದ ಎಲ್ಲಾ ಶಾಲೆಗಳಲ್ಲಿ ೧೦ನೆಯ ತರಗತಿಯವರೆಗೆ ಪ್ರಥಮ ಇಲ್ಲವೇ ದ್ವಿತೀಯ ಭಾಷೆಯಾಗಿ ಕನ್ನಡ ಕಲಿಕೆಯನ್ನು ಕಡ್ಡಾಯಗೊಳಿಸುವ ಎರಡು ಮಸೂದೆಗಳನ್ನು ವಿಧಾನಸಭೆ ಅಂಗೀಕರಿಸಿದೆ.

ರಾಜ್ಯದಲ್ಲಿನ ಎಲ್ಲಾ ಶಾಲೆಗಳಲ್ಲಿ ೧೦ನೆಯ ತರಗತಿಯವರೆಗೆ ವ್ಯಾಸಂಗ ಮಾಡುವ (ಸಿಬಿಎಸ್‌ಇ ಮತ್ತು ಐಸಿಎಸ್‌ಇ ಶಾಲೆಗಳನ್ನು ಹೊರತುಪಡಿಸಿ) ಎಲ್ಲಾ ವಿದ್ಯಾರ್ಥಿಗಳಿಗೆ ೨೦೧೫–೧೬ನೆಯ ಶೈಕ್ಷಣಿಕ ವರ್ಷದಿಂದ ಹಂತ ಹಂತವಾಗಿ ಕನ್ನಡವನ್ನು ಒಂದು ಭಾಷೆಯನ್ನಾಗಿ, ಕಡ್ಡಾಯವಾಗಿ ಕಲಿಸಲು "ಕನ್ನಡ ಭಾಷಾ ಕಲಿಕೆ ಮಸೂದೆ–೨೦೧೫" ಅವಕಾಶ ಕಲ್ಪಿಸುತ್ತದೆ.

'ಸದನ ಅಂಗೀಕರಿಸಿದ ಈ ಎರಡೂ ಮಸೂದೆಗಳಿಗೆ ರಾಷ್ಟ್ರಪತಿಗಳ ಅಂಕಿತ ಬಿದ್ದರೆ, ಈ ಸರ್ಕಾರದ ನಿಲುವಿಗೆ ವಿರುದ್ಧವಿರುವ ೧೭೦೦ಕ್ಕೂ ಅಧಿಕ ಸಂಖ್ಯೆಯ ಖಾಸಗಿ ಶಾಲೆಗಳು ಶಿಕ್ಷಣ ಮಾಧ್ಯಮದ ನಿಯಮವನ್ನು ಪಾಲನೆ ಮಾಡುವುದು ಅನಿವಾರ್ಯವಾಗುತ್ತದೆ' ಎಂದು ೨೦೧೫ರ ಮಾರ್ಚ್ ತಿಂಗಳಿನಲ್ಲಿ, ಅಂದಿನ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು ವಿಧಾನ ಸಭೆಯಲ್ಲಿ ತಿಳಿಸಿದ್ದರು.

ಈ ಮಸೂದೆಗಳಿಗೆ ರಾಷ್ಟ್ರಪತಿಗಳ ಅಂಕಿತ ಬಿದ್ದಿದೆಯಾ ಎಂಬ ವಿಷಯವಾಗಲೀ, ಇವು ಯಾವ ಹಂತದಲ್ಲಿವೆ ಎಂಬ ವಿಷಯವಾಗಲೀ, ತಿಳಿದಿಲ್ಲ. ಆದರೆ ಕನ್ನಡವನ್ನು ಶಿಕ್ಷಣದ ಭಾಷೆಯಾಗಿ ಜಾರಿಗೆ ತರುವ ನಿಟ್ಟಿನಲ್ಲಿ, ಸರ್ಕಾರ ಪ್ರಾಮಾಣಿಕ ಪ್ರಯತ್ನ ಮಾಡುತ್ತಿರುವುದು ಇದರಿಂದ ವೇದ್ಯವಾಗುತ್ತದೆ.

**ದಕ್ಷಿಣ ಭಾರತೀಯ ಇಂಗ್ಲಿಷ್ ಪ್ರಾದೇಶಿಕ ಸಂಸ್ಥೆಯ ಶಿಫಾರಸು**

'ಮಾತೃಭಾಷೆಯನ್ನು (ಕನ್ನಡ) ಮಾಧ್ಯಮವಾಗಿ ಉಳಿಸಿಕೊಂಡು, ಸಮರ್ಥ ಶಿಕ್ಷಕರಿಂದ ಇಂಗ್ಲಿಷನ್ನು ಒಂದು ಭಾಷೆಯಾಗಿ, ಪರಿಣಾಮಕಾರಿಯಾಗಿ ಕಲಿಸಬಹುದು' ಎಂದು ರಾಜ್ಯ ಸರ್ಕಾರಕ್ಕೆ 'ದಕ್ಷಿಣ ಭಾರತೀಯ ಇಂಗ್ಲಿಷ್ ಪ್ರಾದೇಶಿಕ ಸಂಸ್ಥೆ' ಶಿಫಾರಸು ಮಾಡಿದೆ. 'ಮಕ್ಕಳಲ್ಲಿ ಮನೆ ಭಾಷೆ (ಮಾತೃಭಾಷೆ) ಮತ್ತು ರಾಜ್ಯಭಾಷೆಯ ಜೊತೆಗೆ ಇಂಗ್ಲಿಷ್ ಭಾಷಾ ಕೌಶಲ ವೃದ್ಧಿಗೆ ನಮ್ಮ ಪೂರ್ಣ ಬೆಂಬಲವಿದೆ' ಎಂದು ಪ್ರತಿಪಾದಿಸಿರುವ ಈ ಸಂಸ್ಥೆ 'ಆರನೆಯ ತರಗತಿಯಿಂದ ಇಂಗ್ಲಿಷ್ ಮಾಧ್ಯಮವಾಗಿ ಮುಂದುವರಿಸಬಹುದು. ಒಂದು ವೇಳೆ ಇಂಗ್ಲಿಷ್ ಮಾಧ್ಯಮ ಅತೀ ಅಗತ್ಯ ಎಂದಾದರೆ ನಾಲ್ಕನೆಯ ತರಗತಿಯಿಂದ ಆರಂಭಿಸಬಹುದು' ಎಂದೂ ಸಲಹೆ ನೀಡಿದೆ.

೧೯೬೮ರ ಶಿಕ್ಷಣ ನೀತಿಯ ಅನ್ವಯ ಪ್ರಾಥಮಿಕ ಹಂತದಲ್ಲಿ ಮಕ್ಕಳ ಕಲಿಕಾ ಮಾಧ್ಯಮ ಮಾತೃಭಾಷೆಯಲ್ಲಿರಬೇಕು. ೧೯೮೬ರಲ್ಲಿ ಎನ್‌ಸಿಇಆರ್‌ಟಿ ಸಲ್ಲಿಸಿದ



ಶಿಫಾರಸಿನಲ್ಲೂ ಪ್ರಾಥಮಿಕ ಹಂತದ ಶಿಕ್ಷಣ ಮಾತೃಭಾಷೆಯಲ್ಲಿರಬೇಕು ಎಂದಿದೆ. ಈ ಎಲ್ಲಾ ಕಾರಣಗಳಿಂದ ಕಿರಿಯ ಪ್ರಾಥಮಿಕ ಶಾಲೆಗಳಲ್ಲಿ ಇಂಗ್ಲಿಷ್ ಮಾಧ್ಯಮ ಅನುಷ್ಠಾನಗೊಳಿಸಬಾರದು ಎಂದು ವರದಿ ಸ್ಪಷ್ಟಪಡಿಸಿದೆ.

ಇನ್ನು ಶಿಕ್ಷಣ ತಜ್ಞರು, ಭಾಷಾ ತಜ್ಞರು, ಕನ್ನಡಾಭಿಮಾನಿಗಳು, ಸಾಹಿತಿಗಳು, ಶಿಕ್ಷಣದಲ್ಲಿ ಮಾತೃಭಾಷಾ ಮಾಧ್ಯಮ ಕುರಿತು ವ್ಯಕ್ತಪಡಿಸಿರುವ ಅಭಿಪ್ರಾಯಗಳ ಕುರಿತು ತಿಳಿಯುವ.

**ಗಾಂಧೀಜಿ**

ದೇಶ ಭಾಷೆಯ ಮಹತ್ವದ ಬಗ್ಗೆ ಗಾಂಧೀಜಿ ಹೀಗೆ ಹೇಳಿದ್ದಾರೆ: "ಪರಭಾಷೆಯ ಮೂಲಕ ಕೊಡುತ್ತಿರುವ ಶಿಕ್ಷಣ ನಮ್ಮ ಮಕ್ಕಳ ಬುದ್ಧಿ ಶಕ್ತಿಯನ್ನು ಬೆಂಡು ಮಾಡಿದೆ. ಅವರನ್ನು ಬಾಯಿಪಾಠ ಮಾಡುವ ಗಿಳಿಗಳನ್ನಾಗಿ ಮಾಡಿದೆ. ನಾನೇನಾದರೂ ಸರ್ವಾಧಿಕಾರಿಯಾಗಿದ್ದಿದ್ದರೆ ಕೂಡಲೇ ಪರಭಾಷೆಯ ಮೂಲಕ ನೀಡುವ ವಿದ್ಯಾಭ್ಯಾಸ ಪದ್ಧತಿಯನ್ನು ನಿಲ್ಲಿಸುತ್ತಿದ್ದೆ. ತಾನು ಜೀವಿಸುವ ಭಾಷೆಯಲ್ಲಿ ಕಲಿಯದ ಮಗುವಿಗೆ ಸ್ವತಂತ್ರವಾಗಿ ವಿಚಾರ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. ಈ ನೆಲದಲ್ಲಿ ನಿಂತು ಯೋಚಿಸುವುದಕ್ಕೂ ಅದು ಅಸಮರ್ಥವಾಗುತ್ತದೆ."

**ನೋಮ್ ಚೋಮ್‌ಸ್ಕಿ**

ಸಮಕಾಲೀನ ಜಗತ್ತಿನ ಶ್ರೇಷ್ಠ ಭಾಷಾತಜ್ಞ ನೋಮ್ ಚೋಮ್‌ಸ್ಕಿ "ಮಗುವಿನ ೭ನೆಯ ವಯಸ್ಸಿನವರೆಗೆ ಮಾತೃಭಾಷೆಯ ಹೊರತಾಗಿ ಇನ್ನೊಂದು ಭಾಷೆಯನ್ನು ಕಲಿಸುವುದು ಅದರ ಗ್ರಹಿಕೆಯ ಮೂಲ ನೆಲೆಗಳನ್ನೇ ಅಸ್ತವ್ಯಸ್ತಗೊಳಿಸಿ, ಅದರ ಸೃಜನ ಶಕ್ತಿಯನ್ನು ಭಂಗಗೊಳಿಸಬಲ್ಲುದು" ಎಂದು ಹೇಳಿದ್ದಾರೆ.

**ಜಿ. ಎಸ್. ಶಿವರುದ್ರಪ್ಪ**

ನಮ್ಮದಲ್ಲದ ಭಾಷೆಯಲ್ಲಿ ನಾವು ಏನೇ ಮಾಡಿದರೂ ಪರಿಣತರಾಗಲಾರೆವು ಎಂಬ ತಿಳುವಳಿಕೆ ನಮಗೆ ಮೂಡುತ್ತಿಲ್ಲ. ಇಂಗ್ಲಿಷ್ ಅಂತರರಾಷ್ಟ್ರೀಯ ಭಾಷೆ ಎಂಬ ಸುಳ್ಳು ಕಾರಣಕ್ಕೆ, ಬಹು ಭಾಷೆಗಳಿರುವ ಈ ದೇಶದಲ್ಲಿ ಇಂಗ್ಲಿಷ್ ನಮ್ಮನ್ನು ಹಿಡಿದು ಕೂಡಿಸುವ ಶಕ್ತಿಯಾಗಿದೆ ಎಂಬ ಭ್ರಮೆಗೆ ಕಟ್ಟುಬಿದ್ದು ಇನ್ನೂ ಇಂಗ್ಲಿಷನ್ನು ಶಿಕ್ಷಣ ಮಾಧ್ಯಮವಾಗಿ ಮುಂದುವರಿಸುತ್ತಿದ್ದೇವೆ.

ಇಂಗ್ಲಿಷ್ ಮಾಧ್ಯಮದ ಮೂಲಕ ಶಿಕ್ಷಣ ಪಡೆದವರೇ ಉದ್ಯೋಗ ಕ್ಷೇತ್ರದ ಸ್ಪರ್ಧೆಯಲ್ಲಿ ಮುಂದಾಳುಗಳಾಗಿ ಗೆಲ್ಲಬಲ್ಲರು ಎಂಬುದನ್ನು ಈ ದೇಶದ ನಡವಳಿಕೆ



ನಿಜ ಮಾಡಿತೋರಿಸಿದೆ. ಎಲ್ಲಿಯವರೆಗೆ ಇಂಗ್ಲಿಷ್ ಮಾಧ್ಯಮದ ಮೂಲಕ ಶಿಕ್ಷಣ ಪಡೆದವರಿಗೆ ಉದ್ಯೋಗ ಅವಕಾಶಗಳನ್ನು ಕಲ್ಪಿಸಿಕೊಡುವಂತಹ ಔದ್ಯೋಗಿಕ ನೀತಿಯನ್ನು ನಮ್ಮ ಸರ್ಕಾರ ಮುಂದುವರಿಸಿಕೊಂಡು ಹೋಗುತ್ತದೋ ಅಲ್ಲಿಯತನಕ ಕನ್ನಡ ನಾಡಿನಲ್ಲಿ ಕನ್ನಡಕ್ಕೆ ಸಹಜವಾಗಿ ಸಲ್ಲಬೇಕಾದ ಸ್ಥಾನ–ಮಾನಗಳು ಸಲ್ಲುವುದಿಲ್ಲ.

**ರಾಮಚಂದ್ರ ಗುಹಾ**

ಬಡವರಲ್ಲಿ ಇಂಗ್ಲಿಷ್ ಭಾಷೆಯ ಬಗ್ಗೆ ನಿಜಕ್ಕೂ ಹಸಿವಿದೆ. ತಮ್ಮ ಮಕ್ಕಳು ತಮ್ಮದೇ ವೃತ್ತಿಯಲ್ಲಿ ಮುಂದುವರಿಯಬಾರದೆಂಬ ದೃಢ ನಿರ್ಧಾರವನ್ನು ಮನೆಗೆಲಸದವರೂ ತಾಳಿದ್ದಾರೆ. ವಂಶ ಪಾರಂಪರ್ಯದ ತೊತ್ತುಗಾರಿಕೆಯಿಂದ ತಮ್ಮ ಮಕ್ಕಳು ಪಾರಾಗುವ ಉತ್ತಮ ವಿಧಾನವೆಂದರೆ ಇಂಗ್ಲಿಷ್ ಕಲಿಯಬೇಕೆಂಬುದನ್ನವರು ಗುರುತಿಸಿಕೊಂಡಿದ್ದಾರೆ.

ಭಾರತದಂತಹ ದೊಡ್ಡ ಮತ್ತು ವೈವಿಧ್ಯಮಯ ದೇಶದಲ್ಲಿ ಇಂಗ್ಲಿಷ್ ಮಾಧ್ಯಮದಲ್ಲಿ ಶಿಕ್ಷಣವನ್ನು ಕೊಡುವುದಿರಲಿ, ಒಂದು ಭಾಷೆಯನ್ನಾಗಿ ಇಂಗ್ಲಿಷ್ ಅನ್ನು ಕಲಿಸಲು ಕೂಡ ಯೋಜನೆಗಳಿಲ್ಲ, ತಯಾರಿ ಇಲ್ಲ. ಹೀಗಾಗಿ ಸ್ಥಳೀಯ ಭಾಷೆಗಳನ್ನು ಕಲಿಸುತ್ತಿರುವ ಶಾಲೆಗಳಲ್ಲೇ ಇಂಗ್ಲಿಷನ್ನು ಸೂಕ್ತವಾಗಿ ಕಲಿಸಬೇಕೇ ಹೊರತು, ಸರ್ಕಾರವು ಪ್ರತ್ಯೇಕ ಇಂಗ್ಲಿಷ್ ಮಾಧ್ಯಮದ ಶಾಲೆಗಳನ್ನು ತೆರೆದು ಸಂಪನ್ಮೂಲವನ್ನು ಪೋಲು ಮಾಡಬಾರದು.

**ಡಾ॥ ಸುಶಿ ಕಾಡನಕುಪ್ಪೆ**

ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಕೆಯನ್ನು ಶುರು ಮಾಡುವ ಮಕ್ಕಳು ವ್ಯವಹರಿಸುವಷ್ಟು ಇಂಗ್ಲಿಷ್ ಕಲಿಯುತ್ತಾರೆ ನಿಜ. ಆದರೆ ವಿಷಯವನ್ನು ಪೂರ್ಣವಾಗಿ ಗ್ರಹಿಸುವ, ಸೃಜನಶೀಲವಾಗಿ ಚಿಂತಿಸುವ, ವಿಶ್ಲೇಷಿಸುವ ಕೌಶಲಗಳನ್ನು ಕಲಿಯುವುದಿಲ್ಲ.

ವಿಶ್ವದ, ಮುಖ್ಯವಾಗಿ ಮುಂದುವರಿಯುತ್ತಿರುವ ದೇಶಗಳ, ಶಿಕ್ಷಣ ತಜ್ಞರು ಮತ್ತು ದಿನನಿತ್ಯ ಪಾಠ ಹೇಳಿಕೊಡುವ ಶಿಕ್ಷಕರ ಜೊತೆಗೂಡಿ 'ಯುನೆಸ್ಕೊ' ನಿರಂತರ ಅಧ್ಯಯನಗಳನ್ನು ನಡೆಸಿದೆ. ಪದೇಪದೇ ಸಾಬೀತಾಗಿರುವುದು ತಾಯ್ನುಡಿಯ ಕಲಿಕೆಯ ಲಾಭಗಳು ಮಾತ್ರ. ತಾಯ್ನುಡಿಯ ಕಲಿಕೆಯನ್ನು ಮೊದಲ ಆರು ವರ್ಷಗಳಲ್ಲಿ ಕಲಿತ ಮಕ್ಕಳು ವಿಶ್ವದಾದ್ಯಂತ ಜೀವನದಲ್ಲಿ ಸುಧಾರಿತಮಟ್ಟದಲ್ಲಿದ್ದಾರೆಂದು ಸಂಶೋಧನೆಗಳು ತೋರಿಸಿವೆ. ಮನೆಯಿಂದ ಮೊದಲ ಬಾರಿಗೆ ಶಾಲೆಗೆ ಕಾಲಿಡುವ ಮಕ್ಕಳ ಮನಸ್ಸು ತನ್ನ ಅರಿವಿನಲ್ಲಿರುವ ಭಾಷೆಯಲ್ಲಿಯೇ ಕಲಿಯಲು ಶಕ್ತವಾಗಿರುತ್ತದೆ. ವಿಷಯಗಳನ್ನು ಕ್ರಮಬದ್ಧವಾಗಿ ಕಲಿಯಲು ಸಾಧ್ಯವಾಗುವುದು ಶಾಲೆಯ, ಮನೆಯ ಮತ್ತು ಹೊರಗಿನ ಸಮಾಜದ ಭಾಷೆಯು ಒಂದೇ ಆಗಿದ್ದಾಗ ಮಾತ್ರ.

**ಉಪಸಂಹಾರ**

ಮೇಲಿನ ಆದೇಶ, ಅಭಿಪ್ರಾಯ, ವರದಿ, ಅನಿಸಿಕೆ ಮುಂತಾದ ಎಲ್ಲಾ ಸಂದರ್ಭಗಳಲ್ಲೂ, ಮಾತೃಭಾಷೆಯನ್ನು ಶಿಕ್ಷಣದ ಮಾಧ್ಯಮವಾಗಿಯೂ, ಇಂಗ್ಲಿಷನ್ನು ಒಂದು ಭಾಷೆಯಾಗಿಯೂ ಕಲಿಸುವುದನ್ನೇ ಪ್ರತಿಪಾದಿಸಲಾಗಿದೆ.




ಆದರೂ, ಶಿಕ್ಷಣ ಮಾಧ್ಯಮ ಕುರಿತ ಚರ್ಚೆ ಸರಳರೇಖಾತ್ಮಕವಲ್ಲ. ಪ್ರಾಥಮಿಕ ಹಂತದಲ್ಲಿ ಒಂದು ಭಾಷೆಯನ್ನು ಅಂದರೆ ಮಾತೃಭಾಷೆಯನ್ನು ಮಾತ್ರ ಮಕ್ಕಳಿಗೆ ಕಲಿಸಬೇಕು. ಅನಂತರ ಇಂಗ್ಲಿಷನ್ನು ಒಂದು ಭಾಷೆಯಾಗಿ ಕಲಿಸಬೇಕು ಎಂದು ಕೆಲವರು ವಾದಿಸಿದರೆ, ಕನ್ನಡದ ಜೊತೆಗೇ ಇಂಗ್ಲಿಷನ್ನೂ ಕಲಿಸಬೇಕು, ಈ ಎರಡೂ ಭಾಷೆಗಳನ್ನು ಏಕ ಕಾಲದಲ್ಲಿ ಕಲಿಯುವ ಸಾಮರ್ಥ್ಯ ಮಕ್ಕಳಿಗಿರುತ್ತದೆ ಎಂದು ಇನ್ನು ಕೆಲವರು ವಾದಿಸುತ್ತಾರೆ. ಆದರೆ ಶಾಲೆಯಲ್ಲಿ ಕಲಿಸುವ ಭಾಷೆ, ಮನೆಯ ಭಾಷೆ ಮತ್ತು ಪರಿಸರದ ಭಾಷೆ ಒಂದೇ ಆಗಿದ್ದಾಗ ಮಾತ್ರ ಮಗು ಭಾಷೆಯನ್ನು ಬೇಗ ಕಲಿಯುತ್ತದೆ.

ಜಾಗತೀಕರಣದ ಈ ದಿನಗಳಲ್ಲಿ ಇಂಗ್ಲಿಷ್ ಉದ್ಯೋಗ ಸೃಷ್ಟಿಸುವ ಭಾಷೆ, ಅನ್ನ ನೀಡುವ ಭಾಷೆ ಎಂಬ ಭಾವನೆ ಎಲ್ಲರಲ್ಲೂ ಮನೆ ಮಾಡಿದೆ. ಸೀಮಿತ ಅರ್ಥದಲ್ಲಿ ಅದು ನಿಜವೂ ಹೌದು. ಆದರೆ ಇಂಗ್ಲಿಷ್ ಭಾಷೆಯ ವ್ಯಾಮೋಹಕ್ಕೆ ಸಿಕ್ಕಿ, ಇಂದಿನ ತಲೆಮಾರು, ಸ್ಥಳೀಯ ಭಾಷೆಯಲ್ಲಿ ಅನಕ್ಷರಸ್ಥರೇ ಆಗುತ್ತಿರುವುದು ಭಾಷಿಕ ದುರಂತ.

ಇಂಗ್ಲಿಷನ್ನು ಒಂದು ಭಾಷೆಯಾಗಿ ಕಲಿಯುವ ಅವಕಾಶವಿದ್ದಾಗ್ಯೂ ವಿದ್ಯಾರ್ಥಿಗಳು, ಪೋಷಕರು ಇಂಗ್ಲಿಷ್ ಮಾಧ್ಯಮವನ್ನೇ ಆಯ್ಕೆ ಮಾಡಿಕೊಳ್ಳುವುದು ಏಕೆ? ಏಕೆಂದರೆ 'ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಯದಿದ್ದರೆ ಇಂಗ್ಲಿಷ್ ಬರುವುದಿಲ್ಲ' ಎಂಬ ಅಭಿಪ್ರಾಯ ವಿದ್ಯಾಥಿಗಳಲ್ಲಿ, ಪೋಷಕರಲ್ಲಿ, ಅಷ್ಟೇ ಏಕೆ ಸರ್ಕಾರದಲ್ಲೂ ಇದೆ. ಇಂಗ್ಲಿಷ್ ಮಾಧ್ಯಮ ಶಾಲೆಗಳಲ್ಲಿ ಓದುವ ಮಕ್ಕಳಿಗೆ ಇಂಗ್ಲಿಷ್ ಮಾತನಾಡಲು ಬರುವುದು ಇಂಗ್ಲಿಷ್ ಮಾಧ್ಯಮದಿಂದಲ್ಲ, ಅಲ್ಲಿನ ಇಂಗ್ಲಿಷ್ ವಾತಾವರಣದಿಂದ. ಅಂದರೆ ಎಲ್ಲರೂ ಇಂಗ್ಲಿಷ್‌ನಲ್ಲೇ ಮಾತನಾಡಬೇಕು ಎಂಬ ಕಟ್ಟುಪಾಡು ಇರುವುದರಿಂದ. ಹಾಗಾಗಿ ಇಂಗ್ಲಿಷನ್ನು ಒಂದು ಭಾಷೆಯಾಗಿ ಕಲಿಸುವ ಸರ್ಕಾರಿ ಶಾಲೆಗಳಲ್ಲೂ ಇಂಥ ವಾತಾವರಣ ಕಲ್ಪಿಸಿದರೆ ನಮ್ಮ ಮಕ್ಕಳು ಕನ್ನಡ ಮಾಧ್ಯಮದಲ್ಲಿ ಓದುತ್ತಿದ್ದರೂ ಇಂಗ್ಲಿಷ್ ಮಾತಾಡುವುದನ್ನು ಕಲಿಯುತ್ತಾರೆ.

ರಾಜ್ಯ ಸರ್ಕಾರ ೧೦೦೦ ಇಂಗ್ಲಿಷ್ ಮಾಧ್ಯಮ ಶಾಲೆಗಳನ್ನು ತೆರೆದ ಮಾತ್ರಕ್ಕೆ ಮಕ್ಕಳಿಗೆ ಇಂಗ್ಲಿಷ್ ಬಂದುಬಿಡುವುದಿಲ್ಲ. ಈಗಾಗಲೇ ಜಾರಿಯಲ್ಲಿರುವ, ಒಂದನೆಯ ತರಗತಿಯಿಂದ ಇಂಗ್ಲಿಷನ್ನು ಒಂದು ಭಾಷೆಯಾಗಿ ಕಲಿಸುವ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವುದರ ಕಡೆ ಗಮನ ಹರಿಸಬೇಕು. ಇಂಗ್ಲಿಷ್ ಭಾಷೆಯ ಬೋಧನೆಗೆಂದೇ ಪ್ರತ್ಯೇಕ, ಪರಿಣತ, ಸಮರ್ಥ ಶಿಕ್ಷಕರಿಂದ, ಆಧುನಿಕ ಬೋಧನಾ ಪರಿಕರಗಳನ್ನು ಬಳಸಿ, ಇಂಗ್ಲಿಷನ್ನು ಬೋಧಿಸುವ ವ್ಯವಸ್ಥೆಯಾಗಬೇಕು. ಏಕೆಂದರೆ ಜಗತ್ತಿನಾದ್ಯಂತ ಇಂಗ್ಲಿಷ್ ಎಲ್ಲರಿಗೂ ಅನಿವಾರ್ಯವಾಗಿದೆ. ಒಂದು ಅಂದಾಜಿನ ಪ್ರಕಾರ ೨೦೫೦ರ ಹೊತ್ತಿಗೆ ಇಂಗ್ಲಿಷ್ ಬದುಕಿನ ಮೂಲಭೂತ ಅವಶ್ಯಕತೆಗಳಲ್ಲಿ ಒಂದಾಗಿರುತ್ತದೆ. ಒಟ್ಟಿನಲ್ಲಿ ಇಂಗ್ಲಿಷ್ ಒಂದು ಭಾಷೆಯಾಗಿ ಉಳಿಯದೆ, ಅದೊಂದು ಸಾಮಾಜಿಕ ವಾಸ್ತವವಾಗಿಯೇ ರೂಪುಗೊಳ್ಳುತ್ತದೆ ಎನ್ನಲಾಗಿದೆ. ಈ ಹೊತ್ತಿನ ಜಾಗತೀಕರಣ ಪ್ರಕ್ರಿಯೆಯಲ್ಲಿ ಆರ್ಥಿಕ ನೀತಿಗಳ ಯಶಸ್ಸಿಗೆ ಇಂಗ್ಲಿಷ್ ಕಾರಣ ಎಂದು ನಂಬಲಾಗಿದೆ.

ರಾಜ್ಯ ಸರ್ಕಾರ ೧೦೦೦ ಇಂಗ್ಲಿಷ್ ಶಾಲೆಗಳನ್ನು ತೆರೆಯುವ ಯೋಜನೆಯನ್ನು ಕೈಬಿಟ್ಟು, ಪ್ರಾಥಮಿಕ ಹಂತದಿಂದಲೇ ಕನ್ನಡವನ್ನು ಶಿಕ್ಷಣ ಮಾಧ್ಯಮವಾಗಿಯೂ ಮತ್ತು ಇಂಗ್ಲಿಷನ್ನು ಒಂದು ಭಾಷೆಯಾಗಿಯೂ ಕಲಿಸುವ ವ್ಯವಸ್ಥೆ ಮುಂದುವರಿಸಬೇಕು. ಇಲ್ಲವೇ ಎ. ಆರ್. ಕೃಷ್ಣಶಾಸ್ತ್ರಿಗಳು ಹೇಳಿರುವಂತೆ "ದಕ್ಷಿಣ ಭಾರತದ, ಅಂಗೈ ಅಗಲ ಜಾಗದಲ್ಲಿರುವ ಕನ್ನಡವನ್ನು, ಬಂಗಾಳ ಕೊಲ್ಲಿಗೋ, ಅರಬ್ಬಿ ಸಮುದ್ರಕ್ಕೋ ಗುಡಿಸಿ ಹಾಕಿಬಿಡಬೇಕು."

**ಸಿ. ಚಿಕ್ಕತಿಮ್ಮಯ್ಯ ಹಂದನಕೆರೆ**
ನಂ.೬, ಮೊದಲನೆಯ ಮುಖ್ಯ ರಸ್ತೆ, ಬಸವೇಶ್ವರ ಬಡಾವಣೆ
ವಿಜಯನಗರ, ಬೆಂಗಳೂರು – ೫೬೦ ೦೪೦



# ಅಂತಃಕರಣದ ಸಾಗರವಾಗಿದ್ದ ಕಲಾವಿದೆ **ಎಸ್. ಮಾಲತಿ**

"ಕನ್ನಡ ರಂಗ ಕಲಾವಿದೆ, ನಿರ್ದೇಶಕಿ ಎಸ್. ಮಾಲತಿ ನಿಧನ" – ಎಂಬ ವಾರ್ತೆ ಮಾರ್ಚ್ ೩೧ರಂದು ಟಿ.ವಿ ಮತ್ತು ಸಾಮಾಜಿಕ ಜಾಲತಾಣಗಳಲ್ಲಿ ಕಾಣಿಸಿಕೊಂಡಾಗ ಮನಸ್ಸಿಗಾದ ನೋವು ಹೇಳತೀರದು. ಅವರನ್ನು ಬರೀ ರಂಗ ಕಲಾವಿದೆಯೆಂದಷ್ಟೇ ಹೇಳಿದರೆ ಸಾಕೆ? ಖಂಡಿತ ಇಲ್ಲ. ರಂಗ ಕಲಾವಿದೆ, ನಿರ್ದೇಶಕಿ, ಬರಹಗಾರ್ತಿ, ಸಾಮಾಜಿಕ ಹೋರಾಟಗಾರ್ತಿ, ಹೃದಯವಂತ ಕಲಾವಿದೆ – ಎಲ್ಲವೂ ಆಗಿದ್ದರು, ಎಂಬುದು ಅವರನ್ನು ಹತ್ತಿರದಿಂದ ಬಲ್ಲವರಿಗೆ ಮಾತ್ರ ಗೊತ್ತು. ಸಾವಿನ ಮುಂಚಿನ ಒಂದೆರಡು ತಿಂಗಳುಗಳ ಕಾಲದ ಅವರ ಅನಾರೋಗ್ಯ, ಆಸ್ಪತ್ರೆಯ ವಾಸ, ಇವೆಲ್ಲವುಗಳ ಬಗ್ಗೆ ನನಗೆ ಅರಿವಿದ್ದರೂ ಅವರ 'ಸಾವು' ಎನ್ನುವ ಪದ ಕೇಳಿದೊಡನೆ ಅದು ಉಂಟುಮಾಡಿದ ಆಘಾತವೇ ಬೇರೆ. ಆ ಕ್ಷಣ ಅವರ ಮತ್ತು ನನ್ನ ಸಂಬಂಧದ ಸುರುಳಿ ಬಿಚ್ಚಿದಾಗ ಮೂಡಿದ್ದು ಅದೆಷ್ಟು ವರ್ಣರಂಜಿತ ಚಿತ್ರಗಳು!

೧೯೭೦ರ ಸಮಯ. ಚಿತ್ರಕಲಾ ಪರಿಷತ್ತಿನ ಬಯಲು ರಂಗಮಂದಿರದಲ್ಲಿ ಸಮುದಾಯದ ವತಿಯಿಂದ ಕುವೆಂಪುರವರ 'ಕಲ್ಕಿ' ರಂಗ ಪ್ರದರ್ಶನ ನಡೆದಿತ್ತು. ಈ ಕಾರ್ಯಕ್ರಮದಲ್ಲಿ ಎಸ್. ಮಾಲತಿ ಸೂತ್ರಧಾರಿಣಿಯಾಗಿ ಅಭಿನಯಿಸಿದ್ದರು. ಅಪೂರ್ವ ಸುಂದರಿ, ಶ್ವೇತ ವಸ್ತ್ರಧಾರಿಣಿಯಾಗಿದ್ದ ಮಾಲತಿಯ ಈ ರಂಗ ಅಭಿನಯ ಇಂದಿಗೂ ನನಗೆ ಕಣ್ಣಿಗೆ ಕಟ್ಟಿದಂತಿದೆ. ಮೊದಲ ಬಾರಿ ಮಾಲತಿಯನ್ನು ಹೀಗೆ ರಂಗದಲ್ಲಿ ಕಂಡ ದಿನ ಅವರು ನನ್ನ ಬದುಕಿನ ರಂಗದಲ್ಲೂ ಒಬ್ಬ ಪಾತ್ರಧಾರಿಯಾಗಬಹುದು ಎಂದು ಆಗ ನನಗೆ ಅನಿಸಿರಲಿಲ್ಲ.

ಇದೇ ಸಮಯದಲ್ಲಿ ಸಮುದಾಯ ರಾಜ್ಯಾದ್ಯಂತ ಬೀದಿ ನಾಟಕಗಳ ಜಾಥಾವನ್ನು ಹಮ್ಮಿಕೊಂಡಿತ್ತು. ಈ ಜಾಥಾದಲ್ಲಿ ಸಕ್ರಿಯವಾಗಿ ತೊಡಗಿಕೊಂಡಿದ್ದ ಪತ್ರಕರ್ತೆ ಗಾಯತ್ರಿದೇವಿ ನನಗೆ ಪರಿಚಯವಾಗಿ, ಗೆಳತಿಯೂ ಆಗಿದ್ದಳು. ಅವಳೊಡನೆ ಬೆಂಗಳೂರಿನ ಸುತ್ತಮುತ್ತ ನಡೆದ ಜಾಥಾಗಳಿಗೆಂದು ಸುತ್ತಾಡುತ್ತಿದ್ದಾಗ ಅವರಿಗೆ ಆ ವೇಳೆಗಾಗಲೇ ಗೆಳತಿಯಾಗಿದ್ದ ಮಾಲತಿಯ ಸ್ನೇಹ ನನಗೂ ಸಿಕ್ಕಿ ಅವರು ನನಗೆ ಆಪ್ತರಾದರು. ವೈಟ್‌ಫೀಲ್ಡ್, ಮಾರತ್ ಹಳ್ಳಿ, ಕನಕಪುರದಲ್ಲಿ ನಡೆದ ಜಾಥಾಗೆ ಹೋದಾಗ ನಾನು ಮಾಲತಿಯವರೊಂದಿಗೆ ಇನ್ನೂ ಹೆಚ್ಚು ಹತ್ತಿರವಾದೆ. ವಿದ್ಯಾರ್ಥಿದೆಸೆಯಲ್ಲಿ ನಾನೆಂದೂ ಯಾವ ಚಳುವಳಿಯಲ್ಲೂ ಭಾಗವಹಿಸಿದವಳಲ್ಲ. ನನ್ನ ಮೊದಲ ಸಾರ್ವಜನಿಕ ಭಾಗವಹಿಸುವಿಕೆಯೆಂದರೆ ಅದು ಸಮುದಾಯದ ರಂಗಚಟುವಟಿಕೆಯ ಮೂಲಕವೇ. ಆಗ ನಾನು ಅಂಚೆ ಮತ್ತು ತಂತಿ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದೆ. ಅಲ್ಲಿನ ನನ್ನ ಸಹೋದ್ಯೋಗಿಯಿಂದಾಗಿ ಪರಿಚಯವಾದ ಪತ್ರಕರ್ತೆ ಗಾಯತ್ರಿ ದೇವಿ, ನಂತರ ನನ್ನ ಮತ್ತು ಮಾಲತಿಯ ಗೆಳೆತನಕ್ಕೂ ಕಾರಣಳಾದಳು. ಈ ಜಾಥಾಗಳ ಭಾಗವಹಿಸುವಿಕೆಯ ಜೊತೆಗೆ, ಸಾಹಿತ್ಯದ ವಿದ್ಯಾರ್ಥಿನಿಯಾಗಿದ್ದ ನನ್ನನ್ನು ಸಮುದಾಯ ವಾರ್ತಾಪತ್ರ ಮತ್ತು ಮಹಿಳಾ ಸಂಘಟನೆಯವರೆಗೂ ಕೈಹಿಡಿದು ನಡೆಸಿದ್ದು ಮಾಲತಿಯೇ.

ಮಾಲತಿ ನನಗೆ ಪರಿಚಯವಾಗುವ ವೇಳೆಗಾಗಲೇ ಅವರಿಗೆ ಮದುವೆಯಾಗಿತ್ತು. ಸಮುದಾಯದ ಪ್ರಸನ್ನ ಅವರನ್ನು ಮದುವೆಯಾಗಿದ್ದ ಮಾಲತಿ ನರಸಿಂಹರಾಜ ಕಾಲೊನಿಯ ಅಂಗಡಿ ಬೀದಿಯಲ್ಲಿದ್ದ ಮನೆಯಲ್ಲಿ ವಾಸವಾಗಿದ್ದರು. ಅವರ ಮನೆ ಹಲವಾರು ಸಾಮಾಜಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರ ಸ್ಥಾನವಾಗಿತ್ತು. ಸಮುದಾಯ ಸಂಘಟನೆ ನಾಟಕ ಚಟುವಟಿಕೆಯ ಜೊತೆಗೆ ವಿಶಾಲವಾದ ಸಾಂಸ್ಕೃತಿಕ ಚಳುವಳಿಯಾಗಿತ್ತು. ದಲಿತ ಚಳುವಳಿ, ರೈತ ಚಳುವಳಿ, ಮಹಿಳಾ ಚಳುವಳಿ ತೀವ್ರ ಸ್ವರೂಪವನ್ನು ಪಡೆದಿದ್ದ ಕಾಲವದು. ಇಂದು ಪ್ರಸಿದ್ಧರಾಗಿರುವ ವಂದನಾ ಶಿವ, ಗೀತಾ ಹರಿಹರನ್, ಜಾನಕಿ ನಾಯರ್ ಮುಂತಾಗಿ ಹಲವಾರು ಮಂದಿಯನ್ನು ನಾನು ಅಲ್ಲಿ ಮೊದಲ ಬಾರಿಗೆ ಪರಿಚಯ ಮಾಡಿಕೊಂಡೆ. ಮಾಲತಿ

**ಡಾ॥ ಎನ್. ಗಾಯತ್ರಿ**

ಮೇ ೧, ೧೯೫೨ರಲ್ಲಿ ಶಿವಮೊಗ್ಗದ ಸಾಗರದಲ್ಲಿ ಜನಿಸಿದ ಮಾಲತಿ ಸಾಗರದ ಶೇಷಗಿರಿ ಪೈ ಮತ್ತು ಉಮಾ ಪೈ ಅವರ ಮಗಳು. ಪದವಿ ಶಿಕ್ಷಣವನ್ನು ಸಾಗರದಲ್ಲ ಮುಗಿಸಿದ ನಂತರ ಮೈಸೂರು ವಿಶ್ವವಿದ್ಯಾಲಯದಿಂದ ಕನ್ನಡದಲ್ಲ ಎಂ.ಎ. ಪದವಿ ಪಡೆದು ರಂಗಭೂಮಿಯನ್ನು ತಮ್ಮ ಬದುಕಿನ ಆದ್ಯತೆಯಾಗಿ ಆಯ್ದುಕೊಂಡರು. ರಂಗಚಳುವಳಯಲ್ಲ ಪ್ರಮುಖವಾಗಿ ಹೆಸರು ಮಾಡಿದ್ದ ಸಮುದಾಯ ಜಾಥಾದಲ್ಲ ಭಾಗವಹಿಸಿದರು. ಹಾಗೆಯೇ ಸಮುದಾಯ ಹೊರತರುತ್ತಿದ್ದ 'ಸಮುದಾಯ ವಾರ್ತಾಪತ್ರ'ದ ಸಂಪಾದಕಿಯಾಗಿ ಕೆಲವು ವರ್ಷ ಕಾರ್ಯನಿರ್ವಹಿಸಿದರು. ದೆಹಲಿಯ ನ್ಯಾಷನಲ್ ಸ್ಕೂಲ್ ಆಫ್ ಡ್ರಾಮಾಕ್ಕೆ ಸೇರಿ ರಂಗ ತರಬೇತಿ ಪಡೆದು ಬಂದ ನಂತರ ಹಲವಾರು ನಾಟಕಗಳನ್ನು ನಿರ್ದೇಶಿಸಿದರು. ಐವತ್ತಕ್ಕೂ ಹೆಚ್ಚು ನಾಟಕಗಳನ್ನು ನಿರ್ದೇಶಿಸಿರುವ ಮಾಲತಿಯವರು ಹಲವಾರು ನಾಟಕಗಳು, ಸಾಕ್ಷ್ಯಚಿತ್ರ, ಧಾರಾವಾಹಿ, ಚಲನಚಿತ್ರಗಳಲ್ಲ ಅಭಿನಯಿಸಿದ್ದಾರೆ. ಕರ್ನಾಟಕ ನಾಟಕ ಅಕಾಡೆಮಿಯ ಸದಸ್ಯೆಯಾಗಿದ್ದ ಮಾಲತಿ ಕರ್ನಾಟಕ ನಾಟಕ ಅಕಾಡೆಮಿಯ ಗೌರವ ಪ್ರಶಸ್ತಿಯನ್ನು ಪಡೆದಿದ್ದರು.

ಕವಿ, ನಾಟಕಕಾರರೂ ಆಗಿದ್ದ ಮಾಲತಿ ತಮ್ಮ ಸಾಹಿತ್ಯಿಕ ಬರಹಗಳಂದ ಹೆಸರು ಮಾಡಿದ್ದರು. 'ಕ್ಷಣಿಕವಲ್ಲದ ಕ್ಷಣಗಳು', 'ಹೇಳಬೇಕೆನಿಸಿದ್ದು', 'ನನ್ನ ಪ್ರಿಯತಮನೆ ಬಾಳು', 'ಆನು ಒಲದಂತೆ ಹಾಡುವೆ', 'ಭಾವಕೋಶ'– ಇವು ಅವರ ಕವನ ಸಂಕಲನಗಳು. ಅವರ ಸ್ವಂತದ ನೋವಿನ ಅಭಿವ್ಯಕ್ತಿಯನ್ನು ಈ ಕವನಗಳಲ್ಲ ವಿಶೇಷವಾಗಿ ಕಾಣಬಹುದು. 'ಹೊಸ ದಿಕ್ಕು' ರಂಗಭೂಮಿ ಲೇಖನಗಳ ಸಂಗ್ರಹವಾಗಿದೆ. 'ಗೀತಾಂಜಲ' ನೃತ್ಯರೂಪಕವನ್ನು ರಚಿಸಿದ್ದಾರೆ. ನವಕರ್ನಾಟಕ ಪ್ರಕಾಶನವು ಅವರ ಎರಡು ನಾಟಕಗಳು, ಭೀಮ ಕಥಾನಕ, ದಲತ ಲೋಕ, ಸ್ವಪ್ನ ಸಾರಸ್ವತ, ಮೂರು ಮಕ್ಕಳ ನಾಟಕಗಳು, ಬುದ್ಧ ಹೇಳದ ಕಥೆ, ಬಲರಾಜ ಸಾಹ್ನಿ, ಭೀಷ್ಮ ಸಾಹನಿ, ಗಾಂಧಿ–ಒಂದು ಬೆಳಕು ಮುಂತಾದ ಕೃತಿಗಳನ್ನು ಪ್ರಕಟಿಸಿದ್ದಾರೆ.

ಅವರಿಂದಾಗಿಯೇ ನಾನು ಬಂಡಾಯ ಸಾಹಿತ್ಯ ಚಳುವಳಿ, ರೈತ ಚಳುವಳಿ, ದಲಿತ ಚಳುವಳಿಯ ಹಲವಾರು ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದೆ. ಬೆನ್‌ಸನ್‌ಟೌನ್‌ನಲ್ಲಿದ್ದ ಇಂಡಿಯನ್ ಸೋಷಿಯಲ್ ಇನ್ಸ್‌ಸ್ಟಿಟ್ಯೂಟ್‌ನಲ್ಲಿ ನಡೆದ ಮೂರು ದಿನಗಳ ಬಂಡಾಯ ಸಾಹಿತ್ಯ ಶಿಬಿರದಲ್ಲಿ ಭಾಗವಹಿಸಲು ನನ್ನನ್ನು ಸ್ವತಃ ಮಾಲತಿ ಕರೆದುಕೊಂಡು ಹೋಗಿದ್ದರು. ೧೯೮೨ರಲ್ಲಿ ನರಗುಂದ, ನವಲಗುಂದದಿಂದ ಬೆಂಗಳೂರಿಗೆ ಹರಿದುಬಂದ ರೈತರ ಜಾಥಾದಲ್ಲಿ ಭಾಗವಹಿಸಿದ ರೈತರಿಗೆ ತಿನ್ನಲು ನೂರಾರು ಚಪಾತಿ, ಚಟ್ನಿಗಳನ್ನು ಸಿದ್ಧಪಡಿಸುವಲ್ಲಿ ನಾವೆಲ್ಲ ಒಟ್ಟಾಗಿ ಸೇರಿಕೊಂಡಿದ್ದೆವು. ಬೆಂಗಳೂರಿನಲ್ಲಿ ಯಶವಂತಪುರದಿಂದ ಕಾರ್ಪೊರೇಷನ್‌ವರೆಗೂ ಸಾಗಿ ಬಂದ ಕಾಲ್ನಡಿಗೆಯ ಜಾಥಾದಲ್ಲಿ ಅವರೊಡನೆ ಭಾಗವಹಿಸಿದ್ದು ಈಗಲೂ ಕಣ್ಣಿಗೆ ಕಟ್ಟಿದಂತಿದೆ. ಆ ವೇಳೆಗಾಗಲೇ ಮಂಗಳೂರಿನಲ್ಲಿ ನಡೆದ ದುಡಿಯುವ ಮಹಿಳೆಯರ ಸಮ್ಮೇಳನವನ್ನು ಸಂಘಟಿಸುವುದರಲ್ಲಿ ಮಾಲತಿ ಸಕ್ರಿಯವಾಗಿ ಭಾಗವಹಿಸಿದ್ದರು. ಆ ನಂತರ ಆ ಸಮಿತಿಯ ವತಿಯಿಂದ ಬೆಂಗಳೂರಿನಲ್ಲಿ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡ ಮಾಲತಿ, ನನ್ನ ಹಲವಾರು ಗೆಳತಿಯರನ್ನು ಅದರಲ್ಲಿ ತೊಡಗಿಸಿದರು.



ಬೆಂಗಳೂರಿನ ಗೋರಿಪಾಳ್ಯ, ಮೈಸೂರು ರಸ್ತೆಯ ವಿನಾಯಕ ಥಿಯೇಟರ್ ಹಿಂಭಾಗದಲ್ಲಿ ಬೀಡಿ ಕಟ್ಟುವ ಮತ್ತು ಅಗರಬತ್ತಿ ತಯಾರಿಸುವ ಹೆಂಗಸರನ್ನು ಸಂಘಟಿಸುವ ಕಾರ್ಯದ ನೇತೃತ್ವ ಹೊತ್ತಿದ್ದ ಮಾಲತಿಯೊಂದಿಗೆ ನಾವು ಜೊತೆಗೂಡಿ ಕೆಲಸ ಮಾಡಲು ಹೋಗುತ್ತಿದ್ದೆವು. ಅವರ ಸಂಘಟನಾ ಸಾಮರ್ಥ್ಯ ಮತ್ತು ಬದ್ಧತೆಯಿಂದಾಗಿ ಅವರಿಗೆ ರಾಷ್ಟ್ರ ನಾಯಕ, ನಾಯಕಿಯರ ಪರಿಚಯ ಚೆನ್ನಾಗಿತ್ತು. ಆ ಕಾಲದಲ್ಲಿ ವರದಕ್ಷಿಣೆ ಸಾವುಗಳು ಮತ್ತು ಅತ್ಯಾಚಾರ ಪ್ರಕರಣಗಳು ದಿನನಿತ್ಯದ ಸುದ್ದಿಗಳಾಗಿದ್ದವು. ಕೋಲಾರದ ಹುಣಿಸೇಕೋಟೆಯ ಅನಸೂಯಮ್ಮನ ಮೇಲಾದ ಅತ್ಯಾಚಾರ ಪ್ರಕರಣದಿಂದ ನಾವೆಲ್ಲ ಬೆಚ್ಚಿ ಬಿದ್ದಿದ್ದೆವು. ಹಾಗೆಯೇ ಹುಣಿಸೇಕೋಟೆ ಹಳ್ಳಿಯ ಅನಸೂಯಮ್ಮನ ಮೇಲೆ ನಡೆದ ಅತ್ಯಾಚಾರ ಮತ್ತು ಅವರ ತಂದೆ ಶೇಷಗಿರಿಯಪ್ಪನ ಕೊಲೆಯನ್ನು ಪ್ರತಿಭಟಿಸಿ ಕೋಲಾರದಲ್ಲಿ ನಡೆದ ಪ್ರತಿಭಟನಾ ಮೆರವಣಿಗೆಯಲ್ಲಿ ಭಾಗವಹಿಸಲು ಮಾಲತಿ ನನ್ನನ್ನು ಕರೆದುಕೊಂಡು ಹೋಗಿದ್ದರು. ವರದಕ್ಷಿಣೆ ನಿಷೇಧ ಕಾನೂನು ಮತ್ತು ಅತ್ಯಾಚಾರ ವಿರೋಧಿ ಕಾನೂನುಗಳನ್ನು ರೂಪಿಸುವ ಪ್ರಕ್ರಿಯೆಯಲ್ಲಿ ಮಹಿಳಾ ಸಂಘಟನೆಗಳ ಅಭಿಪ್ರಾಯ ಸಂಗ್ರಹಿಸಲು ಆಗಮಿಸಿದ್ದ ಸಂಸತ್ ಸದಸ್ಯರ ಸಮಿತಿಯ ಮುಂದೆ ಹಾಜರಾಗಲು ಮಾಲತಿಯೊಂದಿಗೆ ನಾವೂ ಹೋಗಿದ್ದೆವು. ಆ ಸಭೆಯ ನಂತರ ಸಂಸತ್ ಸದಸ್ಯೆಯರಾಗಿದ್ದ ಸುಶೀಲಾ ಗೋಪಾಲನ್ ಮತ್ತು ಕನಕ್ ಮುಖರ್ಜಿಯವರನ್ನು ಭೇಟಿ ಮಾಡಿ ಅವರೊಡನೆ ಅತ್ಯಂತ ಹತ್ತಿರದಿಂದ, ಆಪ್ತವಾಗಿ ಮಾತನಾಡಲು, ನಂತರ ಅವರೊಂದಿಗೆ ಸಂಪರ್ಕವಿಟ್ಟುಕೊಳ್ಳಲು ಸಾಧ್ಯವಾಗಿಸುವಲ್ಲಿ ಮಾಲತಿಯ ಪಾತ್ರ ಅತ್ಯಂತ ಹಿರಿದು.

ಸಮುದಾಯ ವಾರ್ತಾಪತ್ರದ ಜವಾಬ್ದಾರಿ ಮತ್ತು ಮಹಿಳಾ ಸಂಘಟನೆಯ ಕೆಲಸಗಳನ್ನು ಇತರರಿಗೆ ಬಿಟ್ಟುಕೊಟ್ಟು ದೆಹಲಿಯ ನ್ಯಾಷನಲ್ ಸ್ಕೂಲ್ ಆಫ್ ಡ್ರಾಮಾದಲ್ಲಿ ತರಬೇತಿಗೆಂದು ಮಾಲತಿ ಹೊರಟು ನಿಂತಾಗ ಮಾಲತಿ ನಮ್ಮಿಂದ ನಿರೀಕ್ಷಿಸಿದ್ದು ಅಪಾರ. ದೆಹಲಿಯಲ್ಲಿದ್ದಾಗಲೂ ಸದಾ ಬೆಂಗಳೂರಿನದೇ ಚಿಂತೆಯಲ್ಲಿದ್ದ ಮಾಲತಿ ಅಲ್ಲಿಂದಲೇ ನಮಗೆ ಮಾರ್ಗದರ್ಶನ ನೀಡಿದ್ದೂ ಉಂಟು. ಹೀಗೆ ಅವರು ದೆಹಲಿಯಲ್ಲಿದ್ದಾಗಲೇ ಬೆಂಗಳೂರಿನಲ್ಲಿ ಜನವಾದಿ ಮಹಿಳಾ ಸಂಘಟನೆಯ ಸ್ಥಾಪನಾ ಸಮಾವೇಶದ ಸಿದ್ಧತೆ ನಡೆದಿತ್ತು. ಇದೇ ಸಂದರ್ಭದಲ್ಲಿ ರಜೆಗೆಂದು ಬಂದಿದ್ದ ಮಾಲತಿ ಸಮ್ಮೇಳನದ ಹಲವಾರು ಸಭೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಲ್ಲದೆ ಸಮ್ಮೇಳನದ ಸ್ಮರಣ ಸಂಚಿಕೆಯನ್ನು ಸಂಪಾದಿಸುವುದರಲ್ಲಿ ಪ್ರಮುಖ ಪಾತ್ರವಹಿಸಿದ್ದರು. ಅವರೊಂದಿಗೆ ಮಹಿಳಾ ಚಳುವಳಿಯಲ್ಲಿ ಕೆಲಸ ಮಾಡಿದ್ದ ನೆನಪು ನನಗೆ ಸದಾ ಹಸಿರಾಗಿದೆ. ಅವರ ಅಂತಃಕರಣ ತುಂಬಿದ ಸ್ನೇಹ ಮತ್ತು ಪ್ರೀತಿ ಸದಾ ಸ್ಮರಣೀಯ.

ಮದುವೆ ಹೆಣ್ಣಿನ ಬದುಕಿನಲ್ಲಿ ಮಹತ್ವದ ಘಟ್ಟ. ಅದು ಅವಳಿಗೆ ಬಂಧನವೂ ಆಗಬಹುದು, ಬಿಡುಗಡೆಯೂ ಆಗಬಹುದು. ಅತ್ಯಂತ ಸಾಂಪ್ರದಾಯಿಕ ಹಿನ್ನೆಲೆಯ ಕುಟುಂಬದಿಂದ ಬಂದ ಮಾಲತಿ ತನ್ನ ಬದುಕಿನ ನಿರ್ಧಾರಗಳನ್ನು ಅತ್ಯಂತ ಕ್ರಾಂತಿಕಾರಕವಾಗಿ ಕೈಗೊಂಡು ಅವರ ಮನೆಯವರಿಗೆ ಬೆಚ್ಚಿಬೀಳಿಸಿದ್ದೂ ಇದೆ. ಆದರೆ ನನ್ನ ಬದುಕಿನಲ್ಲಿ ಸಾಂಪ್ರದಾಯಿಕ ಕೌಟುಂಬಿಕ ಚೌಕಟ್ಟಿನಲ್ಲಿ ಬೀದಿಗಿಳಿವ ಚಳುವಳಿಯ ಚಟುವಟಿಕೆಗಳಿಗೆ ಮನೆಯಲ್ಲಿ ಸದಾ ಬೈಗಳುಗಳನ್ನು ಕೇಳಬೇಕಿತ್ತು. ಆ ಸಂದರ್ಭದಲ್ಲಿ ಮಾಲತಿ ನನ್ನ ಮದುವೆಯ ಸೂತ್ರಧಾರಿಣಿಯಾಗಿ ಕೆಲಸ ಮಾಡಿದರು. ಅಂದು ಸಮುದಾಯದಲ್ಲಿ ಸಕ್ರಿಯವಾಗಿ ತೊಡಗಿಕೊಂಡಿದ್ದ ವೆಂಕಟೇಶಮೂರ್ತಿಯವರನ್ನು ನಾನು ಮದುವೆಯಾಗಲು ಮಾಲತಿಯೇ ಕಾರಣ. ಹೌದು, ನನಗೆ ಮದುವೆ ವಿಮೋಚನೆಯ ದಾರಿಯಾಯಿತು. ನನ್ನಂತಹ ಹಲವಾರು ಮಂದಿಗೆ ಮದುವೆ ಮಾಡಿಸುವಲ್ಲಿ ಸಫಲಳಾದ ಮಾಲತಿಗೆ ಅವಳ ಮದುವೆ ಶಾಪವಾಯಿತು. ಮುರಿದು ಬಿದ್ದ ಅವಳ ವೈವಾಹಿಕ ಬದುಕು ಅವಳ ಚೈತನ್ಯವನ್ನೇ ಉಡುಗಿಸಿತು. ಉಟ್ಟ ಬಟ್ಟೆಯಲ್ಲಿ ಮನೆ ಬಿಟ್ಟು ನಮ್ಮ ಮನೆಗೆ ಬಂದ ಮಾಲತಿ ಅನುಭವಿಸಿದ ನೋವು, ಹತಾಶ ಸ್ಥಿತಿ ವಿವರಿಸುವುದು ತುಂಬ ಕಷ್ಟವಾಗುತ್ತದೆ. ನಂತರದ ದಿನಗಳಲ್ಲಿ ಅವರು ಎದುರಿಸಿದ ಕಷ್ಟಗಳು ಅವರ ಸೃಜನಶೀಲತೆಯನ್ನು ಸುರುಟುವಂತೆ ಮಾಡಿತು. ಒಬ್ಬಂಟಿಯಾಗಿ ಬೆಂಗಳೂರಿನಲ್ಲಿ ಇದ್ದಾಗಲೂ ಅವರು ನೋವಿನಿಂದ ಕೊಡವಿಕೊಂಡು ರಂಗಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ಪ್ರಯತ್ನಿಸಿದರು. "ಕೆರೆಗೆ ಹಾರ" ಮತ್ತು ವಾಸಂತಿ (ಇಬ್ಸನ್‌ನ ಡಾಲ್ಸ್ ಹೌಸ್) ನಾಟಕದ ನಿರ್ದೇಶನ ಮತ್ತು ಅಭಿನಯದಲ್ಲಿ ತೊಡಗಿಕೊಂಡರು.

ಬೆಂಗಳೂರಿನಲ್ಲಿ ಭಗ್ನಗೊಂಡ ವಿವಾಹದ ನಂತರದ ಕೆಲವು ವರ್ಷಗಳನ್ನು ನೋವು ಮತ್ತು ಹತಾಶೆಯಿಂದ ಕಳೆದ ಮಾಲತಿ ತಮ್ಮ ಹುಟ್ಟೂರಾದ ಸಾಗರಕ್ಕೆ ತೆರಳಿದರು. ಮಮತಾಮಯಿ ತಾಯ್ತಂದೆಯರ ಮತ್ತು ಪ್ರೀತಿಪಾತ್ರ ಒಡಹುಟ್ಟಿದವರ ಪ್ರೀತಿ, ವಿಶ್ವಾಸಗಳು ಅವರಿಗೆ ಹೊಸ ಜೀವ ಕೊಟ್ಟಿತು. ಅವರ ನೋವಿಗೆ ಮುಲಾಮಾದವರು ಅವರನ್ನು ಮದುವೆಯಾದ ರಂಗಕರ್ಮಿ ಪುರುಷೋತ್ತಮ ತಲವಾಟ. ಸಾಗರದಲ್ಲಿ ಅವರ ಸೃಜನಶೀಲ ಚಟುವಟಿಕೆಗಳು ಮತ್ತೆ ಗರಿಗೆದರಿದವು. ಪ್ರಜ್ಞಾ ರಂಗ ತಂಡ ಕಟ್ಟಿ ಅದರ ಅಧ್ಯಕ್ಷರಾಗಿ ಕೆಲಸ ಮಾಡಿದರು. ನಂತರ 'ಅಂತರಂಗ ಟ್ರಸ್ಟ್' ಎಂಬ ರಂಗತಂಡವನ್ನು ಕಟ್ಟಿ ಅದರ ಮೂಲಕ ರಂಗ ಚಟುವಟಿಕೆ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಿದರು.

"ಸಾಂಸ್ಕೃತಿಕ ಸಂಘಟನೆಗಳು ಸಂಬಂಧಗಳನ್ನು ಬೆಸೆಯಬೇಕು, ಸಾಮರಸ್ಯವನ್ನು ಮೂಡಿಸಬೇಕು. ಕಲಾವಿದನ ಬದ್ಧತೆ ಕಲೆಗೆ ಎಷ್ಟು ಬದ್ಧವೋ ಅದಕ್ಕಿಂತ ಹೆಚ್ಚು ಆತನ ಬದ್ಧತೆ ಸಮಾಜಕ್ಕೆ ಇರಬೇಕು" ಎಂದು ಸದಾ ಹೇಳುತ್ತಿದ್ದ ಮಾಲತಿ ಅದನ್ನು ಅಕ್ಷರಶಃ ತಮ್ಮ ಬಾಳಿನಲ್ಲಿ ಬದುಕಿ ತೋರಿಸಿದವರು. ಅವರೊಂದು ವಿಶಾಲವಾದ ಅಂತಃಕರಣದ ಸಾಗರವಾಗಿದ್ದರು. ಅವರ ಸನಿಹಕ್ಕೆ ಬಂದವರೆಲ್ಲರನ್ನೂ ನಿರ್ವಾಜ್ಯ ಪ್ರೇಮದಿಂದ ಕಂಡು ಅಕ್ಕರೆ ತೋರಿಸಿದರು. ಅವರ ಪ್ರೀತಿಯಿಂದ ಮಿಂದೆದ್ದವರಿಗೆ ಮಾತ್ರ ಅವರ ವ್ಯಕ್ತಿತ್ವ ಅರ್ಥವಾಗಲು ಸಾಧ್ಯ. ಅಂತಹ ಅವಕಾಶ ನನಗೆ ಸಿಕ್ಕಿತೆನ್ನುವುದೇ ನನಗೆ ಹೆಚ್ಚುಗಾರಿಕೆ.

ಮಾಲತಿ ಸಾಗರ ಸೇರಿದ ಮೇಲೂ ಅವರನ್ನು ನಿಯತವಾಗಿ ಭೇಟಿ ಮಾಡುತ್ತಲೇ ಇದ್ದೆ. ಅವರ ಪ್ರೀತಿಪಾತ್ರ ತಮ್ಮಂದಿರು ಮತ್ತು ಸಹೃದಯಿ ಸಂಗಾತಿ ಪುರುಷೋತ್ತಮ ಅವರ ಸ್ನೇಹವನ್ನೂ ಸವಿಯುವ ಭಾಗ್ಯ ನನಗೆ ಹಲವಾರು ಬಾರಿ ಸಿಕ್ಕಿದೆ. ಸಾಗರಕ್ಕೆ ಹೋದಾಗ ಮಾಲತಿಯನ್ನು ನೋಡದೆ ಎಂದೂ ಬಂದಿಲ್ಲ. ಇನ್ನು ಮುಂದೆ ಸಾಗರಕ್ಕೆ ಹೋದರೆ ಮಾಲತಿ ಒಂದು ನೆನಪು ಮಾತ್ರ ಎಂಬುದನ್ನು ನೆನೆದಾಗ ನೋವಾಗುತ್ತದೆ.

**ಡಾ|| ಎನ್. ಗಾಯತ್ರಿ**
೨೦೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್, ಕೆಂಪೇಗೌಡ ನಗರ, ಗವೀಪುರಂ, ಬೆಂ. ೧೯


Lunch box Fiber 8"x9"x7"

# ಮಹಾಂತೇಶ ಪಲದಿನ್ನಿಯವರ ಜನಪದ ಪ್ರಭಾವಗಳ ಆಧುನಿಕ ಶಿಲ್ಪಗಳು



ಆಧುನಿಕ ಶಿಲ್ಪಕಲೆಯು ನಮ್ಮ ಸಾಂಪ್ರದಾಯಿಕ ಚೌಕಟ್ಟಿನಾಚೆಗೆ ತನ್ನ ಆಯಾಮಗಳನ್ನು ವಿಸ್ತರಿಸಿ ಕೊಂಡಿದೆ. ವಸ್ತು, ಮಾಧ್ಯಮ, ರೂಪ, ಅಭಿವ್ಯಕ್ತಿ ಕ್ರಮಗಳಲ್ಲಿ ಸಾಕಷ್ಟು ಹೊಸತನಗಳನ್ನು ಮಹಾಂತೇಶ ಪಲದಿನ್ನಿಯವರಂತಹ ಯುವ ಶಿಲ್ಪಿಗಳು ತೋರ್ಪಡಿಸಿರುವರು. ಕಲ್ಲು ಮತ್ತು ಫೈಬರ್ ಮಾಧ್ಯಮಗಳಲ್ಲಿ ಗಮನಾರ್ಹ ಶಿಲ್ಪಕಲಾಕೃತಿಗಳನ್ನಿವರು ರಚಿಸಿರುವರು. ಕಲ್ಲಿನಲ್ಲಿ ಖಂಡರಿಸಿದ ಗ್ರೋಥ್, ರಿಲ್ಯಾಕ್ಸ್, ತಾಯಿ ಮಗು ಶಿಲ್ಪಗಳು ಸೊಗಸಾದ ಸೃಷ್ಟಿಗಳಾಗಿವೆ. ಫೈಬರ್ ಮಾಧ್ಯಮದಲ್ಲಿ ರಚಿಸಿರುವ ಕುಟುಂಬ, ಆಸೆ, ನೇಚರ್‌ನಂತಹ ಶಿಲ್ಪಗಳು ಆಶಯ, ನಿರ್ವಹಣೆಗಳಲ್ಲದೆ ಮೈವಳಿಕೆಯಿಂದಲೂ ಮುದ ನೀಡುತ್ತವೆ. ಇವರ ಅತ್ಯಂತ ಸೃಜನಶೀಲ ಶಿಲ್ಪ 'ಬುತ್ತಿ' ಶೀರ್ಷಿಕೆಯದು. ಶ್ರಮಸಂಸ್ಕೃತಿಯ ಜನಪದರ ಬದುಕಿನಲ್ಲಿ ಹಾಸುಹೊಕ್ಕಾಗಿರುವ ಈ 'ಬುತ್ತಿ' ಕೇವಲ ಊಟದ ಗಂಟಲ್ಲ! ಅನೇಕ ಜನಪದ ಕವಿಗಳು, ಅನುಭಾವಿಗಳ ಸೃಷ್ಟಿಯಲ್ಲೂ 'ಬುತ್ತಿ' ವಿಶೇಷ ನೆಲೆಗೆ ಏರಿದೆ. ಇದೀಗ ಸಂಸ್ಕೃತಿ ಪಲ್ಲಟದ ಗಾಳಿಗೆ ಸಿಲುಕಿ 'ಬುತ್ತಿ' ಅಪರೂಪವಾಗುತ್ತಿದೆ. ಅಂತೆಯೇ ಮಹಾಂತೇಶನ ಸೃಜನಶೀಲ ಭಾವದೃಷ್ಟಿಗೆ ಸಿಲುಕಿ ಕಲಾಕೃತಿಯಾಗಿ ರೂಪುತಳೆದಿದೆ. 'ಬುತ್ತಿ ತಗೊಂಡು ಹೋಗ್ತೀನಿ ಹೊಲಕ......' ಹುಕ್ಕೇರಿ ಬಾಳಪ್ಪನ ಈ ಹಾಡು ಕೇಳಿದವರು ಮನನ ಮಾಡಬಹುದು.

ಮೂಲತಃ ವಿಜಯಪುರದವರಾದ ಮಹಾಂತೇಶ 'ಚಾಲುಕ್ಯ ಶಿಲ್ಪಕಲೆ'ಯಲ್ಲಿ ಪಿಎಚ್.ಡಿ. ಮಾಡಿದ್ದು, ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ಬಾದಾಮಿ ಶಾಖೆಯಾದ ಶಿಲ್ಪ ಮತ್ತು ವರ್ಣಚಿತ್ರಕಲೆ ವಿಭಾಗದಲ್ಲಿ ಶಿಲ್ಪಕಲೆ ಕಲಿಸುತ್ತಿರುವರು.

– ಡಾ. ಶಿವಾನಂದ ಎಚ್. ಬಂಟನೂರ
ಕನ್ನಡ ವಿಶ್ವವಿದ್ಯಾಲಯ, ಹಂಪಿ


Title- UnTitle Media- Stone Size- 9"x12"


Title- Head Media- Stone Size- 12"x10"


Title- Untitle Media- Stone Size- 10"x7"


Mother & Child Fiber 12"x5"x6"


Meditation Fiber 13"x8"x10"


Origination Stone 12"x6"x6"

Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

